


ಕನಕದಾಸ ಸಂಶೋಧನ ಕೇಂದ್ರ, ಮಂಗಳೂರು ವಿಶ್ವವಿದ್ಯಾನಿಲಯ

# ಕನಕದಾಸರ ಕೀರ್ತನೆಗಳ ಶಬ್ದ - ಪ್ರಯೋಗ ಕೋಶ



ಸಂಪಾದಕರು
ಡಾ. ಶ್ರೀನಿವಾಸ ಹಾವನೂರ
ವಿ. ಕೃಷ್ಣ



ಸಂಪಾದನೆ ಮತ್ತು ಮುದ್ರಣದ ವಿವಿಧ ಹಂತಗಳಲ್ಲಿ
ನಮ್ಮ ಜೊತೆ ಸಮಾಲೋಚನೆಯಲ್ಲಿ ಭಾಗಿಯಾಗಿದ್ದ ಹಾವನೂರರು
ಕೃತಿ ಬಿಡುಗಡೆಯ ಹೊತ್ತಲ್ಲಿ ನಮ್ಮ ಜೊತೆಗೆ ಇಲ್ಲದಿರುವುದು ನೋವನ್ನುಂಟುಮಾಡಿದೆ.
ಬದುಕಿನ ಕೊನೆಯ ಕ್ಷಣದವರೆಗೂ ನಿರಂತರವಾಗಿ ಕ್ರಿಯಾಶೀಲರಾಗಿದ್ದ
ಹಾವನೂರರನ್ನು ಗೌರವದಿಂದ ನೆನಪಿಸಿಕೊಳ್ಳುತ್ತೇವೆ

# ಕನಕದಾಸರ ಕೀರ್ತನೆಗಳ
# ಶಬ್ದ - ಪ್ರಯೋಗ ಕೋಶ

ಸಂಪಾದಕರು
ಡಾ. ಶ್ರೀನಿವಾಸ ಹಾವನೂರ
ಎ. ಕೃಷ್ಣ



ಕನಕದಾಸ ಸಂಶೋಧನ ಕೇಂದ್ರ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ

**KANAKADASARA KEERTHANEGALA SHABDA-PRAYOGA KOSHA**
(A Concordance of Kanakadasa's Keerthana)

Edited by :
**Dr. Shrinivasa Havanoora**
63, South Cross
Basavanagudi, Bangalore - 560 004

**V. Krishna**
'Sri Sharade'
No. 7 (18), 3rd Cross
S.V.G. Nagar, Moodalapalya
Bangalore - 560 072

Published by :
**Kanakadasa Research Centre**
Mangalore University
Mangalagangothri - 574 199, Karnataka
Tel. : 0824 - 2284360

ಮೊದಲ ಮುದ್ರಣ : 2010

ಪುಟಗಳು : 864

ಪ್ರತಿಗಳು : 1000

ಬೆಲೆ : ರೂ. 275-00



ಮುಖಪುಟ ವಿನ್ಯಾಸ : ಕಲ್ಲೂರು ನಾಗೇಶ

ಪುಟವಿನ್ಯಾಸ ಮತ್ತು ಮುದ್ರಣ
**ಆಕೃತಿ ಪ್ರಿಂಟ್ಸ್**
ಕೆ.ಎಸ್. ರಾವ್ ರಸ್ತೆ, ಮಂಗಳೂರು – 575 001
ದೂರವಾಣಿ : 0824 2443002

# ಕುಲಪತಿಯವರ ಮಾತುಗಳು

ಕನ್ನಡದ ಹಿರಿಯ ವಿದ್ವಾಂಸರಾಗಿರುವ ಪ್ರೊ. ಶ್ರೀನಿವಾಸ ಹಾವನೂರ ಹಾಗೂ ಶ್ರೀ ವಿ. ಕೃಷ್ಣ ಇವರು ಸಂಪಾದಿಸಿರುವ ಕನಕದಾಸರ ಕೀರ್ತನೆಗಳ ಶಬ್ದ-ಪ್ರಯೋಗ ಕೋಶ ಮಂಗಳೂರು ವಿಶ್ವವಿದ್ಯಾನಿಲಯದ ಕನಕದಾಸ ಸಂಶೋಧನ ಕೇಂದ್ರದ ವತಿಯಿಂದ ಪ್ರಕಟಗೊಳ್ಳುತ್ತಿರುವುದು ವಿಶ್ವವಿದ್ಯಾನಿಲಯಕ್ಕೆ ಗೌರವ ತಂದುಕೊಡುವ ಸಂಗತಿ ಎಂದು ನಾನು ತಿಳಿದಿದ್ದೇನೆ.

ಪ್ರೊ. ಹಾವನೂರ ಮತ್ತು ಮಂಗಳೂರು ವಿಶ್ವವಿದ್ಯಾನಿಲಯದ ನಡುವೆ ಏರ್ಪಟಿದ್ದ ಹಳೆಯ ನಂಟು ಈ ಪ್ರಕಟಣೆಯ ಮೂಲಕ ಮತ್ತೊಮ್ಮೆ ನೆನಪಿಸುವಂತೆ ಆಗಿರುವುದು ತುಂಬಾ ಸಂತೋಷವನ್ನುಂಟುಮಾಡುತ್ತಿದೆ. ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಿಂದ ೩೦ ಸಂಪುಟ ಗಳಲ್ಲಿ ಸಮಗ್ರ ದಾಸ ಸಾಹಿತ್ಯದ ಸಂಪಾದನೆಯನ್ನು ಬಹಳ ಯೋಗ್ಯವಾಗಿ ನಿರ್ವಹಿಸಿರುವ ಹಾವನೂರರು ಕನಕದಾಸರ ಕೀರ್ತನೆಗಳ ಶಬ್ದ-ಪ್ರಯೋಗ ಕೋಶವನ್ನು ವಿಶ್ವವಿದ್ಯಾನಿಲಯದ ಕನಕದಾಸ ಸಂಶೋಧನ ಕೇಂದ್ರದಿಂದ ಪ್ರಕಟಿಸಲು ಸಮ್ಮತಿಯನ್ನು ನೀಡಿರುವುದಕ್ಕೆ ವಿಶ್ವಾಸಪೂರ್ವಕವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಕನಕದಾಸ ಅಧ್ಯಯನ ಪೀಠ ಮತ್ತು ಸಂಶೋಧನ ಕೇಂದ್ರದ ಸಂಶೋಧನಾ ಯೋಜನೆಗಳಿಗೆ ಈ ಗ್ರಂಥವು ಆಕರ ಹಾಗೂ ಪರಾಮರ್ಶನ ಗ್ರಂಥವಾಗಿ ಮಹತ್ತ್ವವನ್ನು ಪಡೆಯಬಹುದೆಂದು ಆಶಿಸುತ್ತೇನೆ.

**ಪ್ರೊ. ಟಿ.ಸಿ. ಶಿವಶಂಕರಮೂರ್ತಿ**
ಕುಲಪತಿಗಳು
ಮಂಗಳೂರು ವಿಶ್ವವಿದ್ಯಾನಿಲಯ

# ನೆನವರಿಕೆ

ಕನಕದಾಸರ ಈ ಕೋಶರಚನೆಯಲ್ಲಿ ಜೊತೆಗಾರರಾದ ಶ್ರೀ ವಿ. ಕೃಷ್ಣರ ಬಗ್ಗೆ ಪ್ರತ್ಯೇಕವಾಗಿ ಹೇಳಬೇಕಾದ ಒಂದೆರಡು ವಿಷಯಗಳಿವೆ. ಅವರು ಅಪ್ರತಿಮ ಕೋಶಕಾರರು. ಕಳೆದ ಇಪ್ಪತ್ತು ವರುಷಗಳಿಂದ ಅವರು ಕಿಟೆಲ್ ಮಾದರಿಯ ಕನ್ನಡ – ಇಂಗ್ಲಿಷ್ ಕೋಶವನ್ನು ಸಿದ್ಧಪಡಿಸುವುದರಲ್ಲಿ ಪೂರ್ಣಾವಧಿ ತೊಡಗಿಕೊಂಡು ಈಚೆಗೆ ಮುಗಿಸಿದ್ದಾರೆ. ಕಿಟೆಲರು ೭೦ ಸಾವಿರಕ್ಕೂ ಮೇಲ್ಪಟ್ಟು ಕನ್ನಡ ಬಳಕೆಯ ಶಬ್ದಗಳ ಅರ್ಥ, ವ್ಯುತ್ಪತ್ತಿ, ಪ್ರಯೋಗಾದಿಗಳನ್ನು ಕೊಟ್ಟಿದ್ದಾರೆ. ಬಹು ದೊಡ್ಡ ಕಾರ್ಯಸಾಧನೆ; ಹೌದು. ಆದರೂ ಅಪೂರ್ಣ ಎಂಬುದು ಕಿಟೆಲ್ ಆದಿಯಾಗಿ ಎಲ್ಲರಿಗೂ ಗೊತ್ತು. ವಿ. ಕೃಷ್ಣರ ಕೋಶವು ೧ ಲಕ್ಷ ೬೦ ಸಾವಿರ ಶಬ್ದಗಳನ್ನೊಳಗೊಂಡಿದೆ. ಕಿಟೆಲ್ ಸಾಧಿತ ಪದಗಳನ್ನು ಒಂದೇ ನಮೂದಿನಲ್ಲಿ ಕೊಟ್ಟಿದ್ದನ್ನು ಇವರು ಪ್ರತ್ಯೇಕಿಸಿ ಅರ್ಥ ಹೇಳಿದ್ದಾರೆ. ಪರಿಷತ್ತಿನ ಕನ್ನಡ ಕೋಶದಿಂದಲೂ, ಕಿಟೆಲ್ ಹೇಳಿರದ ಶಬ್ದಗಳನ್ನು ಎತ್ತಿಕೊಂಡು ಸೇರಿಸಿದ್ದಾರೆ. ಅಲ್ಲದೆ ಅರ್ಥ ವಿವರಣೆಯಲ್ಲಿ ಇವರದು ವಿಸ್ತಾರವಾದದ್ದು. ಈ ಬೃಹತ್ ಕೋಶ ಪ್ರಕಟವಾದಾಗ ಮೊನಿಯರ್ – ವಿಲಿಯಮ್ಸ್‌ನ ಸಂಸ್ಕೃತ – ಇಂಗ್ಲಿಷ್ ಕೋಶಕ್ಕೆ ಸಮಾನವಾಗಿ ನಿಲ್ಲಬಹುದು.

ಶ್ರೀ ವಿ. ಕೃಷ್ಣರು ಕಂಪ್ಯೂಟರ್ ಶಾಸ್ತ್ರಜ್ಞರೂ ಅಹುದು. ಕನಕದಾಸರ ಈ ಶಬ್ದ–ಪ್ರಯೋಗ ಕೋಶವನ್ನು ಕಂಪ್ಯೂಟರಿಗೆ ಅಳವಡಿಸಿ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡು ತಪ್ಪಿಲ್ಲದಂತೆ ಶ್ರದ್ಧೆಯಿಂದ ಮಾಡಿದ್ದಾರೆ. ಸಂಪಾದಕೀಯ ಕೆಲಸದಲ್ಲಿಯೂ ಸಾಕಷ್ಟು ಜೊತೆಗೂಡಿದ್ದಾರೆ.

ಕನ್ನಡದಲ್ಲಿ ಕಂಪ್ಯೂಟರ್ ಆಸರೆಯಿಂದ ಮೊದಲ ಬಾರಿಗೆ ಸಿದ್ಧವಾದ concordanceಗೆ ಪ್ರೇರಣೆ ಇತ್ತವರು ಮಂಗಳೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ. ಕೆ.ಎಂ. ಕಾವೇರಿಯಪ್ಪನವರು. ಅವರು ನನ್ನ ಆತ್ಮೀಯ ಬಳಗದಲ್ಲಿ ಮಾನ್ಯರಾಗಿ ಇದ್ದವರು. ಅಲ್ಲಿಯ ಕನಕದಾಸ ಸಂಶೋಧನ ಕೇಂದ್ರದ ಸಂಯೋಜಕರಾದ ಡಾ. ಬಿ. ಶಿವರಾಮ ಶೆಟ್ಟಿ ಯವರಂತೂ, ನಾನು ಅಲ್ಲಿಯ ಕನ್ನಡ ವಿಭಾಗದಲ್ಲಿದ್ದಾಗ, ನನ್ನ ಸನಿಹದ ಸಹೋದ್ಯೋಗಿಗಳಾಗಿದ್ದವರು. ಅವರು ಈ ಕೋಶದ ಪ್ರಕಟಣೆಯಲ್ಲಿ ಪೂರ್ಣತಃ ಸಹಭಾಗಿಗಳಾದದ್ದು ನನಗೆ ಖುಶಿ ಕೊಟ್ಟಿದೆ. ಈ ಮೂವರನ್ನು ಇಲ್ಲಿ ಆತ್ಮೀಯತೆಯಿಂದ ನೆನೆಯುವೆ.

ಡಿಸೆಂಬರ್, ೨೦೦೯ ಡಾ. ಶ್ರೀನಿವಾಸ ಹಾವನೂರ
ಬೆಂಗಳೂರು

# ಕೃತಿ ಪರಿಚಯ

"ಶಬ್ದ – ಪ್ರಯೋಗ ಕೋಶ" (Concordance) ಎಂದರೆ ಗ್ರಂಥವೊಂದರಲ್ಲಿಯ ನಿರ್ದಿಷ್ಟ ಶಬ್ದಗಳನ್ನು, ಆ ಗ್ರಂಥದಲ್ಲಿ ಅವು ಕಾಣಿಸಿಕೊಂಡ ಪ್ರಯೋಗ ವಾಕ್ಯಗಳ ಸಹಿತವಾಗಿ, ಅಕಾರಾದಿ ಕ್ರಮದಲ್ಲಿ ಕೊಡುವುದು. ಬರಿಯೆ ಶಬ್ದಗಳನ್ನು ಮಾತ್ರ ಪಟ್ಟಿ ಮಾಡಿದರೆ ಅದು ಶಬ್ದಸೂಚಿ (Word Index) ಎನಿಸಿಕೊಳ್ಳುತ್ತದೆ. ಆದರೆ ಅದು ಪ್ರಯೋಗವಾದ ವಾಕ್ಯದ ಸಹಿತವಾಗಿ ಕೊಟ್ಟರೆ ಅದು ಶಬ್ದ – ಪ್ರಯೋಗ ಎನಿಸಿಕೊಳ್ಳುತ್ತದೆ.

ಕನಕದಾಸರ ಕೀರ್ತನೆಯೊಂದರ ಸಾಲನ್ನು ಉದಾಹರಣೆಗಾಗಿ ನೋಡೋಣ.

ಸಾಲು : **ಹಸಿದವರಿಗನ್ನವಿಕ್ಕದವಗೆ ಆಮ್ಲಪಿತ್ತ**
**ಹಸಿದವರಿಗೆ** : ಹಸಿದವರಿಗನ್ನವಿಕ್ಕದವಗೆ ಆಮ್ಲಪಿತ್ತ
**ಅನ್ನ** : ಹಸಿದವರಿಗನ್ನವಿಕ್ಕದವಗೆ ಆಮ್ಲಪಿತ್ತ
**ಇಕ್ಕು** : ಹಸಿದವರಿಗನ್ನವಿಕ್ಕದವಗೆ ಆಮ್ಲಪಿತ್ತ
**ಆಮ್ಲಪಿತ್ತ** : ಹಸಿದವರಿಗನ್ನವಿಕ್ಕದವಗೆ ಆಮ್ಲಪಿತ್ತ

ಮೇಲಣ ನಾಲ್ಕೂ ಶಬ್ದಗಳು ಇಡೀ ಕಾವ್ಯದಲ್ಲಿ ಎಲ್ಲೆಲ್ಲಿ ಬರುವವೋ, ಅವೆಲ್ಲ ಒಂದೇ ಕಡೆಗೆ ಬರುತ್ತವೆ. ಇವುಗಳಲ್ಲಿಯ 'ಅನ್ನ' ಶಬ್ದವು ಯಾವ ಯಾವ ಕೀರ್ತನೆಯ ಸಾಲುಗಳಲ್ಲಿ ಬರುತ್ತದೆಯೋ – ಅದರ ಪ್ರಯೋಗವನ್ನು ನೋಡೋಣ:

೧) ಅನ್ನ ತುಪ್ಪವಿರಲಿಕ್ಕೆ ಮದ್ಯಪಾನಗಳೇಕೆ
(ಕೀರ್ತನೆಯ ಮೊದಲು ಸಾಲು – ಮರೆಯದಿರು ಮರೆಯದಿರು)
೨) ಅನ್ನ ವಸ್ತ್ರ ಭೋಗಿಯಾಗಿ ತನ್ನ ಸುಖವ ಕಾಣಲಿಲ್ಲ
(ಕೀ: ಡಿಂಬನೊಳು ಪ್ರಾಣವಿರಲು)
೩) ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ
(ಕೀ – ಬಂದೆವಮ್ಮ ಗೋವಿಂದ ಶೆಟ್ಟಿ)
೪) ಷಡುರಸದನ್ನಕೆ ನಲಿದಾಡುವ ಜಿಹ್ವೆ ಕಡು ರುಚಿಗೊಂಡರಾರುಚಿ ನಿನ್ನದಯ್ಯ
(ಕೀ – ತನು ನಿನ್ನದು ಜೀವನ ನಿನ್ನದು)
೫) ಹಸಿದವರಿಗನ್ನವಿಕ್ಕದವಗೆ ಆಮ್ಲಪಿತ್ತ
(ಕೀ – ಧರ್ಮವೆಂದೆನಿಪ ಮಾರ್ಗವನು ಬಿಟ್ಟು).

ಇಲ್ಲಿಯ (೧) ಮತ್ತು (೨)ರಲ್ಲಿ ನಿತ್ಯದ ಬದುಕಿನ ಟೀಕೆ ಇದ್ದರೆ, (೩)ನೆಯದರಲ್ಲಿ ತಿರುಪತಿಯ ವೆಂಕಪ್ಪನ ಮೇಲೆ ನಗೆಚಾಟಿಕೆಯ ಮಾತಿದೆ. (೪)ನೆಯದರಲ್ಲಿ ತನ್ನದೆಲ್ಲವನ್ನೂ ದೇವರಿಗೆ ಸಮರ್ಪಿಸುವ ಭಾವವಿದೆ. (೫)ನೆಯದರಲ್ಲಿ ನೀತಿ–ಬೋಧೆ ಇದೆ. ಹೀಗೆ 'ಅನ್ನ' ಎನ್ನುವ ಸಾದಾ ಬಳಕೆಯ ಶಬ್ದ ಕನಕದಾಸರಲ್ಲಿ ಅದೆಂತು ವೈವಿಧ್ಯಮಯವಾಗಿದೆ ಯೆಂಬುದನ್ನು ಗಮನಿಸುವುದು.

ಮೊದಲಲ್ಲಿ ತಿಳಿಯಬೇಕಾದದ್ದೆಂದರೆ, ಶಬ್ದ – ಪ್ರಯೋಗ ಕೋಶದ ರಚನೆಯು ತುಂಬಾ ಶ್ರಮದಾಯಕವಾದ ಹಾಗೂ ಬಹು ಸಮಯವನ್ನು ಬೇಡುವ ಕೆಲಸವಾಗಿದೆ. ಅಲ್ಲದೆ, ಇದರಲ್ಲಿ ತಪ್ಪುಗಳೇನೂ ಇಲ್ಲದಂತೆ ನೋಡಿಕೊಳ್ಳುವುದು ದುಸ್ಸಾಧ್ಯ. ೧೩ನೆಯ

ಶತಮಾನದಷ್ಟು ಹಿಂದೆ, Vulgate Bible ಎಂಬ ಬೃಹತ್ ಗ್ರಂಥದ Concordance ಸಿದ್ಧವಾದಾಗ ಅದರ ತಯಾರಿಕೆಗೆ ೫೦೦ ಜನ ಪಾದ್ರಿಗಳು ಕೆಲಸ ಮಾಡಿದರಂತೆ. ರಬ್ಬಿ ನಾಥನ್ ಎಂಬಾತ ಹಿಬ್ರೂ ಭಾಷೆಯ ಬೈಬಲಿನ ಶಬ್ದ - ಪ್ರಯೋಗ ಕೋಶವನ್ನು ತಯಾರಿಸಲು ಹತ್ತು ವರ್ಷ ಏಕಪ್ರಕಾರವಾಗಿ ದುಡಿದನಂತೆ (೧೪೮೮), ಆದರೆ ಯಾವುದೊಂದು ಕೃತಿಯು ಆಳವಾದ ಅಭ್ಯಾಸಕ್ಕೆ ಇಂಥ ಶಬ್ದ - ಪ್ರಯೋಗ ಕೋಶವು ಅನಿವಾರ್ಯವೆಂದು ಮನಗಂಡ ಇಂಗ್ಲಿಷ್ ಸಾಹಿತ್ಯಾಭ್ಯಾಸಿಗಳು ಕೀಟ್ಸ್, ಬೈರನ್ ಮೊದಲಾದ ಕವಿಗಳ ಸಮಗ್ರ ಪದ್ಯಗಳಿಗೆ ಶಬ್ದ-ಪ್ರಯೋಗ ಕೋಶವನ್ನು ರಚಿಸತೊಡಗಿದರು. ಈ ಕೆಲಸ ತಾಪದಾಯಕವಾದದ್ದ ರಿಂದ ಓರ್ವ ವಿಮರ್ಶಕ "concordance ರಚಿಸುವ ಕಷ್ಟ ನನ್ನ ವೈರಿಗಳಿಗೂ ಬರುವುದು ಬೇಡ" ಎಂದು ತನ್ನ ಪೀಠಿಕೆಯಲ್ಲಿ ಉದ್ಗಾರವೆತ್ತಿದ್ದಾನೆ.

ಯಾವಾಗ ಕಂಪ್ಯೂಟರಿನ ಆವಿರ್ಭಾವವಾಯಿತೋ ಶಬ್ದ - ಪ್ರಯೋಗ ಕೋಶದ ಎತ್ತುಗಡೆಯು ಗಣನೀಯ ರೀತಿಯಲ್ಲಿ ಸುಲಭಗೊಂಡಿತು. ಯಾವದೊಂದು ಕೃತಿಯ ಪಠ್ಯವನ್ನು ಕಂಪ್ಯೂಟರಿಗೆ ಊಡಿಸಿದರೆ ಸಾಕು. ಆಮೇಲೆ ಶಬ್ದ ಪ್ರಯೋಗ (concordance)ಕ್ಕೆಂದು ಸಿದ್ಧವಾಗಿರುವ ಪ್ರೋಗ್ರಾಮ್‌ನ್ನು ರೂಪಿಸಿದಾಗ ನಮಗೆ ಬೇಕಾದ concordance ಸಿದ್ಧವಾಗಿಬಿಡುತ್ತದೆ. ಹೀಗಾಗಿ ಶೇಕ್ಸಪಿಯರನ ನಾಟಕ, ಕಾವ್ಯಗಳು - ಎಲ್ಲವನ್ನೂ ಕಂಪ್ಯೂಟರಿಗೆ ಅಳವಡಿಸಿ 'Concordance of Shakespeare's Complete Works' ಸಿದ್ಧಮಾಡಿದರು. ಶೇಕ್ಸ್‌ಪಿಯರನ ಯಾವುದೇ ರೀತಿಯ, ಯಾವುದೇ ಮಟ್ಟದ ಅಭ್ಯಾಸಕ್ಕೆ ಅದನ್ನು ಬಳಸದವರೇ ಇಲ್ಲವೆನ್ನುವಷ್ಟು ಆ ಶೇಕ್ಸಪಿಯರನ ಶಬ್ದ - ಪ್ರಯೋಗ ಕೋಶವು ಪ್ರಯೋಜನಕ್ಕೆ ಒದಗುತ್ತಾ ಇದೆ.

ಭಾರತೀಯ ಭಾಷೆಗಳಿಗೆ ಅನ್ವಯಿಸಿ ಹೇಳುವುದಾದರೆ Bloomfield ಎನ್ನುವ ಸಂಸ್ಕೃತ ವಿದ್ವಾಂಸರು ವೇದಗಳ ಶಬ್ದ - ಪ್ರಯೋಗ ಕೋಶವನ್ನು ತಯಾರಿಸಿದರು. ಹೀಗೆಯೇ ಭಗವದ್ಗೀತೆ, ಉಪನಿಷತ್ತುಗಳಿಗೂ ಶಬ್ದ-ಪ್ರಯೋಗ ಕೋಶ ಸಿದ್ಧವಾದವು. ಕನ್ನಡದಲ್ಲಿ ಪ್ರಥಮತಃ ಇದನ್ನು ತಯಾರಿಸಿದವರು ಡಾ. ಎಸ್.ಆರ್. ಗುಂಜಾಳರು. ಬಸವಣ್ಣನವರ ವಚನಗಳಿಗಾಗಿ, ಕೈಯಾರೆ ಪಟ್ಟಿಕೆಗಳನ್ನು ಮಾಡಮಾಡುತ್ತ, ತುಂಬಾ ಪರಿಶ್ರಮದಿಂದ ಸಿದ್ಧಪಡಿಸಿದರು. ಇನ್ನೂ ಕೆಲಸವರು ಇದೇ ರೀತಿಯಲ್ಲಿ ಬೇರೆ ಕೆಲವು ವಚನಕಾರರ ಶಬ್ದ-ಪ್ರಯೋಗ ಕೋಶಗಳನ್ನು ರಚಿಸಿದ್ದುಂಟು.

ಯಾವಾಗ ಕಂಪ್ಯೂಟರಿನ ಸಹಾಯದಿಂದ ಶಬ್ದ - ಪ್ರಯೋಗ ಕೋಶವನ್ನು ತಯಾರಿಸುವುದು ಸುಲಭವೆಂದು ತಿಳಿಯಿತೋ, ಆಗ ನಾನೂ (ಶ್ರೀ ಹಾ.) ಪ್ರಯತ್ನ ಮಾಡಿದೆ. ಮೊದಲಿಗೆ ಕಾಳಿದಾಸನ 'ಮೇಘದೂತ'ದ ಪಠ್ಯವನ್ನು ಕಂಪ್ಯೂಟರಿಗೆ ಅಳವಡಿಸಿ ಅದರ ಶಬ್ದ - ಪ್ರಯೋಗ ಕೋಶವನ್ನು ಸಿದ್ಧಪಡಿಸಿದೆ (೧೯೭೩). ಆದರೆ ಹಾಗೆ ಮಾಡಿದ್ದು ರೋಮನ್ ಲಿಪಿಯಲ್ಲಿ. ಅದೇ ಕ್ರಮದಲ್ಲಿ ಜೇಡರ ದಾಸಿಮಯ್ಯನ ವಚನಗಳ ಶಬ್ದ - ಪ್ರಯೋಗ ಕೋಶವೂ ಸಿದ್ಧವಾಯಿತು (೧೯೭೬). (ಅದನ್ನು ಕನ್ನಡಕ್ಕೆ ಲಿಪ್ಯಂತರ ಮಾಡಿ ಪ್ರಕಟಿಸಲಿಕ್ಕಿದೆ.) ಇವೆರಡೂ ಪ್ರಯೋಗಾರ್ಥವಾಗಿ ಕೈಗೊಂಡವುಗಳು. ಮುಂದೆ ಮುದ್ದಣನ ಸಮಗ್ರ ಶಬ್ದಗಳನ್ನು ಕಂಪ್ಯೂಟರಿಗೆ ಹಾಕುವ ಯೋಜನೆಯನ್ನು ಕೈಕೊಳ್ಳಲಾಯಿತು. ಮೊದಲಿಗೆ ದೇವತಾವಾಚಿ ಶಬ್ದಗಳನ್ನಷ್ಟೆ ಎತ್ತಿಕೊಳ್ಳಲಾಗಿತ್ತು. ಈ ಕಾರ್ಯವನ್ನು ತುಸು ಮುಂದುವರಿಸಿ ಡಾ. ದಾಮೋದರ ಶೆಟ್ಟಿಯವರು 'ಮುದ್ದಣನ ಶಬ್ದಪ್ರತಿಭೆ' ಎಂಬ ವಿಷಯದ ಮೇಲೆ ಪಿ.ಎಚ್‌ಡಿ. ಸಂಪ್ರಬಂಧವನ್ನೇ ಹೊರತಂದಿದ್ದಾರೆ.

ಪ್ರಾರಂಭದಲ್ಲಿ ದೇವತಾಶಬ್ದಗಳನ್ನಷ್ಟೆ ಎತ್ತಿಕೊಂಡೆವಲ್ಲದೆ ಇಂದ್ರ, ನಾರದ, ರಾಮ, ಶಿವ, ವಿಷ್ಣು ಮುಂತಾದವರ ನಾಮಧೇಯುವಿರುವ ಪ್ರಯೋಗ ವಾಕ್ಯಗಳನ್ನೂ ಕೊಡಲಾಯಿತು. ಮುದ್ದಣನ ಕೃತಿಪಂಚಕದಲ್ಲಿ ಮೂರು ರಾಮಾಯಣಕ್ಕೇನೆ ಸಂಬಂಧಪಟ್ಟವುಗಳು. ಆದುದರಿಂದ ರಾಮವಾಚಿ ಶಬ್ದಗಳೇ ಹೆಚ್ಚಾಗಿ ಬರಬೇಕಲ್ಲವೆ. ಇಲ್ಲ; ಶಿವವಾಚಿ ಶಬ್ದಗಳು ಒಟ್ಟಿನಲ್ಲಿ ರಾಮನದಕ್ಕಿಂತ ಎರಡು ಪಟ್ಟು ಹೆಚ್ಚಿಗೆ ಹೊರಟವು. ನಾನು ಅಥವಾ ಕಂಪ್ಯೂಟರ್ ಎಲ್ಲಿಯಾದರೂ ತಪ್ಪು ಮಾಡಿದೆವೋ ಎಂದುಕೊಂಡೆ. ಇಲ್ಲ; ಸರಿಯಾಗಿಯೆ ಎರಡರಷ್ಟು ಶಿವವಾಚೀ ಶಬ್ದಗಳೇ ಇದ್ದುವು. ಅವು ಬಂದ ಪ್ರಯೋಗ ವಾಕ್ಯಗಳನ್ನು ನೋಡಿದಾಗ ಮುದ್ದಣನು ಅಗತ್ಯವಿರಲಿ ಬಿಡಲಿ ತನ್ನೆರಡು ಯಕ್ಷಗಾನ ಕೃತಿಗಳಲ್ಲಿ ಶಿವನನ್ನು ತಂದಿದ್ದ. ಆದ್ದರಿಂದ ಅವನು ಪರಮ ಶಿವಭಕ್ತನೆಂಬ ಹೊಸ ವಿಚಾರ ಸಿದ್ಧವಾಯಿತು. ಕಳೆದ ನೂರು ವರ್ಷಗಳ ವರೆಗೆ ಅವನ ಕಾವ್ಯವನ್ನು ಓದಿಸುತ್ತ ಇದ್ದ ಯಾವ ಅಧ್ಯಾಪಕರಿಗೂ ಹೊಳೆಯದ ಈ ಅಂಶವನ್ನು ಶಬ್ದ - ಪ್ರಯೋಗ ಕೋಶವು ತೋರಿಸಿಕೊಟ್ಟಿತು. ಅಷ್ಟು ಮಾತ್ರವಲ್ಲ, ಲಯಕಾರಿಯಾದ ಶಿವನು ಮುದ್ದಣನಲ್ಲಿ ಮಾತ್ರ ಮಂಗಳಕರನಾಗಿ ಹೊರಹೊಮ್ಮಿದ್ದಾನೆ. (ವಿವರಗಳಿಗಾಗಿ 'ಸಂಕಥನ'ವೆಂಬ ಶ್ರೀ ಹಾ. ಸಂಭಾವನಾ ಗ್ರಂಥವನ್ನು (೨೦೦೯) ನೋಡಬಹುದು (ಪು. ೩೨೧).

ಮುದ್ದಣನು ಐದು ಕೃತಿಗಳನ್ನು ರಚಿಸಿರುವನಷ್ಟೆ. ಅವುಗಳಲ್ಲಿ 'ರಾಮಪಟ್ಟಾಭಿಷೇಕ' ಕಾವ್ಯವೂ ಒಂದು. ಆದರೆ ಓರ್ವ ಹಳೆಗಾಲದ ವಿಮರ್ಶಕರು "ಈ ಕಾವ್ಯವು ಮುದ್ದಣ ರಚಿಸಿದ್ದೆಂದು ಸರ್ವಥಾ ಒಪ್ಪುವುದಿಲ್ಲ" ಎಂದು ಸಾರಿದ್ದರು. ಅದೇನೂ ಸ್ವೀಕೃತವಾಗಲಿಲ್ಲ; ಆ ಮಾತು ಬೇರೆ. ನಾನು ಪ್ರಯೋಗಾರ್ಥವಾಗಿ ಕಂಪ್ಯೂಟರಿನಲ್ಲಿ ಶಬ್ದ - ಪ್ರಯೋಗ ಕೋಶವನ್ನು ಸಿದ್ಧಪಡಿಸಿದೆ. ಯಾವ ಯಾವ ಶಬ್ದಗಳು ಐದೂ ಗ್ರಂಥಗಳಲ್ಲಿ ಪುನರಾವೃತ್ತಿಗೊಳ್ಳುವವೆಂಬ ಆಧಾರದ ಮೇಲಿಂದ ಶ್ರೀರಾಮಪಟ್ಟಾಭಿಷೇಕವು ಅವನದೆಂದೇ ಸಿದ್ಧವಾಯಿತು. ಹೀಗೆ ಯಾರೊಬ್ಬರ ಗ್ರಂಥಕರ್ತೃತ್ವವನ್ನು ನಿರ್ಣಯಿಸಲು concordanceನ ನೆರವನ್ನು ಪಡೆಯುವುದು ಪಾಶ್ಚಿಮಾತ್ಯ ದೇಶಗಳಲ್ಲಿ ರೂಢಿಗತವಾಗಿದೆ.

ಮೇಲೆ ಮುದ್ದಣನೊಬ್ಬನದೇ ಐದು ಕೃತಿಗಳಲ್ಲಿಯ ಶಬ್ದಗಳನ್ನು ಹೋಲಿಸಿ ನೋಡಿದೆವಷ್ಟೆ. ಬೇರೆಯವರ ಕೃತಿಗಳನ್ನು ತೆಗೆದುಕೊಂಡು ಶಬ್ದ - ಪ್ರಯೋಗ ಕೋಶದಲ್ಲಿ ಜೊತೆಜೊತೆಯಾಗಿ ಇಟ್ಟಾಗ ಒಬ್ಬ ಕವಿಯ ಪ್ರಭಾವ ಇನ್ನೊಬ್ಬನ ಮೇಲೆ ಎಷ್ಟರ ಮಟ್ಟಿಗೆ ಅಗಿದೆ ಎಂಬುದನ್ನೂ ಕಂಡುಕೊಳ್ಳಬಹುದು. ಬೇಂದ್ರೆ ಹಾಗೂ ಅಡಿಗರ ಪ್ರಭಾವ ಅವರಿಗಿಂತ ಕಿರಿಯ ಪ್ರತಿಭಾನ್ವಿತ ಕವಿಗಳ ಮೇಲೆ ಯಾವ ರೀತಿ ಆಗಿರುವುದೆಂಬುದನ್ನೂ ಸಂಬಂಧಪಟ್ಟ ಕಾವ್ಯಗಳ ಶಬ್ದ - ಪ್ರಯೋಗ ಕೋಶದಿಂದ ಗುರುತಿಸಬಹುದು.

**ಶಬ್ದ - ಪ್ರಯೋಗ ಕೋಶದ ಇನ್ನು ಕೆಲವು ಪ್ರಯೋಜನಗಳು**

ಶಬ್ದಗಳು ಎರಡು ಬಗೆಯವು. ವಾಚ್ಯಾರ್ಥವುಳ್ಳ ಶಬ್ದಗಳು, ಇವು ಗದ್ಯ ಬರವಣಿಗೆಯಲ್ಲಿ ಸ್ಪಷ್ಟವಾಗಿ ದೊರೆಯುತ್ತವೆ. ವ್ಯಂಜನಾರ್ಥ ಶಬ್ದಗಳು ಎನ್ನುವುವು ಕಾವ್ಯಗಳಲ್ಲಿ ಧಾರಾಳವಾಗಿ ದೊರೆಯುವಂಥದ್ದು. ಶಬ್ದಗಳ ವ್ಯಂಜಕ ಗುಣವನ್ನು ಪ್ರಕಟಿಸಿದಷ್ಟೂ ಆ ಕಾವ್ಯ ಮೇಲ್ಮಟ್ಟದ್ದೆನಿಸುತ್ತದೆ. ಹೀಗಿರುವುದರಿಂದ ಕಾವ್ಯಗಳ ಶಬ್ದ - ಪ್ರಯೋಗ ಕೋಶವು ಒಂದು ರೀತಿಯಲ್ಲಿ ಅದನ್ನು ತೋರಿಸಿಕೊಡುತ್ತದೆ. ಬಗೆಬಗೆಯ

ರೀತಿಯಲ್ಲಿ ಶಬ್ದಗಳ ಅರ್ಥ ಹೊರಡಿಸುವುದನ್ನು ತಿಳಿಯುವುದು ಸಾಹಿತ್ಯ ವಿಮರ್ಶನದ ಒಂದು ಪ್ರಕ್ರಿಯೆಯೇ ಆಗಿದೆ.

ಶಬ್ದಗಳ ಈ ವ್ಯಂಜಕತೆಯಲ್ಲಿ ಕವಿಗಳು ಸೂಕ್ಷ್ಮವಾದ ಅರ್ಥಭೇದವನ್ನು ಕಾಣಿಸುತ್ತಾರೆ. ಭಗವದ್ಗೀತೆಯಲ್ಲಿ 'ಯೋಗ' ಶಬ್ದವು ಅನೇಕ ಕಡೆಗಳಲ್ಲಿ ಬರುತ್ತದೆ. ಅವೆಲ್ಲ ಸಂದರ್ಭಗಳನ್ನು ಸೂಕ್ಷ್ಮವಾಗಿ ಅಭ್ಯಾಸ ಮಾಡಿದವರೊಬ್ಬರು 'ಯೋಗ' ಎನ್ನುವುದಕ್ಕೆ ನಾಲ್ಕು ಅರ್ಥಭೇದಗಳಿವೆ ಎಂದು ಕಂಡುಹಿಡಿದಿದ್ದಾರೆ. ಓರ್ವ ಆಧುನಿಕ ಅಮೆರಿಕನ್ ಕವಯಿತ್ರಿಯ (ಎಮಿಲಿ ಡಿಕನ್ಸನಳ) ಭಾವಗೀತೆಗಳನ್ನು ಕಂಪ್ಯೂಟರಿಗೆ ಅಳವಡಿಸಿದಾಗ ಅವಳು ಬಳಸಿದ ಶಬ್ದಗಳಲ್ಲಿ 'ನಾನು' 'ನನ್ನ' ಎಂಬ ಸ್ವನಿಷ್ಠ ಶಬ್ದಗಳೇ (subjective) ಜಾಸ್ತಿಯಾಗಿತ್ತು. ಅವಳು ತನ್ನ ಕವಿತೆಗಳ ಮೂಲಕ ಆತ್ಮಚರಿತ್ರೆಯನ್ನು ಹೇಗೆ ನಿರೂಪಿಸಿದ್ದಾಳೆ ಎಂದು ಒಬ್ಬ ವಿಮರ್ಶಕ ತೋರಿಸಿಕೊಟ್ಟಿದ್ದಾನೆ.

ವ್ಯಾಕರಣ ಇಲ್ಲವೆ ಭಾಷಾಶಾಸ್ತ್ರದ ದೃಷ್ಟಿಯಿಂದಲೂ ಶಬ್ದ – ಪ್ರಯೋಗ ಕೋಶವು ನೆರವಾಗುವುದು. ಕವಿಯು ಬಳಕೆಯಲ್ಲಿಲ್ಲದ ಹಾಗೂ ಸ್ವಯಂ ಸೃಷ್ಟಿಸಿ ಯಾವ ಯಾವ ಶಬ್ದಗಳನ್ನು ತಂದಿರಬಹುದು (ಮುದ್ದಣನಂತೆ), ನಾಮಪದಗಳಿಗೆ 'ಇಸು' ಪ್ರತ್ಯಯ ಹಚ್ಚಿ ಕ್ರಿಯಾಪದಗಳನ್ನು ಬಳಸುವುದು (ಉದಾ:ಗೆ ಗಿಳಿಯಿಸು), ಕೆಲವು ಶಬ್ದಗಳನ್ನು ಮತ್ತೆ ಮತ್ತೆ ತಂದಿರುವುದು (ಪುನರಾವೃತ್ತಿಯವು) – ಇವುಗಳನ್ನು ಕಂಡುಹಿಡಿಯಬಹುದು (ಉದಾ:ಗೆ ಮುದ್ದಣನ ಕೀರ್ತನೆಗಳಲ್ಲಿ 'ಅಯ್ಯಾ' ಎನ್ನುವ ಶಬ್ದ). ಹಳಗನ್ನಡದ ಕಾವ್ಯಗಳಲ್ಲಿ ಱ, ೞ ಎಂಬ ಅಕ್ಷರಗಳು ಹತ್ತನೆಯ ಶತಮಾನದ ಮಾರ್ಗಕಾವ್ಯಗಳಲ್ಲಿ ಧಾರಾಳವಾಗಿ ಕಂಡುಬರುತ್ತಿದ್ದು ಅವುಗಳು ಅದಾವ ರೀತಿಯಲ್ಲಿ ಇಳಿಮುಖವಾಗುತ್ತ ಲುಪ್ತವಾದವು ಎಂಬುದನ್ನೂ ಅಧಿಕೃತವಾಗಿ ನಿರ್ಧರಿಸಬಹುದು.

ನಿಸರ್ಗ ಕವಿಯಾದ ಕೀಟ್ಸ್‌ಗೆ 'ಇಂಥಿಂಥ ಬಣ್ಣಗಳು ಬಹಳ ಇಷ್ಟ. ಹೂಗಳ ವರ್ಣನೆಯಲ್ಲಿ ಅವೇ ಹೆಚ್ಚಾಗಿ ಕಾಣಿಸಿಕೊಂಡಿವೆ' ಎಂದು ಒಬ್ಬ ಪ್ರಸಿದ್ಧ ವಿಮರ್ಶಕ ಹೇಳಿದ. ಸಾಮಾನ್ಯವಾಗಿ ಆ ಅಭಿಪ್ರಾಯ ಸ್ವೀಕೃತವಾಯಿತು. ಆದರೆ ಕೀಟ್ಸ್‌ನ ಕವಿತೆಗಳನ್ನೆಲ್ಲ ಕಂಪ್ಯೂಟರಿಗೆ ಊಡಿಸಿ, ಶಬ್ದ – ಪ್ರಯೋಗ ಕೋಶವನ್ನು ಸಿದ್ಧಪಡಿಸಿ ನೋಡಿದಾಗ, ಅವನಿಗೆ ತುಂಬಾ ಪ್ರಿಯವಾದ ಹೂಗಳು ಬೇರೆಯೇ ಹೊರಟವು! ಇದರಿಂದ ತಿಳಿಯುವುದೇನೆಂದರೆ ವಿಮರ್ಶನದಲ್ಲಿ ಖಚಿತತೆಯನ್ನು ತರಲು ಶಬ್ದ – ಪ್ರಯೋಗ ಕೋಶವು ನೆರವಾಗಬಲ್ಲುದು.

**ಕನಕದಾಸರ ಕೀರ್ತನೆಗಳ ಶಬ್ದ – ಪ್ರಯೋಗ ಕೋಶ**

ಪ್ರಸ್ತುತ ಗ್ರಂಥದಲ್ಲಿ ಕನಕದಾಸರ ೨೫೬ ಕೀರ್ತನೆಗಳನ್ನು ಲೆಕ್ಕಕ್ಕೆ ತೆಗೆದುಕೊಂಡಿದೆ. ಅವರ ಕೀರ್ತನೆಗಳ ಏಳೆಂಟು ಸಂಗ್ರಹಗಳು ಪ್ರಕಟವಾಗಿವೆಯಷ್ಟೆ. ಆದರೆ ಒಂದರಲ್ಲಿದ್ದ ಕೀರ್ತನೆಗಳ ಸಂಖ್ಯೆ ಇನ್ನೊಂದರಲ್ಲಿ ಇಲ್ಲ. ಕಾರಣಗಳು ಏನೇ ಇರಲಿ, ಕನಕದಾಸರೇ ರಚಿಸಿದ ಕೀರ್ತನೆಗಳ ಸಂಭವನೀಯತೆಯನ್ನು ಗಣಿಸಿ ಈ ೨೫೬ ಕೀರ್ತನೆಗಳನ್ನು ತೆಗೆದುಕೊಂಡಿದ್ದೇವೆ.

ಇವಕ್ಕೆ ಆಕರ ಗ್ರಂಥಗಳೆಂದರೆ,

ಅ) ಬೆಟಗೇರಿ ಕೃಷ್ಣಶರ್ಮ ಹಾಗೂ ಬೆಂಗೇರಿ ಹುಚ್ಚರಾಯರು ಸಂಪಾದಿಸಿದ 'ಕನಕದಾಸರ ಹಾಡುಗಳು' (ಜನಪ್ರಿಯ ಆವೃತ್ತಿ) ಮತ್ತು 'ಕನಕದಾಸರ ಭಕ್ತಗೀತೆಗಳು' (ಪಂಡಿತ

ಆವೃತ್ತಿ), ಇವನ್ನು ಧಾರವಾಡದ ಸಮಾಜ ಪುಸ್ತಕಾಲಯದವರು ೧೯೭೪ರಲ್ಲಿ ಪ್ರಕಟಿಸಿದ್ದರು. ಈಚೆಗೆ 'ಕನಕದಾಸರು ಹಾಡುಗಳು' ಪುಸ್ತಕದ ೫ನೆಯ ಮುದ್ರಣವನ್ನು ಅವರು ೨೦೦೯ರಲ್ಲಿ ಹೊರತಂದಿದ್ದಾರೆ. ಅದನ್ನು 'ಬೆ' ಅಕ್ಷರ ಸಂಕೇತವನ್ನು ಬಳಸಿ, ಅವನ್ನು ಈ ಶಬ್ದ – ಪ್ರಯೋಗ ಕೋಶದಲ್ಲಿ ಉಪಯೋಗಿಸಿಕೊಂಡಿದ್ದೇವೆ.

ಆ) ಎರಡನೆಯ ಸಂಕಲನ 'ಕನಕದಾಸರ ಜನಪ್ರಿಯ ಕೀರ್ತನೆಗಳು' ಇದರ ಸಂಪಾದಕರು ಶ್ರೀ ಹೊ. ರಾ. ಸತ್ಯನಾರಾಯಣರಾವ್ ಅವರು. ಬೆಂಗಳೂರಿನ 'ಅಂಕಿತ ಪುಸ್ತಕ'ದವರು ಪ್ರಕಟಿಸಿದ್ದು ೨೦೦೮ರಲ್ಲಿ ಅದು ಮರುಮುದ್ರಣವಾಗಿದೆ. ಇದರಲ್ಲಿ ಹತ್ತಾರು ಕೀರ್ತನೆಗಳು ಕನಕದಾಸರವಲ್ಲ – ಎಂಬ ಸಂಶಯ ಮೂಡುವಂತಿದೆ. ಆದರೂ ನಾವು ಅದರಲ್ಲಿಯ ಹತ್ತು ಪದ್ಯಗಳನ್ನು ಮಾತ್ರ ಬಿಟ್ಟಿದ್ದೇವೆ. benefit of doubt ಎಂಬಂತೆ ಉಳಿದುವನ್ನು ಇಟ್ಟುಕೊಂಡಿದ್ದೇವೆ. ಬಳಸಿದ ಸಂಕೇತಾಕ್ಷರ 'ಸ'.

ಅಂತೂ ಇವೆರಡು ಗ್ರಂಥಗಳಿಂದ ತೆಗೆದುಕೊಂಡ ೨೫೬ ಕೀರ್ತನೆಗಳ ಶಬ್ದ – ಪ್ರಯೋಗ ಕೋಶ ಇದಾಗಿದೆ. (ಇದರ ಸಮಗ್ರ ಕಂಪ್ಯೂಟರ್ ನಿರ್ವಹಣೆ ನಮ್ಮಲ್ಲಿ ಒಬ್ಬರಾದ ವಿ. ಕೃಷ್ಣ ಅವರದು) ಇನ್ನು ಶಬ್ದಗಳು? ಇವುಗಳಿಂದ ನಾವು ಆಯ್ದ ಶಬ್ದಗಳು ಸುಮಾರು ಐದು ಸಾವಿರ. ಎಲ್ಲ concordanceಗಳಲ್ಲಿ ಮಾಡುವಂತೆ ಸರ್ವನಾಮಗಳು, ಕ್ರಿಯಾ ವಿಶೇಷಣಗಳು, ವಿಶೇಷಣಗಳು ಇತ್ಯಾದಿ ಸಾಮಾನ್ಯವೆನಿಸುವ ಶಬ್ದಗಳನ್ನು ಬಿಟ್ಟಿದ್ದೇವೆ.*

ಪ್ರಯೋಗ ವಾಕ್ಯಗಳು ಮಹತ್ವದವು ತಾನೇ. ಈ ಐದು ಸಾವಿರ ಶಬ್ದಗಳಿಗೆ ಕೊಟ್ಟ ಪ್ರಯೋಗಗಳು ಒಟ್ಟಿಗೆ ೧೭,೦೦೦.

ಪ್ರತಿಯೊಂದು ನಮೂದು ಈ ಕೆಳಗಿನಂತೆ ವಿವರಗಳನ್ನು ಹೊಂದಿರುತ್ತದೆ:

ಅ) ಅನುಕ್ರಮ ಸಂಖ್ಯೆ.

ಆ) ಶಬ್ದ (ಮತ್ತು ಅರ್ಥ – ಅವಶ್ಯವಿದ್ದರೆ)

ಇ) ಶಬ್ದ ಇರುವ ಪ್ರಯೋಗದ ಸಾಲು.

ಈ) ಸಂದರ್ಭಸೂಚಿ (ಆಕರ – ಬೆ/ಸ. ಇದರಲ್ಲಿಯ ಕೀರ್ತನ ಸಂಖ್ಯೆ ಮತ್ತು ಆ ಶಬ್ದವಿದ್ದ ನುಡಿಯ ಸಂಖ್ಯೆ)

ಕೆಲವು ಮಾದರಿ ನಮೂದುಗಳನ್ನು ಕೊಟ್ಟಿದೆ:

(೧) ಮುನಿಕಲ್ಪಭೂಜ: (ಮುನಿಗಳಿಗೆ ಕಲ್ಪವೃಕ್ಷ ಆದವನು)

ನಂ. ೩೩೬೪ – ಇನಕೋಟಿ ಶತತೇಜ ಮುನಿಕಲ್ಪಭೂಜ ಕನಕಾದ್ರಿನಿಲಯ ವೆಂಕಟರಾಯ (ಸ–೨೨೯–೧)

'ಮುನಿಕಲ್ಪಭೂಜ' ಶಬ್ದವನ್ನು ಕನಕದಾಸರು ಒಂದೇ ಸಲ ಬಳಸಿದ್ದಾರೆ. ವಿಶೇಷವೆಂದರೆ ಇದೊಂದು ಅಪೂರ್ವ ಶಬ್ದಸೃಷ್ಟಿ. ಕನ್ನಡ–ಕನ್ನಡ ಕೋಶದಲ್ಲಿ ಈ ಶಬ್ದವನ್ನೇ ಕೊಟ್ಟಿಲ್ಲ.

(೨) ಐದು:

ನಂ. ೬೧೦ – ಐದು (ಒಂದು ಸಂಖ್ಯೆ) – ಅದರ ಮೇಲೆ ಗಟ್ಟಿಯಾಗಿ ನೆಲಗೆ ನಂತವೈದು ಬಣ್ಣವು ಎರಡು ಸಾವಿರ ಜಿಹ್ವೆಯುರಗ (ಸ–೪೪೮–೧)

(ಇನ್ನು ನಾಲ್ಕು ಪ್ರಯೋಗಗಳಿವೆ.)

* ಸರ್ವನಾಮಗಳು: ಅವನು, ನೀನು, ಅಕ್ಕ, ಇದು, ಇದಕ್ಕೆ, ಅವುಗಳು:

ಅವ್ಯಯಗಳು; ಅನಿತು, ಇಷ್ಟು, ಅಗಲ. – ಮಾಮೂಲಿಯ ಕ್ರಿಯಾದಪಗಳು: ಹೇಳು ಆಗು, ಏಳಿಸು. ಸಾಮಾನ್ಯ ನಾಮಪದಗಳು: ಎಣ್ಣೆ ಇತ್ಯಾದಿ.

(೨ಅ) ಐದು:

ನಂ. ೬೧೧ – ಐದು (ಬರು) – ಪಥನಡೆಯದಯ್ಯ ಪರಲೋಕಕ್ಕೈದುವಡೆ – ಪಥನಡೆಯದಯ್ಯ (ಬೆ–೯–ಪಲ್ಲವಿ)

ಇಲ್ಲಿ ಬಂದಿರುವ ಶಬ್ದಗಳೊಂದೊಂದಕ್ಕೂ ವಿಶೇಷಾರ್ಥಗಳನ್ನೂ ವೈವಿಧ್ಯವನ್ನೂ ಕಲ್ಪಿಸಿ ಕನಕದಾಸರು ತಮ್ಮ ಕ್ರತುಶಕ್ತಿಯನ್ನು ಮೆರೆದಿದ್ದಾರೆ. 'ಎನಿಸು' ಎನ್ನುವ ಸಾದಾ ಕ್ರಿಯಾಪದಕ್ಕೆ ಜೋಡಿಸಿದ ದೂರದೂರದ ಸಂದರ್ಭಗಳನ್ನೂ ಈ ದೃಷ್ಟಿಯಿಂದ ಗಮನಿಸುವುದು. ಅದರಂತೆ 'ಪಡು' ಎಂಬುದು ಕ್ರಿಯಾಪದ. ಹಾಗೇನೇ 'ಅನ್ಯ' ಎಂಬುದು. ಬಳಕೆಯಲ್ಲಿ ತೀರಾ ಸಾಮಾನ್ಯವಾದ ಈ ಶಬ್ದ ಬಂದಲ್ಲಿ ಕನಕದಾಸರು ಪೌರಾಣಿಕ ಕಥಾನಕವನ್ನೂ ನೀತಿಯ ಮಾತುಗಳನ್ನೂ ತಂದಿದ್ದಾರೆ.

ಇನ್ನು ಯಾವುದಾದರೊಂದು ವಿಷಯದ ಬಗ್ಗೆ ಕನಕದಾಸರ ನಿರ್ದಿಷ್ಟ ಅಭಿಮತವೇನು ಎಂದು ತಿಳಿದುಕೊಳ್ಳುವುದು ಶಬ್ದ – ಪ್ರಯೋಗ ಕೋಶದಿಂದ ಸಾಧ್ಯ. ಕೆಲವು ಉದಾಹರಣೆಗಳಿವು.

ಅನೇಕ ವಿಷಯಗಳು ಚರ್ಚಾತ್ಮಕವೂ ಆಗಿವೆ. ಉದಾಹರಣೆಗೆ 'ಕುಲ' ವಿಚಾರ. ಈ ಕುರಿತು ನಾವು ಅವರ ಎರಡು ಕೀರ್ತನೆಗಳನ್ನು ಮಾತ್ರ ಉದ್ಧರಿಸಿ ಮುಗಿಸುತ್ತೇವೆ. ಆದರೆ ಅವನ್ನುಳಿದು ಕುಲ ವಿಚಾರವು ಬೇರೆ ಐದಾರು ಕೀರ್ತನೆಗಳ ಮಧ್ಯದಲ್ಲಿ ಬಂದಿದೆಯಲ್ಲ? ಶಬ್ದ – ಪ್ರಯೋಗ ಕೋಶವು ಅವನ್ನು ಹೊರಹಾಕಿದ್ದು ಅವುಗಳನ್ನೂ ಗಮನದಲ್ಲಿಟ್ಟುಕೊಂಡರೆ, ಕುಲವಿಚಾರದ ಬಗ್ಗೆ ಕನಕದಾಸರ ನಿಚ್ಚಳ ಸ್ವರೂಪದ ಅಭಿಪ್ರಾಯವು ಸ್ಪಷ್ಟವಾಗಬಲ್ಲುದು.

ಕನಕದಾಸರು ಎಷ್ಟರಮಟ್ಟಿಗೆ ಶ್ರೀವೈಷ್ಣವರು ಎಂಬುದನ್ನು ಆಗಾಗ ಚರ್ಚಿಸುತ್ತೇವೆ. ಈ ಮತಕ್ಕೆ ಸಂಬಂಧಿಸಿದ ಶಬ್ದಗಳು ಎಲ್ಲೆಲ್ಲಿ ಬಂದಿವೆ ಎಂಬುದನ್ನೂ ಶಬ್ದ – ಪ್ರಯೋಗ ಕೋಶದಿಂದ ಕಂಡುಕೊಂಡು ಖಚಿತವಾದ ಅಭಿಪ್ರಾಯಕ್ಕೆ ಬರಬಹುದು.

ಕನಕದಾಸರು ತಾರುಣ್ಯದಲ್ಲಿ ಯುದ್ಧರಂಗದಲ್ಲಿದ್ದವರು. ಹಾಗಿದ್ದರೆ ಯುದ್ಧ ಅಥವಾ ಹೋರಾಟವನ್ನು ಸೂಚಿಸುವ ಸಂದರ್ಭಗಳು ಬಂದಿರಬೇಕಲ್ಲವೆ. ಇದು ಸಾಮಾನ್ಯ ಗ್ರಹಿಕೆ. ಆದರೆ ಮೂರೇ ಶಬ್ದ ಮತ್ತು ಅವುಗಳ ಪ್ರಯೊಗಗಳಿವೆ. ಅವೆಂದರೆ ಆ ರಂಗವನ್ನು ಮರೆತೇಬಿಡುವಷ್ಟು ಅವರು ಭಗವಂತನೆಡೆಗೆ ತಿರುಗಿದರೆನ್ನಬೇಕು. ಈ ಅಂಶವು ಅವರು ಎಷ್ಟರಮಟ್ಟಿಗೆ ದೈವಭಕ್ತರಾದರೆನ್ನುವುದಕ್ಕೆ ದೃಷ್ಟಾಂತ ಎಂದು ಹೇಳಬಹುದಲ್ಲವೆ?

ಸಾಮಾನ್ಯವಾಗಿ ಹರಿದಾಸರಿಗೆ ಒಂದೇ ಮುದ್ರಿಕೆಯಿರುತ್ತದೆ. ಉಚ್ಚಾರದ ಭೇದದಿಂದ ಅಥವಾ ಮಾತ್ರೆಯ ಲೆಕ್ಕದಿಂದ ತುಸು ಹೆಚ್ಚು ಕಡಿಮೆ ಆಗಿರಬಹುದು. ಆದರೆ ತಮ್ಮ ಕೀರ್ತನೆಗಳಲ್ಲಿ ಕನಕದಾಸರು ಒಂದಲ್ಲ, ಆರೇಳು ಬಗೆಯ ಮುದ್ರಿಕೆಗಳನ್ನು ಬಳಸಿದ್ದಾರಲ್ಲ! ಇದೊಂದು ಯೋಚಿಸಬೇಕಾದ ವಿಷಯವೇ. ಒಂದೆರಡು ಅಂಕಿತಗಳ ಸ್ವರೂಪ ನೋಡಿದರೆ ಆ ಕೀರ್ತನೆ ಅವರದಿರಲಿಕ್ಕಿಲ್ಲ ಎಂದೂ ಎನಿಸುತ್ತದೆ. ಶಬ್ದ – ಪ್ರಯೋಗ ಕೋಶದಲ್ಲಿ ಬಂದ ಅಂಕಿತಗಳನ್ನು ಒಂದೆಡೆ ತಂದು ಆ ಪ್ರಯೋಗ ವಾಕ್ಯಗಳೊಡನೆ ಪರಿಶೀಲಿಸಿದರೆ ಯಾವ ಮುದ್ರಿಕೆಯನ್ನು ಅವರು ಹೆಚ್ಚಾಗಿ ಅಪೇಕ್ಷಿಸಿದ್ದರು? ಇಲ್ಲವೆ ಯಾವ ಮುದ್ರಿಕೆ ಅವರ ಕೀರ್ತನ ರಚನಾ ಕ್ರಮಕ್ಕೆ ಹೊಂದುವುದಿಲ್ಲ? ಅವನ್ನು ಕಂಡುಹಿಡಿಯಬಹುದು.

ಸಂಖ್ಯೆಗಳು : ಮೇಲುನೋಟಕ್ಕೆ ಇದು ಸಾದಾ ವಿಷಯವೆನಿಸಿದರೂ ೧ರಿಂದ ಮೊದಲ್ಗೊಂಡು ಅನೇಕ ಸಂಖ್ಯೆಗಳು ಸದ್ದಿಲ್ಲದೆ ಕಂಡು ಬರುತ್ತವೆ. ಮುದ್ದಣನ ಸಂಖ್ಯೆಗಳನ್ನೂ ಹೀಗೆ ಎತ್ತಿಕೊಂಡು, ಆ ಕುರಿತ ಸಂಪ್ರಬಂಧದಲ್ಲಿ, ಡಾ. ದಾಮೋದರಶೆಟ್ಟಿಯವರು ಮುದ್ದಣನ ಸಂಖ್ಯಾಪ್ರಿಯತೆಗೂ, ವಿಷಯವೊಂದಕ್ಕೆ ಒತ್ತು ಕೊಡುವ ಅವನ ರೀತಿಗೂ ಅವನ ಶಾಲಾ ಮಾಸ್ತರಿಕೆಗೂ, ತಳಕು ಹಾಕಿದ್ದಾರೆ. ಸಂಖ್ಯೆಗಳನ್ನಷ್ಟೆ ಎತ್ತಿಕೊಂಡು ಅಭ್ಯಾಸ ಮಾಡುವುದಕ್ಕೆ ಅನುಕೂಲವಾಗಲೆಂದು ಅನುಬಂಧ ೨ರಲ್ಲಿ ಅವನ್ನು ಕೊಟ್ಟಿದೆ.

**ಅನುಬಂಧಗಳು**

೧. ಮಹತ್ವದ ಅನುಬಂಧವೆಂದರೆ ಮೊದಲಿನದು. ಅದರಲ್ಲಿ ಕನಕದಾಸರು ಯಾವ ಯಾವ ನಿರ್ದಿಷ್ಟ ವಿಷಯಗಳ ಮೇಲೆ ಕೀರ್ತನೆ ರಚಿಸಿದ್ದಾರೆಂಬುದನ್ನು ಕೊಟ್ಟಿದೆ. (ಇಂಥ ಸುಮಾರು ೪೦ ಮುಖ್ಯ ವಿಷಯುಗಳು ಇಲ್ಲಿವೆ.) ಕೀರ್ತನೆಯ ವಿಷಯಾನುಸಾರದ ಹೆಚ್ಚಿನ ಅಭ್ಯಾಸಕ್ಕೆ ಇದು ಅತ್ಯಂತ ಉಪಯುಕ್ತ. ಆ ಕೀರ್ತನೆಗಳನ್ನು ಕಂಡು ಹಿಡಿಯುವುದಕ್ಕೆ, ಈ ಕೋಶದಲ್ಲಿಯ ಅನುಸಂಖ್ಯೆಯ ಮೂಲಕ ಹೆಚ್ಚಿನ ವಿವರಗಳನ್ನು ಪರಿಶೀಲಿಸುವುದು.

೨. ಎರಡನೆಯ ಅನುಬಂಧದಲ್ಲಿಯ ಮೇಲಿನ ವಿಷಯಗಳಲ್ಲಿ (ಅ) ಪೌರಾಣಿಕ ವ್ಯಕ್ತಿಗಳು (ಆ) ಕ್ಷೇತ್ರಸ್ಥಳ ಹಾಗೂ (ಇ) ಸಂಖ್ಯಾವಾಚಿ– ಈ ಮೂಲಕ ಹೆಚ್ಚಿನ ವಿವರಗಳನ್ನೂ, ಇತರ ವಿಷಯಗಳನ್ನು ನೋಡುವುದಕ್ಕೆ ಮಾದರಿಯೆಂಬಂತೆ ನಿದರ್ಶಿಸಲಾಗಿದೆ. ಪೌರಾಣಿಕ ವ್ಯಕ್ತಿಗಳೂ ಹಾಗು ಕೆಲವರ ಕಥಾನಕಗಳನ್ನು ಗಮನಿಸಿದರೆ, ಅವೆಲ್ಲ ಭಾಗವತ ಪುರಾಣದಿಂದ ತೆಗೆದುಕೊಂಡವುಗಳೇನೋ ಸರಿಯೇ; ಆದರೆ ಕನಕದಾಸರಿಗೆ ಯಾವ ಯಾವ ಪೌರಾಣಿಕ ವ್ಯಕ್ತಿಗಳು ಪ್ರಿಯರಾಗಿದ್ದರೆಂಬುದನ್ನೂ, ದಾಸರು ಅವರನ್ನು ವರ್ಣಿಸಿದ ಬಗೆಯನ್ನೂ ಕಾಣಬಹುದು. (ಅನುಬಂಧ ೨ (ಅ) ಇಲ್ಲಿ ಕೇವಲ ನಾಲ್ಕು ಪ್ರಮುಖ ದೇವತೆಗಳನ್ನು ಮಾತ್ರ ಕೊಟ್ಟಿದೆ – ಮಾದರಿಯಾಗಿ)

೩. ಅಂತೂ ಕನಕದಾಸರ ಕೀರ್ತನೆಗಳ ಆಳವಾದ ಅಭ್ಯಾಸಕ್ಕೆ ಈ ಶಬ್ದ – ಪ್ರಯೋಗ ಕೋಶ ಹೇಗೆ ನೆರವಾಗುವುದೆಂಬುದರ ಬಗ್ಗೆ ಕೆಲ ಅಂಶಗಳನ್ನು ಮೇಲೆ ನಿವೇದಿಸಿದ್ದಾಗಿದೆ. ಮೊತ್ತಮೊದಲ ಬಾರಿಗೆ ಕಂಪ್ಯೂಟರನ್ನು ಬಳಸಿ ಸಿದ್ಧವಾದ ಈ ಶಬ್ದ – ಪ್ರಯೋಗ ಕೋಶದ ಪೂರ್ಣಪ್ರಯೋಜನ ಪಡೆಯಬೇಕೆನ್ನುವುದಕ್ಕೂ ಮೇಲಣ ಮಾತುಗಳು ಪ್ರಚೋದನೆಯಾಗಬಹುದು.

ಬೆಂಗಳೂರು
ಡಿಸೆಂಬರ್ ೨೦೦೯

ಡಾ. ಶ್ರೀನಿವಾಸ ಹಾವನೂರ
ವಿ. ಕೃಷ್ಣ

# ಸಂಯೋಜಕರ ಮಾತು

ಪ್ರೊ. ಶ್ರೀನಿವಾಸ ಹಾವನೂರ ಹಾಗೂ ಶ್ರೀ ಪಿ. ಕೃಷ್ಣ ಇವರು ಸಂಪಾದಿಸಿರುವ ಕನಕದಾಸರ ಕೀರ್ತನೆಗಳ ಶಬ್ದ-ಪ್ರಯೋಗ ಕೋಶ ಮಂಗಳೂರು ವಿಶ್ವವಿದ್ಯಾನಿಲಯದ ಕನಕದಾಸ ಸಂಶೋಧನ ಕೇಂದ್ರದ ವತಿಯಿಂದ ಪ್ರಕಟಗೊಳ್ಳುತ್ತಿರುವುದು ಬಹಳ ಅಭಿಮಾನದ ಸಂಗತಿ ಯೆಂದು ತಿಳಿದಿದ್ದೇನೆ. ಕರ್ನಾಟಕ ಸರಕಾರ ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಮೂಲಕ ನಿರ್ವಹಿಸಿದ 50 ಸಂಪುಟಗಳ ಸಮಗ್ರ ದಾಸ ಸಾಹಿತ್ಯದ ಯೋಜನೆಯನ್ನು ಸಂಪಾದಕ ಮಂಡಳಿಯ ಕಾರ್ಯನಿರ್ವಾಹಕ ಸಂಪಾದಕರಾಗಿ ಯಶಸ್ವಿಯಾಗಿ ಪೂರ್ಣಗೊಳಿಸಿರುವ ಹಾವನೂರರು ಕನಕದಾಸರ ಕೀರ್ತನೆಗಳ ಶಬ್ದ-ಪ್ರಯೋಗ ಕೋಶವನ್ನು ಪ್ರಕಟಿಸಲು ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಗೆಯನ್ನು ನೀಡಿರುವುದಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಪ್ರೊ. ಶ್ರೀನಿವಾಸ ಹಾವನೂರರು ಮಂಗಳೂರು ವಿಶ್ವವಿದ್ಯಾನಿಲಯ ಸ್ಥಾಪನೆಗೊಂಡ ಆರಂಭದ ಹಂತದಲ್ಲಿ ಅಂದರೆ ೧೯೮೭ರಲ್ಲಿ ಕನ್ನಡ ಸ್ನಾತಕೋತ್ತರ ಮತ್ತು ಸಂಶೋಧನಾ ವಿಭಾಗದ ಅಧ್ಯಕ್ಷರಾಗಿ ಎರಡು ವರ್ಷಗಳ ಕಾಲ ನಿಯುಕ್ತರಾಗಿದ್ದರು. ಪುಟ್ಟದಾಗಿದ್ದ ಕನ್ನಡ ವಿಭಾಗವನ್ನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಂತೆ ಮಾದರಿಯಾಗಿ ಬೆಳೆಸಬೇಕೆಂಬ ಮಹತ್ವಾಕಾಂಕ್ಷೆಯ ಕನಸನ್ನು ಇಟ್ಟುಕೊಂಡು ಹಲವಾರು ರಚನಾತ್ಮಕ ವಾದ ಕಾರ್ಯಯೋಜನೆಗಳನ್ನು ಹಮ್ಮಿಕೊಂಡು ಅವೆಲ್ಲವನ್ನೂ ಪ್ರಯತ್ನಪೂರ್ವಕವಾಗಿ ಕಾರ್ಯರೂಪಕ್ಕೆ ತಂದವರು. ಕೇಂದ್ರ ಸರಕಾರದ ಸಂಸ್ಕೃತಿ ಇಲಾಖೆ, ಪತ್ರಾಗಾರ ಇಲಾಖೆಗಳ ಹಸ್ತಪ್ರತಿ ಸಂರಕ್ಷಣೆ ಹಾಗೂ ಪ್ರಕಟಣಾ ಯೋಜನೆಗಳ ಆರ್ಥಿಕ ನೆರವನ್ನು ಕನ್ನಡ ವಿಭಾಗಕ್ಕೆ ಒದಗಿಸುವಲ್ಲಿ ಯಶಸ್ವಿಯಾದರು. ಈ ಯೋಜನೆ

ಯಲ್ಲಿ ವೆಂಕಟರಾಜ ಪುಣಿಂಚತ್ತಾಯರು ಸಂಪಾದಿಸಿದ ತುಳುಭಾಷೆ ಲಿಪಿಯಲ್ಲಿ ಬರೆದಿರುವ ತುಳುವಿನ ಮೊತ್ತಮೊದಲ ಕಾವ್ಯ ಎಂದು ಗುರುತಿಸಲ್ಪಟ್ಟಿರುವ ಶ್ರೀ ಭಾಗವತೊ ಮಹಾಕಾವ್ಯವನ್ನು ಪ್ರಕಟಿಸಿದ್ದಲ್ಲದೆಯೇ, ಹಳೆಯ ತಾಡವೋಲೆ, ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ, ಪ್ರಕಟಣೆಯ ಯೋಜನೆಗಳಲ್ಲದೆಯೇ ಅವುಗಳ ಸೂಚಿಯನ್ನು ಸಿದ್ಧಗೊಳಿಸುವ ನಿಟ್ಟಿನಲ್ಲೂ ಯೋಜನೆಗಳನ್ನು ರೂಪಿಸಿದರು. ಇದರ ಜೊತೆಗೆ, ಕನ್ನಡ, ತುಳು, ಕೊಡವ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿ ಈ ಮುಂತಾದ ವಿಷಯಗಳ ಕುರಿತು ನಡೆದಿರುವ ಅಧ್ಯಯನಗಳಿಗೆ ಸಂಬಂಧಿಸಿದ ಮಾಹಿತಿಗಳ ಕಡತಗಳನ್ನು ಸಿದ್ಧಗೊಳಿಸಿ ವಿಭಾಗೀಯ ಗ್ರಂಥಾಲಯ ಹಾಗೂ ಮಾಹಿತಿ ಕೇಂದ್ರವನ್ನು ಸ್ಥಾಪಿಸಿರುವುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳುತ್ತೇನೆ. ಕಳೆದ ಶತಮಾನದ ಪೂರ್ವಾರ್ಧದಲ್ಲಿ ದಕ್ಷಿಣ ಕನ್ನಡ ಹಾಗೂ ಇತರ ಕಡೆಗಳಿಂದ ಪ್ರಕಟಗೊಳ್ಳುತ್ತಿದ್ದ ಕನ್ನಡದ ಅಪೂರ್ವ ಪತ್ರಿಕೆಗಳಾದ ನವಯುಗ, ಸ್ವದೇಶಾಭಿಮಾನಿ, ವಸಂತ, ಜೀವನ, ಶ್ರೀಕೃಷ್ಣ ಸೂಕ್ತಿ, ಕನ್ನಡ ಸಹಕಾರಿ ಹೀಗೆ ಅನೇಕ ಪತ್ರಿಕೆಗಳ ಹಳೆಯ ಸಂಪುಟಗಳು ಅಲ್ಲದೆಯೇ, ಕನ್ನಡ ಬರಹಗಾರರ ಬಗೆಗಿನ ಹಳೆಯ ಪತ್ರಿಕಾ ತುಣುಕುಗಳನ್ನು ಸಂಗ್ರಹಿಸಿ ಜೋಡಿಸಿರುವ ದಿವಂಗತ ಚಂದ್ರರಾಜ ಸೆಟ್ಟಿಯವರ ಕನ್ನಡ ಬರಹಗಾರರ ಬಳಗದ ಸಂಪುಟಗಳು, ರಾಜ್ಯದ ವಿವಿಧ ವಿಶ್ವವಿದ್ಯಾನಿಲಯಗಳ ಪ್ರಸಾರಾಂಗ ಪ್ರಕಟಣೆಗಳು, ಲಂಡನ್ನಿನ ಬ್ರಿಟಿಷ್ ಲೈಬ್ರರಿಯಿಂದ ತರಿಸಿಕೊಂಡ ಕನ್ನಡ, ತುಳು ಭಾಷೆ, ಸಾಹಿತ್ಯ, ಸಂಸ್ಕೃತಿ ಹಾಗೂ ಪತ್ರಿಕೆಗಳಿಗೆ ಸಂಬಂಧಿಸಿದ ಅಪೂರ್ವ ಲೇಖನ-ಕೃತಿ ಸಂಚಿಕೆಗಳ ನೆರಳು ಪ್ರತಿಗಳು ಹೀಗೆ ಅಪೂರ್ವ ಮಾಹಿತಿ, ಆಕರಗಳನ್ನು ಸಂಗ್ರಹಿಸಿ ವಿಭಾಗೀಯ ಗ್ರಂಥಾಲಯವನ್ನು ವಿಸ್ತರಿಸಿದರು. ಸಾಂಸ್ಕೃತಿಕ ನೆಲೆಯಲ್ಲಿ ವಿಭಾಗವನ್ನು ರೂಪಿಸುವ ನೆಲೆಯಲ್ಲಿ ದಕ್ಷಿಣಕನ್ನಡ ಹಾಗೂ ಕೊಡಗು ಜಿಲ್ಲೆಗಳ ನಾನಾ ಊರುಗಳಿಂದ ಶಾಸನ, ನಾಣ್ಯ, ತಾಮ್ರದ ಮೂರ್ತಿಗಳಲ್ಲದೆ ಭೂತಾರಾಧನೆ, ಯಕ್ಷಗಾನ, ಕೃಷಿಗೆ ಸಂಬಂಧಿಸಿದ ಹಾಗೂ ತುಳು ಕೊಡವ ಸಂಸ್ಕೃತಿಗೆ ಸಂಬಂಧಿಸಿದ ಇನ್ನಿತರ ವಸ್ತುಸಾಮಗ್ರಿಗಳನ್ನು ಉತ್ಖನನದ ಮೂಲಕ ಸಂಗ್ರಹಿಸಿ ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳ ಸಾಂಸ್ಕೃತಿಕ ವಸ್ತು ಸಂಗ್ರಹಾಲಯವನ್ನು ಆರಂಭಿಸಿದರು.

ಕೊಡವ ಭಾಷೆ, ಸಾಹಿತ್ಯ, ಸಂಸ್ಕೃತಿ, ಇತಿಹಾಸದ ಕುರಿತು ಐಚ್ಛಿಕ ವಿಷಯದ ಪತ್ರಿಕೆಯೊಂದನ್ನು ಸ್ನಾತಕೋತ್ತರ ಶಿಕ್ಷಣದಲ್ಲಿ ಆರಂಭಿಸಿದರು. ಪ್ರಾಥಮಿಕ ಶಿಕ್ಷಣದಲ್ಲಿ ತುಳುವಿಗೆ ಆದ್ಯತೆ ದೊರೆಯುವ ನಿಟ್ಟಿನಲ್ಲಿ ಹತ್ತೊಂಬತ್ತನೆಯ ಶತಮಾನದಲ್ಲಿ ಬಾಸೆಲ್ ಮಿಷನ್‌ನವರು ತುಳು ಪಠ್ಯಪುಸ್ತಕವನ್ನು ರಚನೆ ಮಾಡಿರುವ ಸಂಗತಿಗಳನ್ನು ಆಧಾರವಾಗಿರಿಸಿಕೊಂಡು ತುಳುವಿನಲ್ಲಿ ಪ್ರಾಥಮಿಕ ಶಿಕ್ಷಣದ ಅಗತ್ಯ ಮತ್ತು ಸಾಧ್ಯತೆಯ ಕುರಿತು ಹಕ್ಕೊತ್ತಾಯಗಳನ್ನು ಮಂಡಿಸಿದರು. ಹೀಗೆ ಕನ್ನಡದ ಜೊತೆಗೆ ತುಳು, ಕೊಡವದ ಪ್ರಾದೇಶಿಕ ಭಾಷೆಗಳಿಗೆ ಮಾನ್ಯತೆ ದೊರೆಯುವಂತೆ ಹಲವು ಯೋಜನೆಗಳನ್ನು ರೂಪಿಸಿದರು. ಕನ್ನಡ ವಿಭಾಗವನ್ನು ಕೇವಲ ಆಕರ ಸಾಮಗ್ರಿಗಳ ಕೇಂದ್ರವನ್ನಾಗಿ ಮಾತ್ರ ವಿಸ್ತರಿಸದೆ ಬೌದ್ಧಿಕ ಚರ್ಚೆಗಳ ಮೂಲಕ ಜ್ಞಾನ ಉತ್ಪತ್ತಿಯ ಕೇಂದ್ರವನ್ನಾಗಿಯೂ ರೂಪಿಸುವ ಪ್ರಯತ್ನವನ್ನು ಹಾವನೂರರು ಮಾಡಿದರು. ಕನ್ನಡ ಸಂಶೋಧನೆಯ ವಿಧಿವಿಧಾನಗಳು, ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು ಕುರಿತಂತೆ ಅವರು ನಡೆಸಿದ ವಿಚಾರಸಂಕಿರಣ, ಕಮ್ಮಟಗಳು ವಿಭಾಗದ ಚರಿತ್ರೆಯಲ್ಲಿ ಮಾತ್ರವಲ್ಲ, ಕನ್ನಡ ಸಾಹಿತ್ಯ ಸಂಶೋಧನೆಯ ಚರಿತ್ರೆಯಲ್ಲೂ ಅಭೂತಪೂರ್ವ ಸ್ಮರಣೆಯಾಗಿ ಉಳಿದಿವೆ. ಈ ಎಲ್ಲ ಸಂಗತಿಗಳನ್ನು ಆತ್ಮೀಯತೆಯಿಂದ ಕೃತಜ್ಞತಾಪೂರ್ವಕವಾಗಿ ನೆನಪಿಸಿಕೊಳ್ಳುತ್ತೇನೆ.

ಕನಕದಾಸ ಸಂಶೋಧನ ಕೇಂದ್ರದ ವತಿಯಿಂದ ಈ ಗ್ರಂಥವನ್ನು ಪ್ರಕಟಿಸಲು ಆಸಕ್ತಿಯನ್ನು ತೋರಿಸಿದ ನಿಕಟಪೂರ್ವ ಕುಲಪತಿಯವರಾಗಿರುವ ಪ್ರೊ. ಕೆ.ಎಂ. ಕಾವೇರಿಯಪ್ಪ ಇವರನ್ನು ಕೃತಜ್ಞತೆಯಿಂದ ನೆನಪಿಸಿಕೊಳ್ಳುತ್ತೇನೆ. ಅಂತೆಯೇ ಪ್ರಸ್ತುತ ಕುಲಪತಿಯಾಗಿರುವ ಪ್ರೊ. ಟಿ.ಸಿ.ಶಿವಶಂಕರಮೂರ್ತಿ ಹಾಗೂ ಕುಲಸಚಿವರಾಗಿರುವ ಪ್ರೊ. ಕೆ. ಚಿನ್ನಪ್ಪ ಗೌಡರ ಸಹಕಾರವನ್ನೂ ಈ ಸಂದರ್ಭದಲ್ಲಿ ವಿಶ್ವಾಸಪೂರ್ವಕವಾಗಿ ನೆನಪಿಸಿಕೊಳ್ಳುತ್ತೇನೆ. ಈ ಗ್ರಂಥದ ಪ್ರಕಟಣೆಯ ಸಂದರ್ಭದಲ್ಲಿ ಅತ್ಯಮೂಲ್ಯ ಸಲಹೆ ಸೂಚನೆಗಳನ್ನು ನೀಡಿರುವ ಪರಿಶೀಲನ ಸಮಿತಿಯ ಸದಸ್ಯರುಗಳಾಗಿರುವ ಹಿರಿಯ ವಿದ್ವಾಂಸರಾಗಿರುವ ಪ್ರೊ. ಅಮೃತ ಸೋಮೇಶ್ವರ ಹಾಗೂ ಪ್ರೊ. ಎ.ವಿ. ನಾವಡರನ್ನು ಗೌರವದಿಂದ ಈ ಸಂದರ್ಭದಲ್ಲಿ ನೆನಪಿಸಿಕೊಳ್ಳುತ್ತೇನೆ. ಜೊತೆಗೆ, ಈ ಗ್ರಂಥದ ಪ್ರಕಟಣೆಯಲ್ಲಿ ಸಹಕರಿಸಿದ ಕೇಂದ್ರ ಸಂಶೋಧನ ಸಹಾಯಕರಾಗಿರುವ ಡಾ. ನದಾಫ, ರಾಧಿಕಾ, ಅಕ್ಷಯ ಹಾಗೂ ಕಚೇರಿ ಕೆಲಸಗಳಲ್ಲಿ ಸಹಕರಿಸಿರುವ ಕುಸುಮಾರವರನ್ನೂ ನೆನಪಿಸಿಕೊಳ್ಳುತ್ತೇನೆ. ಮುದ್ರಣದ ಕೆಲಸಗಳನ್ನು ನಿರ್ವಹಿಸಿರುವ ಮಂಗಳೂರಿನ ಆಕೃತಿ ಪ್ರಿಂಟ್ಸ್‌ನ ಕಲ್ಲೂರು ನಾಗೇಶ್, ಕುಮಾರಿ ಭಾರತಿ ಕೈರಂಗಳ ಹಾಗೂ ಕುಮಾರಿ ಅಶ್ವಿನಿ ಇವರನ್ನೂ ವಿಶ್ವಾಸಪೂರ್ವಕವಾಗಿ ನೆನಪಿಸಿಕೊಳ್ಳುತ್ತೇನೆ.

ಈ ಕೃತಿಯ ಸಂಪಾದಕರಲ್ಲೋರ್ವರಾಗಿರುವ ವಿ. ಕೃಷ್ಣರನ್ನೂ ಕೃತಜ್ಞತೆಯಿಂದ ನೆನಪಿಸಿಕೊಳ್ಳುತ್ತೇನೆ.

**ಡಾ. ಬಿ. ಶಿವರಾಮ ಶೆಟ್ಟಿ**

# ಅ

**ಸಂಖ್ಯೆ – ಶಬ್ದ (ಅರ್ಥ) – ಪ್ರಯೋಗವಾಕ್ಯ – ಕೀರ್ತನೆಯ ಆರಂಭದ ಸಾಲು – (ಆಕರ – ಕೀರ್ತನೆಯ ಸಂಖ್ಯೆ – ನುಡಿಯ ಸಂಖ್ಯೆ)**

೧. **ಅಂಕ** (ಗುರುತು) – ಹರಿಣಾಂಕನಿಲ್ಲದಿಹ ಇರುಳು ಮರುಳು
– ಎನ್ನ ನುಡಿ ಪುಸಿಯಲ್ಲ (ಸ–೪೭–೧)
೨. **ಅಂಕ** (ತೊಡೆ) – ಪಂಕಜನ ತಾಯಿ ಸುತನ ಅಂಕದಲ್ಲಿ ಹುಟ್ಟಿ ಜಗವ ಮಂಕು ಮಾಡುತಿಪ್ಪ ಮಾಯೆ ಹತ್ತು ಶಂಕೆಯ
–ಎರಡು ಸಾವಿರದ ಜಿಹ್ವೆಯುರಗ (ಸ–೪೮–೫)
೩. **ಅಂಕ** (ಮಲ್ಲ) – ಛಲದಂಕನೆಂಬುದಕೆ ಬಾಣನು ಹಿರಣ್ಯಕನು ಜಲಧಿ ದಶಮುಖ ಕಾರ್ತವೀರ್ಯ ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ–೫೦–೨)
೪. **ಅಂಕ** (ಯುದ್ಧ) – ಅಂಕಕೆ ರಥವ ನಡಿಸಿದವರೊಳು ನಿಶ್ಶಂಕ ಧರ್ಮವ ಗೆದ್ದ ಹಿರಿಯರೊಳು
–ಶೇಷಶಯನ ನಿನ್ನ ಭಾಗವತರ (ಬೆ–೨೭–೪)
೫. **ಅಂಕಿತ** (ಮುದ್ರಿಕೆ) – ಅಂಕಿತಕೆ ಗುರುತೇನು ಅಜನ ಗುಣವೇನು
– ಬಲ್ಲವರು ಪೇಳರೈ (ಬೆ–೧೬೩–೧)
೬. **ಅಂಕಿತ** (ಗುರುತುಮಾಡಲ್ಪಟ್ಟ) – ದುಷ್ಕೃತದಿ ಸುತನ ಪೆಸರ್ಗೊಂಡವನ ಕಾಯ್ದೆಯೊ ತ್ರಿವಿಕ್ರಮಾಂಕಿತ ವೀರನಾರಾಯಣಾ
– ನಾರಾಯಣಾ ನಮೋ (ಬೆ–೫೧–೨)
೭. **ಅಂಗಜ** – ಅಂಗಜ ವಿಷಯಗಳನು ತೊರೆದಾತಗೆ ಅಂಗನೆಯರ ಸುಖ ಸೊಗಸೀತೆ
– ಕೇಶವನೊಲುಮೆಯು ಆಗುವ ತನಕ (ಸ–೮೯–೬)
೮. **ಅಂಗಜಪಿತ** (ಕೃಷ್ಣ/ವಿಷ್ಣು) – ಅಂಗಜಪಿತ ನೆಲೆಯಾದಿಕೇಶವ ಅಂತರಂಗದೊಳಿರುವ ಮಾಸಾಳಮ್ಮ
– ತಾಳಲ್ಲಲ್ಲಲ್ಲಯ್ಯೋ ಮಾಸಾಳಲ್ಲಲ್ಲಲ್ಲಯ್ಯೋ (ಸ–೧೧೦–೧೧)
೯. **ಅಂಗಡಿ** – ದೇವರಿಲ್ಲದ ಗುಡಿಯು ಹಾಳು ಬಿದ್ದಂಗಡಿಯು
– ಅಹುದಾದರಹುದೆನ್ನಿ (ಬೆ–೧೩೧–೧)
– ಅಂಗಡಿಬೀದಿಯೊಳೊಂದು ಆಕಳ ಕರು ನುಂಗಿತು
– ಎಂದೆಂದು ಇಂಥ ಚೋದ್ಯ (ಬೆ–೧೬೬–೧)
೧೦. **ಅಂಗದ** (ವಾಲಿಯ ಮಗ) – ಕದನದಲಿ ಕಲಿ ಹನುಮ ಸುಗ್ರೀವ ಜಾಂಬವಾಂಗದ ಶಬರಿ ದ್ರೌಪದಿಯರು
– ಪೂಸರನ ಜನಕನೇ (ಬೆ–೧೬೮–೩)
೧೧. **ಅಂಗನೆ** – ಒಡಲೆರಡೊಂದಾಗದನಕ ಅಲ್ಲಿ ಒಡಗೂಡಿ ಅಂಗನೆ ನುಡಿಗೇಳದನಕ
– ಸದರವಲ್ಲವೊ ನಿಜಯೋಗ (ಸ–೨೪೩–೧)
– ಅಂಗನೆ ಸತಿ ಇರಲಿಕ್ಕೆ ಬಣಗು ಹೆಣ್ಣುಗಳೇಕೆ
– ಮರೆಯದಿರು ಮರೆಯದಿರು (ಬೆ–೩೬–೧)
– ಉರಿಯೊಳಗೆ ಜನಿಸಿದಂಗನೆಯ ನಿಜಸುತರು ಮಂದಿರದೊಳೈವರು ನಿದ್ರೆಗೈಯ್ಯುತಿರಲು
– ನೀನಾವ ಬಾಂಧವನೊ (ಬೆ–೭೮–೯)
– ಸಕಲ ಜೀವರಾಶಿಗಳ ಕಲ್ಪಿಸುವ ಬೀಜ ಸುಖದಿಂದ ಮಾಯಾಂಗನೆಯರೊಡಲೊಳು
– ಜಗದಂತರ್ಯಾಮಿ ಎಂತೆಂದು (ಬೆ–೫೮–೩)
೧೨. **ಅಂಗಲಿಂಗ** – ಲಿಂಗಾಂಗದೊಳಗಿರುವ ಅನುಭವವ ತಿಳಿಯದೆ ಅಂಗಲಿಂಗದ ನೆಲೆಯ ಗುರುತರಿಯದೆ
– ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ–೧೩೮–೪)
೧೩. **ಅಂಗುಲಿ** – ಶ್ರೀ ಕರಾಂಬುಜದಿಂ ಪಾದಾಂಗುಲಿಯಂ ಪಿಡಿದು ಬಾಯೊಳಿಟ್ಟು
– ಮಗುವು ಕಾಣೀರಯ್ಯ (ಸ–೧೯೯–೨)
೧೪. **ಅಂಗೈ** – ಅಂಗೈಯ ಒಳಗಿನ ಅನುವಾದ ಪಾಯಸ ಮುಂಗೈಯ ಮೇಲಿನ ಕಂಡ ಕಲೆಯ
– ಮುಟ್ಟದಿರೊ ಎನ್ನನು (ಬೆ–೧೦೨–೩)
೧೫. **ಅಂಘ್ರಿ** – ಕಾಗಿನೆಲೆಯಾದಿಕೇಶವನ ಅಂಘ್ರಿ ನೆನೆಯದಿಹ ಭಾಗವತರ ಸಂಗ ಬಲು ಭಂಗ ಎಲೊ ರಂಗ
– ಸಜ್ಜನರ ಸಂಗದೊಳಗಿರಿಸೆನ್ನ (ಸ–೨೪೧–೩)
– ತಾಮರಸಾಂಘ್ರಿಯಿಂ ಹೇಮಗರ್ಭದಲಿದ್ದ

ವ್ಯೋಮಗಂಗೆಯ ಪೆತ್ತ ಗೋವಿಂದ
- ಪರಮ ಪುರುಷ ಹರಿ ಗೋವಿಂದ
(ಬೆ-೩೯-೫)
- ಸೃಷ್ಟಿಯೊಳು ಕಾಗಿನೆಲೆಯಾದಿಕೇಶವನಂಘ್ರಿ ಮುಟ್ಟಿ ಮನದಲಿ ಭಜಿಸೊ ಭ್ರಷ್ಟಜೀವನವೆ
- ಈ ಸಿರಿಯ ನಂಬಿ ಹಿಗ್ಗಲು ಬೇಡ
(ಸ-೪೦-೩)
- ವಿಶೇಷ ನಿಮ್ಮಂಘ್ರಿಯ ನಂಬಲಾರದೆ ಕೆಟ್ಟ ದೋಷಕನು ನಾನಾದೆ ವರದಾ
- ಮೊರೆಹೊಕ್ಕೆ ಹರಿ ನಿಮ್ಮ ಚರಣಕಮಲವ
(ಸ-೨೧೩-೬)
- ಸೃಷ್ಟಿಯೊಳು ಕಾಗೆನೆಲೆಯಾದಿಕೇಶವನಂಘ್ರಿ ಬಿಟ್ಟು ನೆನೆದಾ ನರನು ಅವ ಕಾಡು ಮರನು
- ಅಹುದಾದರಹುದೆನ್ನಿ (ಬೆ-೧೩೧-೫)
- ಮರ್ತ್ಯದೊಳು ಕಾಗೆನೆಲೆಯಾದಿಕೇಶವನಂಘ್ರಿ ಅರ್ತಿಯಿಂದಲಿ ಕೂಡಿದುದಕೆ ಫಲವೇನು
- ಬಲ್ಲವರು ಪೇಳಿರೈ (ಬೆ-೧೬೩-೩)
- ಸಿಕ್ಕುಮಾಡದೆ ಕಾಗೆನೆಲೆಯಾದಿಕೇಶವನೆ ದಿಕ್ಕಾಗಿ ಎನ್ನ ನಿನ್ನಂಘ್ರಿಯೊಳಿರಿಸೊ
- ಏನು ಮಾಡಲಯ್ಯ ಬಯಲಾಸೆ ಬಿಡದು
(ಬೆ-೧೧೮-೫)
- ರಂಗನಾಥ ನಿನ್ನಂಘ್ರಿಗೆರಗುವೆನೊ ಅಂಗವನು ನಿನಗೆ ನಾ ಸಲಿಸುವೆನು
- ಹೂವ ತರುವರ ಮನೆಗೆ (ಬೆ-೪೩-೧)

**೧೬. ಅಂಘ್ರಿಕಮಲ/ಬಿಸಜ/ವಾರಿಜ**- ಧೀರ ತನು ಧುರದುಂಡಿ ಹನುಮಯ್ಯರಿಂ ಸೇವಿಸಿದ ನಿಮ್ಮಂಘ್ರಿಕಮಲವ ದೂರ ಮಾಡದೆ
- ಎಷ್ಟು ಪೊಗಳಲಿ ನಾನು (ಸ-೫೩-೩)
- ವಸುಧೇಶ ಕಾಗೆನೆಲೆಯಾದಿಕೇಶವನಂಘ್ರಿ ಬಿಸಜವನು ಕಂಡು ನೀ ಸುಖಿಯಾಗು ಮನುಜಾ
- ತನ್ನ ಪ್ರಾಪ್ತಿಯ ಫಲವ (ಬೆ-೧೧೨-೩)
- ಮಾರಪಿತ ಕಾಗೆನೆಲೆಯಾದಿಕೇಶವನಂಘ್ರಿ ವಾರಿಜವ ನೆರೆನಂಬದವನೆ ಕುರುಬ
- ನಾವು ಕುರುಬರು (ಬೆ-೧೫೭-೫)
- ಧೀರ ತನು ಧುರದುಂಡಿ ಹನುಮಯ್ಯರಿಂ ಸೇವಿಸಿದ ನಿಮ್ಮಂಘ್ರಿಕಮಲವ ದೂರ ಮಾಡದೆ
- ಎಷ್ಟು ಪೊಗಳಲಿ ನಾನು (ಸ-೫೩-೩)

**೧೭. ಅಂಚ** ( ವೈಕುಂಠ? ಅಂಚು?) - ಕಿಂಚಿತ್ತು ಹರಿಯ ನಾಮಾಮೃತ ನೆನೆಯಲು ಅಂಚಕೆಳೆದೊಯ್ದವರು ವಿಷ್ಣುದೂತರಲ್ಲವೆ
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೨)

**೧೮. ಅಂಜನಾಸೂನು** (ಹನುಮಂತ) - ಅಂಜನಾಸೂನು ಫಣಿಪತಿ ಗರುಡ ಪ್ರಹ್ಲಾದ ಕುಂಜರಾಧಿಪ ಬಲಿ ವಿಭೀಷಣ ಧ್ರುವ
- ತಂಗದಿರನನಿಮಿಷ ತಾರಕೆಗಳು
(ಬೆ-೧೭೯-೩)

**೧೯. ಅಂಜನೆ** - ಅಂಜನೆಯ ವರಸೂನು ಆಶ್ರಿತ ಕಾಮಧೇನು ಮಂಜುಳ ಗಾನ ಗೀತ ಪರಮ ವಿಖ್ಯಾತ
- ಕದರಮಂಡಲಗಿಯ ಕರುಣಿ ಹನುಮರಾಯ (ಸ-೭೫-೧)

**೨೦. ಅಂಜನೆಯಾತ್ಮಜ** (ಹನುಮಂತ/ಭೀಮಸೇನ) - ಅಂಜನೆಯಾತ್ಮಜ ಅಗಣಿತ ಬಲವಂತ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ
(ಸ-೧೯೩-೧)

**೨೧. ಅಂಜಿಕೆ** - ಅಂಜದಿದ್ದವರಿಗೆ ಅಂಜಿಕೆ ತೋರುವ ಮುತ್ತು
- ಮುತ್ತು ಬಂದಿದೆ ಕೇರಿಗೆ (ಸ-೨೧೦-೨)

**೨೨. ಅಂಜಿಸು** - ತಂದೆಯ ಮುಂದೆ ಪತ್ನಿಯ ಪಿಡಿದೆಳೆದು ಅಂಜಿಸಲು
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ
(ಸ-೧೪೫-೧)
- ಅಗಣಿತ ಮಹಿಮನ ಅಂಜಿಸಲೇಕಮ್ಮ ಬಗೆಯಬಾರದೆ ನಿಮ್ಮ ಮಕ್ಕಳಂತೆ
- ಇಂದು ಸೈರಿಸಿರಿ ಶ್ರೀಕೃಷ್ಣನ
(ಬೆ-೧೦೫-೧)
- ಸಂಜೆ ಬೈಗಿನಲ್ಲಿ ಕರೆಯುವ ಸತಿಯರ ಅಂಜಿಸಿದ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ
(ಬೆ-೧೦೧-೨)

**೨೩. ಅಂಜು** - ಸಂಜೀವನವ ತಂದ ವ್ಯೋಮಮಾರ್ಗದಿ ಬಂದ ಅಂಜದ ಗುಣವಂತನೆ ಹಣುವಂತನೆ
- ಕದರಮಂಡಲಗಿಯ ಕರುಣಿ ಹನುಮರಾಯ (ಸ-೭೫-೧)

- ದಂಡಿಗಂಜುವ ಬಂಟ ಒಡೆದ ಹರವಿಯ ಕಂಟ
- ಅಹುದಾದರಹುದೆನ್ನಿ (ಬೆ-೧೩೧-೪)
- ಗಂಡಗಂಜದ ನಾರಿಯವಳೆ ಹೆಮ್ಮಾರಿ
- ಅಹುದಾದರಹುದೆನ್ನಿ (ಬೆ-೧೩೧-೪)
- ಅಂಜದೆ ಗೊಲ್ಲ ಪಳ್ಳಿಯೊಳಗೆ ಹಾಲ ನೆಂಜಲಿಸಿದ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೨)
- ಸಾವಿಗಂಜದೆ ಕೊರಳನುತ್ತರಿಸಿಕೊಳಬಹುದು
- ವಾಸುದೇವಾಯ ನಮೋ (ಬೆ-೯೦-೨)
- ಆರಿಗಂಜೆನೊ ನಾನು ಅಧಿಕಪುರಿ ಕಾಗೆನೆಲೆ ಯಾದಿಕೇಶವ ರಾಯ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೫)
- ಸುತನ ಮೇಲಣ ಮೋಹಕಂಜಿ ಹೇಳದಲೆ ಇಹ ಗತಲೋಚನದ ಮಾವನು
- ವಾಸುದೇವಾಯ ನಮೋ (ಬೆ-೯೦-೩)
- ಪಕ್ಷಿವಾಹನ ನೀನು ಅಂಜಬೇಡ ಎನುತಲಿ ರಕ್ಷೆ ಇಡುವ ಪುಣ್ಯವನೆಂತು ಪಡೆದಳಯ್ಯ
- ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ-೧೯೫-೪)
- ಏಕಂಜುವಿ ಎಲೊ ಶ್ರೀ ಹರಿ ಕರುಣಿಸದಲೆ ಒಂದಾಗದು
- ಬೆರೆಯದಿರು ಬೆರೆಯದಿರು (ಬೆ-೧೪೪೪-ಪ)
- ಕೆಂಜಾಜಿಯ ಮಣಿಮಲ್ಲಿಗೆ ದಂಡೆಯರಂಜೆ ಕದ್ದ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೨)
- ತರುಣಿ ತನ್ನಿನಿಯನ ಮುಟ್ಟಲಂಜಿ ದೂರ ದಲಿ ಪೊರೆವರು ತನಗಾರು ಹೇಳೆಂಬಳು
- ಆರು ಸಂಗಡ ಬಾಹೋರಿಲ್ಲ (ಬೆ-೧೫-೪)

೨೪. **ಅಂಡ** - ತತ್ತಿಯಾದ ಬ್ರಹ್ಮನೀಗೆ ದಿಕ್ಕು ಅಖಿಲಾಂಡವೆಲ್ಲ ಹೆತ್ತ ತಂದೆಗಾದವನೆ ನಿತ್ಯ ವುಳ್ಳವ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೪)

೨೫. **ಅಂಡಜತುರಂಗ** (ವಿಷ್ಣು) - ಪರಮಾತ್ಮ ಪರಿಪೂರ್ಣ ಪುಂಡರೀಕಾಕ್ಷ ರಕ್ಷಿಸು ಎಂದು ಮೊರೆಯಿಟ್ಟಳಂಡಜತುರಂಗಗಾಗ
- ವಾಸುದೇವಾಯ ನಮೋ (ಬೆ-೯೦-೧)

೨೬. **ಅಂಡಲೆ** (ಹಿಂಸಿಸು) - ಕಂಡಿಗಳು ಒಂಬತ್ತು ಕಳಬಂಟರೈವರು ಅಂಡಲೆವುದೊತ್ತಿ ನಲಿ ಷಡ್ವರ್ಗವು
- ಎಂದಿದ್ದರೀ ಕೊಂಪೆ ಎನಗೆ ನಂಬಿಕೆ ಯಿರದು (ಬೆ-೧೦_೨)
- ಅಂಡಲೆದು ಸೀರೆಯನು ಸೆಳೆಯುತಿರೆ ದ್ರೌಪದಿಯು ಕಂಡು ಮನದಲಿ ಬೆದರಿ
- ವಾಸುದೇವಾಯ ನಮೋ (ಬೆ-೯೦-೧)
- ಅಂಡಲೆದು ಓಡುವ ವ್ಯಾಘ್ರಾನುಚರ್ಮ ಕಂದ(?)
- ಸಿಂಗರದ ಸಿರಿಧರನೆ (ಬೆ-೧೬೭-೩)

೨೭. **ಅಂತಃಕರಣ** - ಸಿರಿವರದನೆ ಅಂತಃಕರಣ ಕೊಪ್ಪಿದ ನಿನ್ನ ಇರವನೆ ತಿಳಿಯಲು ನರರ ವಶವೆ ಸ್ವಾಮಿ
- ಕ್ಷಮಿಸುವುದೆನ್ನ ತಪ್ಪುಗಳ (ಬೆ-೬೧-೧)

೨೮. **ಅಂತಕ** - ನಿರ್ಜರಾದಿ ಮುನಿಗಳ ಕಂಡೆ ದುರ್ಜನಾಂತಕನೆ ಶ್ರೀರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-೩)
- ಅಕ್ಷಾಸುರಾಂತಕಗೆ ಅಜಪದವನಿತ್ತವನೆ
- ವಾಸುದೇವಾಯ ನಮೋ (ಬೆ-೯೦-೭)

೨೯. **ಅಂತರ** (ವ್ಯತ್ಯಾಸ) - ಅಂತರವರಿಯದಾ ದೇಶಿ ಹೇಸಿ
- ಎನ್ನ ನುಡಿ ಪುಸಿಯಲ್ಲ (ಸ-೪೭-೨)
- ರಜ ತಮ ಗುಣ ಪ್ರವರ್ತಕ ಮೂಲಾಂತರ ದಿಂದ ಯಜಮಾನತನದ ಅಹಂಕಾರ ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೧)
- ಇಂತೆಸೆವ ಲೀಲಾ ವಿನೋದ ರಚನೆಯಲಿ ಲೋಕಾಂತರಗಳೆಲ್ಲವನು ಸಂತೈಸುವ
- ಬೊಂಬೆಯಾಟವನಾಡಿಸಿದ (ಬೆ-೭೯-೫)

೩೦. **ಅಂತರಂಗ** - ರಂಗನಂತರಂಗ ಹಲವಂಗ ತಿಳಿಯದು ಬ್ರಹ್ಮಾದಿಗಳಿಗೆ
- ರಂಗನೆಂಥವನೆಂಥವನೆಲೆ ತಂಗಿ (ಸ-೨೨೨-ಪ)
- ಅಂತರಂಗದೊಳಗೆ ಅಷ್ಟ ಜ್ಯೋತಿಯನಿಟ್ಟು ದಂತಿ ಎಂಟನು ಪಿಡಿದು ತರಿದು ಬಿಸುಟು
- ನಿಜವರಿತು ಲಿಂಗವನು ಪೂಜೆ ಮಾಡುವರು (ಸ-೧೪೨-೪)
- ಚಿಂತೆಯನೆಲ್ಲ ಒತ್ತಟ್ಟಿಗೆ ಇಟ್ಟು ಅಂತರಂಗ

ದಲಿ ಧ್ಯಾನಿಸುತ
-ರಾಮ ನಾಮವ ನೆನೆ ಮನವೆ (ಸ-೨೨೬-೩)
- ಅಂಗಜಪಿತ ನೆಲೆಯಾದಿಕೇಶವ ಅಂತರಂಗ ದೊಳಿರುವ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೧೧)
- ಅಂತರಂಗದಲೊಂದು ಅರ್ಧದೇಹ ದಲೊಂದು ಚಿಂತೆಯನುಗೊಳಲೇಕೊ ಪಂಚರಿವ ರಿರಲು
- ಒಲ್ಲೆನೆಂದರಾಗುವುದೆ (ಬೆ-೧೧೦-೩)

೩೧. **ಅಂತರಾತ್ಮ** - ಆಂತರ್ಯದ ಸಂತತ ಭೇರಿ ಶಬ್ದವ ಕೇಳಿ ಅಂತರಾತ್ಮ ಲಿಂಗವ ಪೂಜಿಪರ ತೋರು
- ನಿಜವರಿತು ಲಿಂಗವನು ಪೂಜೆ ಮಾಡುವರು (ಸ-೧೪೨-೪)

೩೨. **ಅಂತರಾತ್ಮಕ** - ಅಂತರಾತ್ಮಕ ಕೃಷ್ಣ ದ್ವಾರಕಾಪುರದೊಳಗೆ ಕಾಂತೆ ರುಕ್ಮಿಣಿಸತ್ಯಭಾಮೆ ಯರ ಒಡನೆ ಏಕಾಂತ ಭವನದೊಳು ತಿಳಿದು
- ವಾಸುದೇವಾಯ ನಮೋ (ಬೆ-೯೦-೯)

೩೩. **ಅಂತರ್ಯಾಮಿ** - ಜಗದಂತರ್ಯಾಮಿ ಎಂತೆಂದು ನಿನ್ನ ನಿಗಮ ಸಾರುವ ಮಾತು ಪುಸಿಯೆ ಕೋನೇರಿ ತಿಮ್ಮ
- ಜಗದಂತರ್ಯಾಮಿ ಎಂತೆಂದು (ಬೆ-೫೮-ಪ)

೩೪. **ಅಂತಸ್ಥ** - ಅಂತಸ್ಥವಿಲ್ಲದ ಪ್ರಧಾನಿ ಮದ್ಯಪಾನಿ
- ಎನ್ನ ನುಡಿ ಪುಸಿಯಲ್ಲ (ಸ-೪೭-೨)

೩೫. **ಅಂದುಗೆ** - ಕಾಲಲಂದುಗೆ ಗೆಜ್ಜೆ ತೋಳ ಮಣಿಯು ದಂಡೆ ಫಾಲದ ಅರಳೆಲೆಯು ಕುಣಿಯೆ
- ಮಗನೆಂದಾಡಿಸುವಳು ಮೊಗ ನೋಡಿ ನಗುವಳು (ಸ-೧೯೫-೧)

೩೬. **ಅಂಧ** - ಅಂಧನ ಕೈಯಲಿ ಕೋಲಿತ್ತು ಕರೆದೊಯ್ವ ಮುಂದಾಡಿ ತಪ್ಪಿ ಗುಂಡಿಗೆ ಕೆಡಹಲು
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೨)

೩೭. **ಅಂಧಂತಮಸು** (ಒಂದು ನರಕ) - ಅಂಧಂತಮಸು ಇನ್ನಾರಿಗೆ ಗೋವಿಂದನ ನಿಂದಿಸುವರಿಗೆ
- ಅಂಧಂತಮಸು ಇನ್ನಾರಿಗೆ (ಬೆ-೮೯-ಪ)

೩೮. **ಅಂಧಕ** (ಕುರುಡ) - ಬಂದದ್ದು ಬಚ್ಚಲಗುಣಿ ತಿಂದದ್ದು ಮೊಲೆ ಮಾಂಸ ಇಂಥ ಅಂಧಕಗೆ ನನಗಿನ್ಯಾತರ ಕುಲವಯ್ಯ
- ಯಾತರವನೆಂದುಸುರಲಿ (ಸ-೨೧೮-೨)
- ಅಂಧಕನನುಜನ ಕಂದನ ತಂದೆಯ ಕೊಂದನ ಶಿರದಲಿ ನಿಂದವನ
- ಮಂಗಲಂ ಜಯ ಮಂಗಲಂ (ಬೆ-೧೭೨-೧)
- ಅಂಧಕನದು ತಪ್ಪೊ ಮುಂದಾಡಿಯ ತಪ್ಪೊ ಹಿಂದಾಡಬೇಡ ಎನ್ನಲಿ ತಪ್ಪಿಲ್ಲವೋ ದೇವ
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೨)
- ಮಾಣಿಕ್ಯದ ರಾಶಿಯಲ್ಲಿ ಅಂಧಕರ್ಯೆವರ ಕೂಡಿ ಆಣಿಮುತ್ತ ಹಿಡಿದು ಹಿಡಿದು ಬಿಡುವ ಭ್ರಮಿತ ನಾನಯ್ಯ
- ಎಳ್ಳು ಕಾಳನಷ್ಟು ಭಕ್ತಿ (ಬೆ-೧೨-೨)

೩೯. **ಅಂಧನೃಪಾಲ/ಅಂಧರಾಯ** (ಧೃತರಾಷ್ಟ್ರ) - ಅಂಧನೃಪಾಲನ ಕಂದಗಳೆಲ್ಲರ ಕೊಂದೈವರ ಭಾವನ
- ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೨)
- ಅಂಧರಾಯನಾತ್ಮಜರು ಮದಾಂಧರಾಗಿ ಮಲೆತು ಗೋತ್ರಬಂಧುಗಳನು ಲೆಕ್ಕಿಸದೆ
- ನಂಬಬೇಡಿ ಸಿರಿಯು ತನ್ನದೆ (ಬೆ-೧೧೫-೨)

೪೦. **ಅಂಬಕ** (ಕಣ್ಣು) - ದುಃಖವಾದಡೆ ದುಃಸ್ಥಿತಿಯಲಿರಲು ಅಂಬಕದಲಿ ಜಲ ಪೋಗು ವದೇಕೋ
- ಬೆರೆಯದಿರು ಬೆರೆಯದಿರು (ಬೆ-೧೪೪-೧)
- ದುಃಖವಾದಡೆ ದುಃಸ್ಥಿತಿಯಲಿರಲು ಅಂಬಕ ದಲಿ ಜಲ ಪೋಗುವದೇಕೊ?
- ಬೇಕೆಂದರೆ ಬಾರದು (ಸ-೧೮೭-೧)

೪೧. **ಅಂಬರ** (ಆಕಾಶ) - ಆಧಕದೊಳಗಂಬರ ವನಳೆದು ಲೆಕ್ಕ ಕೂಡಿದ ಮಿತಿಯ ಪೇಳಲು ಬಹುದು
- ಕ್ಷಮಿಸುವುದೆನ್ನ ತಪ್ಪುಗಳ (ಬೆ-೬೧-೨)

– ಸುರನಾರದರು ಕೂಡಿ ನೆರೆದರಂಬರದಲ್ಲಿ
– ವಾಸುದೇವಾಯ ನಮೋ (ಬೆ–೯೦–೧೩)
– ಅಡಿಯನಂಬರ ಮಾಡದನಕ ಅಗ್ನಿ ಕಿಡಿಯೆದ್ದು ಮೇಲಣ ಕೊಡನುಕ್ಕದನಕ
– ಸದರವಲ್ಲವೊ ನಿಜಯೋಗ (ಸ–೨೪೩–೧)
– ಸುರರು ಅಂಬರದಿ ಸಂದಣಿಸಿರೆ ಅಪ್ಸರ ಸ್ತ್ರೀಯರು ಮೈಮರೆದಿರೆ
– ಯಾದವರಾಯ ಬೃಂದಾವನದೊಳು (ಸ–೨೨೦–೧)

**೪೨. ಅಂಬರ** (ಆಕಾಶ) – ಕಡಗ ಕೇಳಿದರಲ್ಲಿ ಕಡಗ? ಅಂಬರದ ಗುಡುಗ?
– ಎಂಥ ಟವಳಗಾರನಮ್ಮ – (ಸ–೪೩–೫)

**೪೩. ಅಂಬರ** (ಬಟ್ಟೆ) – ಅಂಬರ ತೊರೆಯಲೇಕೆ ತಾಂಬೂಲ ಬಿಡಲೇಕೆ ಡಂಭತನದಲ್ಲಿ ನೀನಿರಲೇತಕೆ
– ನೇಮವಿಲ್ಲದ ಹೋಮ ವೇತಕಯ್ಯ (ಬೆ–೧೭–೨)
– ನೆಟ್ಟ ಕಾವಿ ಕಾಷಾಯಾಂಬರಗಳನು ಉಟ್ಟವರಿಗೆ ಬಂಟನೆಂದೆನಿಸೆನ್ನ
– ದೇಶಾಧಿಪತಿ ನರಹರಿಯೆ (ಬೆ–೨೧–೬)

**೪೪. ಅಂಬರೀಷ**– ಚಿತ್ತಜಾರಿ ಕೊಲ್ಲಲಂಬರೀಷ ಭೂಪೋತ್ತಮನ ಕಾಯ್ದೆ ಶ್ರೀ ನಾರಾಯಣಾ
– ನಾರಾಯಣಾ ನಮೋ (ಬೆ–೫೧–೧)
– ಅಖಿಳ ಸುವ್ರತ ಕ್ಷೋಣಿಯಿಂದಲಿ ಹಿರಿಯ ಪ್ರಕೃತಿರಹಿತಾಂಬರೀಷ
– ಸಿಂಗರದ ಸಿರಿಧರನೆ (ಬೆ–೧೬೭–೨)
– ಶುಕ ವ್ಯಾಸ ದುರ್ವಾಸ ಕುಂಭಸಂಭವರು ಕೌಶಿಕ ಪರಾಶರ ಅಂಬರೀಷ ಗೌತಮರು
– ಪೂಸರನ ಜನಕನೇ (ಬೆ–೧೬೮–೪)
– ಶರಣರಿಚ್ಛೆಯಲಿ ನೀನಿದ್ದುದಕೆ ದ್ರೌಪದಿಯು ಕರಿರಾಜ ಶಂಭು ಅಂಬರೀಷ ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ–೫೦–೧)
– ಋಷಿಯ ಶಾಪವ ತರೆದು ಅಂಬರೀಷನ ಕಾಯ್ದೆ
– ವಾಸುದೇವಾಯ ನಮೋ (ಬೆ–೯೦–೬)
– ಅಂಬರೀಷನು ನಂಬಿ ವೈಕುಂಠವೇರಿದನು ಹಂಬಲಿಸಿ ಶಶಿಧರನು ಉರಿಯ ಗೆದ್ದ
– ನಂಬು ನಾರಾಯಣನ (ಬೆ–೫೩–೨)
– ಕಾಯ ಶುದ್ಧಿಯಲಂಬರೀಷನೋ ನೀನು
–ಬೆರೆಯದಿರು ಬೆರೆಯದಿರು (ಬೆ–೧೪೩–೮)
– ಅಂಬರೀಷರಾಯ ಬಲ್ಲ ಆದಿ ಪುಂಡರೀಕ ಬಲ್ಲ ಸಂಭ್ರಮದಿ ಮನು ಬಲ್ಲ ಸಹದೇವ ಬಲ್ಲ
– ಬಲ್ಲವರೆನಿಪರು ಬಲ್ಲವರರಿಯರು (ಬೆ–೭೩–೪)
– ಅಂಬರೀಷಗೆ ಒಲಿದ ಅಕ್ರೂರಸಖ ನೀನು
– ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ–೬೩–೩)

**೪೫. ಅಂಬು** (ಬಾಣ) – ರಾವಣಗಾಗಿ ಅಂಬು ತೆಗೆದು ಹೂಡ್ದಾ
– ನಾರಾಯಣನೆ ಈತ (ಸ–೧೩೮–೧)

**೪೬. ಅಂಬುಜಜನಯ್ಯ** (ವಿಷ್ಣು) – ಅಂಬುಜ ಜನಯ್ಯನೆ ಬಾರೊ ಆದಿಮೂರುತಿ ರಂಗ
–ಬಾರೊ ನಮ್ಮ ಮನೆತನಕ (ಬೆ–೧೦೬–೩)

**೪೭. ಅಂಬುಜದಳಾಕ್ಷ** – ಅಂಬುಜದಳಾಕ್ಷಗೆ ಮಂಗಳ ಸರ್ವ ಜೀವ ರಕ್ಷಗೆ ಮಂಗಳ
–ಅಂಬುಜದಳಾಕ್ಷಗೆ ಮಂಗಳ (ಬೆ–೧೭೦–ಪ)

**೪೮. ಅಂಬುಜಭವ** (ಬ್ರಹ್ಮ) – ಬೊಂಬೆಯಾಟವನಾಡಿಸಿದ ಮಹಾಭಾರತವ ಅಂಬುಜಭವಾದಿ ಯಾದವರು ಈಕ್ಷಿಸಲು
– ಬೊಂಬೆಯಾಟವನಾಡಿಸಿದ (ಬೆ–೭೯–ಪ)

**೪೯. ಅಂಬುಜಷಂಡ** (ತಾವರೆಯ ಗುಂಪು) – ಸುರವಾದ್ಯ ಮೊಳಗಲಂಬುಜಷಂಡ ಬೀಳ್ವಂದದಲಿ
– ಪೂಸರನ ಜನಕನೇ (ಬೆ–೧೬೮–೨)

**೫೦. ಅಂಬುಜಾಕ್ಷಿ** – ಕುಂಭಿನೀದೇವಿ ತಾ ಬಂಧನವ ಕಳೆದಳು ಅಂಬುಜಾಕ್ಷಿ ದ್ರೌಪದಿಯು ಮಾನ ಉಳುಹಿಕೊಂಡಳು
– ನಂಬು ನಾರಾಯಣನ (ಬೆ–೫೩–೨)

**೫೧. ಅಂಬುಜೋದ್ಭವ** (ಬ್ರಹ್ಮ) – ಅಂಬುಜೋದ್ಭವನ ಬರೆಹವ ಮೀರಲಾರದೆ ನರ ಬೊಂಬೆ ಗರ್ಭದೊಳಿದ್ದೆ ವರದಾ
– ಮೊರೆ ಹೊಕ್ಕೆ ಹರಿ ನಿಮ್ಮ ಚರಣಕಮಲವ (ಸ–೨೧೩–೧)
– ಅಂಬುಜೋದ್ಭವ ರುದ್ರರ ಕಂಡೆ ಶಂಬರಾರಿ ಪಿತನೆ ರಂಗಶಾಯಿ
– ಇಷ್ಟು ದಿನ ಈ ವೈಕುಂಠ (ಬೆ–೨೮–೪)

- ತುಂಬಿ ಕಲೆಗಳನೊತ್ತಿ ನೊಸಲ ಬರೆಹವ ಬರೆವ ಅಂಬುಜೋದ್ಭವ ನಿನ್ನ ಹೆಮ್ಮಗನೈ ದೇವ
- ಜಗದಂತರ್ಯಾಮಿ ಎಂತೆಂದು (ಬೆ-೫೮-೨)

೫೨. **ಅಂಬುಧಿ** - ಒಡೆಯ ಅಂಬುಧಿಯೊಳು ಪೊಕ್ಕು ವೇದವ ತಂದು ತಡೆಯದೆ ಅಜಗಿತ್ತ ನೆಂದೆನುತ
- ಅರಸಿನಂತೆ ಬಂಟನೊ(ಬೆ-೫-೧)
- ಅಮರ ದೈತ್ಯರು ಕೂಡಿ ಅಂಬುಧಿಯ ಕಡೆಯಲಿಕೆ ಕ್ರಮದಿ ಮಂದರಕೆ ಕಟ್ಟಿದ ಶೇಷನ
- ನೋಡಯ್ಯ ನಿನ್ನ ದಾಸರ (ಬೆ-೮೫-೨)
- ಅಂಬುಧಿಗೆ ಶರ ಹೂಡಿದನೆ ಕಮಲಾಂಬಕ ಗೊಲ್ಲರೊಳಾಡಿದನೆ
-ಗೋವಿಂದ ಹರಿ ಗೋವಿಂದ (ಬೆ-೫೬-೨)

೫೩. **ಅಂಭೋಜನಾಭ** (ವಿಷ್ಣು) - ಅಂಭೋಜ ನಾಭನನು ಭಾವದಲಿ ನೆನೆದರೆ ಇಂಬುಂಟು ವೈಕುಂಠಪುರದೊಳಗೆ ಅಯ್ಯ
- ನೇಮವಿಲ್ಲದ ಹೋಮವೇತಕಯ್ಯ (ಬೆ-೧೭-೨)

೫೪. **ಅಉಮ** (ಓಂಕಾರ) - ಉತ್ತಮ ಅಉಮ ಎಂಬ ಓಂಕಾರ ಬೀಜಾಕ್ಷರ ಚಿತ್ತದಲಿ ಗ್ರಹಿಸು ನೀ ಬಿಡಬೇಡ ಬಿಟ್ಟು ಕೆಡಬೇಡ
- ದಾಸನಾಗೋ ಭವಪಾಶ ನೀಗೋ (ಬೆ-೨೦-೨)

೫೫. **ಅಕಳಂಕ** - ಅಕಳಂಕ ಶ್ರೀಹರಿ ಭಕುತಿಗೆ ಮನ ಬೆಳೆದು ರುಕುಮಿಣಿಯರಸ ಕೈವಶವಾದ ನೆನಗೆ
-ಬದುಕಿದೆನು ಬದುಕಿದೆನು (ಸ-೧೭೧-೨)

೫೬. **ಅಕಾರ** (ಅ ಎಂಬ ಅಕ್ಷರ) - ಅಕಾರ ಉಕಾರ ಮಕಾರ ಎಂತೆಂಬ ಓಂಕಾರಕೆ ಕೂಡಿ
-ಆರಿಗಳವಲ್ಲಾತ್ಮ ಯೋಗಸಿದ್ಧಿ (ಬೆ-೧೨೬-೩)

೫೭. **ಅಕಾಲಮೃತ್ಯು** - ಸಾಲದೆ ನಿನದೊಂದು ದಿವ್ಯನಾಮ ಅಕಾಲಮೃತ್ಯುವಿನ ಗಂಟಲಗಾಣ ಹರಿಯೆ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-)

೫೮. **ಅಕ್ಕರ(ರು, ರೆ)** (ಪ್ರೀತಿ) - ದಿಕ್ಕುದೆಸೆ ಯದಾರೊ ಅಕ್ಕರದಿಂದಾರ ಕರೆವೆ ಉಕ್ಕಿ ಸವಿದು ಮನುಜರೊಡನೆ ಸೊಕ್ಕಿ ದಿನವ ಕಳೆದೆನೆನಗೆ ತಕ್ಕುದಾಯಿತಯ್ಯ ಕೇಳು ಒಡೆಯ ಆದಿ ಕೇಶವ
- ಅಹಹ ಮೋಸಹೋದೆನಯ್ಯ (ಸ-೯-೩)
- ಅಕ್ಕರದಿ ಪಿಂಡಾಂಡಗಳ ಕಟ್ಟಿ ಬಲಿಸುವ ಮಕರಾಂಕನೆಂಬವನು ನಿನ್ನ ಕಿರುಮಗ ದೇವ
- ಜಗದಂತರ್ಯಾಮಿ ಎಂತೆಂದು (ಬೆ-೫೮-೩)
- ಶುಕ್ರನುಪದೇಶವನು ತವೆ ಜರಿದ ವೈಷ್ಣವರ ಅಕ್ಕರದಿ ಪಾಲಿಸಿದೆ ನಾರಾಯಣಾ
-ನಾರಾಯಣಾ ನಮೋ (ಬೆ-೫೧-೨)
- ಅಕ್ಕರಿಲ್ಲದವಗೆ ಮಕ್ಕಳಿದ್ದು ಫಲವೇನು
- ಆರು ಬಾಳದರೇನು (ಬೆ-೩೦-೨)
- ಎಕ್ಕನಾತಿ ಎಲ್ಲಮ್ಮ ಮಾರಿ ದುರ್ಗಿ ಚೌಡಿಯರ ಅಕ್ಕರೆಯಿಂದಲಿ ಪೂಜೆಮಾಡಲೇಕೆ
- ದಾನ ಧರ್ಮವ ಮಾಡಿ ಸುಖಿಯಾಗು (ಬೆ-೧೩೯-೧)

೫೯. **ಅಕ್ಕಳೆ** (ಬೇಲಿಯಲ್ಲಿನ ಚಿಕ್ಕ ಬಾಗಿಲು)- ಕಲ್ಲಿಗಟ್ಟಿ ಗೂಡೆಯಲಿ ಗೋಲಿಯ ಚೀಲವನಿಕ್ಕಿ ಹಿಲ್ಲಿ ಕಟ್ವೋಗರ ಕಡಕಲಕ್ಕಳೆಯಾ ತುದಿ ಯಲಿ ನಿಲ್ಲಿಸಿ
- ಮಗುವು ಕಾಣೀರಯ್ಯ (ಸ-೧೯೯-೪)

೬೦. **ಅಕ್ಕಿ** - ಪಕ್ಷಿವಾಹನನ ಗುಣ ಲೆಕ್ಕಿಸಿ ಪೊಗಳದೆ ಬೆಕ್ಕಸ ಬೆರಗಾಗಿ ಅಕ್ಕಿಗೆ ತಿರುಗುವವ
- ಹೇಗೆ ನೀ ದಾಸನಾದೆ (ಬೆ-೨೨-೨೦)
- ತತ್ವಭಾಂಡವ ತೊಳೆಯಬೇಕಣ್ಣ ಸತ್ಯಾತ್ಮನಾಗಿ ಅರ್ತಿ ಅಕ್ಕಿಯ ಮಥಿಸಬೇಕಣ್ಣ
- ಅಡಿಗೆಯನು ಮಾಡಬೇಕಣ್ಣ (ಸ-೧-೨)

೬೧. **ಅಕ್ರೂರ** - ವಾಗಿನಿಂದಕ್ರೂರ ಬಲ್ಲ ವಚನಿ ಶೌನಕ ಬಲ್ಲ ಯೋಗೀಂದ್ರ ಕಪಿ ಬಲ್ಲ ಧ್ರುವ ಬಲ್ಲನು
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-೫)
- ನದಿಸುತನು ಅಕ್ರೂರ ಪಾಂಡವರು ಐವರೂ ಒದಗಿ ಬಂದಿಹರು
- ಪೂಸರನ ಜನಕನೇ (ಬೆ-೧೬೮-೩)
- ವಿದುರನಕ್ರೂರ ಮುಂಜಾವದಲಿ ಮುಮುಕ್ಷು ಗಳು ಬಂದರು
-ತಂಗದಿರನನಿಮಿಷ ತಾರಕೆಗಳು (ಬೆ-೧೬೯-೩)

- ಅಂಬರೀಷಗೆ ಒಲಿದ ಅಕ್ರೂರಸಖ ನೀನು
- ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ-೬೩-೩)
- ಸುಲಭ ಭಕುತರ ಕಾಯ್ವನೆಂಬುದಕ್ಕೆಲೊ ದೇವ ಫಲುಗುಣನು ವಿದುರ ಅಕ್ರೂರ ಹೊಣೆಯೊ
- ನಿನ್ನ ಮಹ ಮಹಿಮೆಗೆ (ಬೆ-೫೦-೨)

೬೨. **ಅಕ್ಷ** (ರಾಕ್ಷಸನ ಹೆಸರು) - ಅಕ್ಷಾಸು ರಾಂತಕಗೆ ಅಜಪದವನಿತ್ತವನೆ
- ವಾಸುದೇವಾಯ ನಮೋ (ಬೆ-೯೦-೭)

೬೩. **ಅಕ್ಷಕುಮಾರ** (ರಾವಣನ ಮಗ) - ಧೀರತನದಲಿ ಅಕ್ಷಕುಮಾರನ ಪ್ರಾಣವನು ಕೊಂಡಗೆ
- ಶರಣು ಶರಣು ದಶರಥರಾಮ ದೂತಗೆ (ಸ-೨೩೬-೧)

೬೪. **ಅಕ್ಷತೆ** - ಸೋರೆಯೊಳು ಸುರೆ ತುಂಬಿ ಮೇಲೆ ಹೂವಿನ ಹಾರಹಾಕಿ ಗೀರು ಗಂಧ ಅಕ್ಷತೆಯ ಧರಿಸಿದಂತೆ ನೀ ಮರಸಿದಂತೆ
- ದಾಸನಾಗೋ ಭವಪಾಶ ನೀಗೋ (ಬೆ-೨೦-೫)

೬೫. **ಅಕ್ಷಯ** - ಅಕ್ಷಯ ಫಲದಾತ ಅಖಿಳ ಲೋಕೇಶ ಲಕ್ಷಣ ಪರಿಪೂರ್ಣ ಲಕ್ಷ್ಮಿಪ್ರಾಣೇಶ
- ಲಾಲಿ ಪಾವನಚರಣ ಲಾಲಿ ಅಘಹರಣ (ಸ-೨೨೯-೪)
- ಯಮಸುತನ ರಾಣಿಗಕ್ಷಯವಸನವನ್ನಿತ್ತೆ ಸಮಯದಲಿ ಅಜಮಿಳನ ಪೊರೆದೆ
- ಬಾಗಿಲನು ತೆರೆದು ಸೇವೆಯನು (ಬೆ-೪೬-೩)
- ದುರುಳ ದುಶ್ಶಾಸ ದ್ರೌಪದಿಯ ಸೀರೆಯ ಸೆಳೆಯೆ ತರುಣಿಗಕ್ಷಯವಿತ್ತು ಕಾಯ್ದೆಯಂತೆ ಹರಿಯೆ
- ಆ ವೇಳೆಯಲ್ಲಿ ಆರಾರ ಕಾಯ್ದೆಯೊ (ಬೆ-೬೬-೨)
- ರಾಕೇಂದುಮುಖಿಯ ದ್ರೌಪದಿಯ ಮಾನವ ಕಾಯ್ದೆ ಆಕೆಗಕ್ಷಯವಿತ್ತೆ ಕೃಷ್ಣ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮-೩)
- ಕೊಂತಿನಂದನರ ಸತಿ ಉಟ್ಟುದಕ್ಷಯವಾಗಿ ಸಂತೋಷಪಡಲೆಂದು ವರವಿತ್ತ ಶ್ರೀಕೃಷ್ಣ
- ವಾಸುದೇವಾಯ ನಮೋ (ಬೆ-೯೦-೯)

೬೬. **ಅಕ್ಷರ** (ನಾಶವಿಲ್ಲದವ) - ಅಕ್ಷರನೆ ಆಟದೊಳು ಜಗವ ಮೋಹಿಪ ಸ್ಥೂಲ ಸೂಕ್ಷ್ಮದೊಳು ಪರಿಪೂರ್ಣನೆ
- ವಾಸುದೇವಾಯ ನಮೋ (ಬೆ-೯೦-೭)

೬೭. **ಅಕ್ಷರ** (ಬರಹ) - ಸರಸಿಜೋದ್ಭವಗೆ ಬುದ್ಧಿಯ ಪೇಳಿ ಪಣೆಯಲ್ಲಿ ಬರೆದ ಅಕ್ಷರವ ತೊಡೆಯಲಾಪೆಯಾ ರಂಗ
- ನೀನೇನ ಮಾಡಲಾಪೆ ರಂಗಯ್ಯ (ಬೆ-೪೮-೩)

೬೮. **ಅಕ್ಷೋಹಿಣಿ** (ಒಂದು ಸಂಖ್ಯೆ) - ಹನುವೊಂದಕ್ಷೋಹಿಣಿ ಬಲವುಳ್ಳ ಕೌರವನು ರಣದೊಳಗೆ ತೊಡೆಮುರಿದು ಬಿದ್ದಿರ್ಪನಂತೆ
- ಆರಿಗಾದರು ಪೂರ್ವಕರ್ಮಬಿಡದು (ಬೆ-೧೦೮-೩)

೬೯. **ಅಖಂಡ** (ಪರಿಪೂರ್ಣನಾದವ) - ಆರು ಚಕ್ರದಿ ಮೆರೆವ ಅಖಂಡನ ಮೂರು ಗುಣವ ತಿಳಿದು
- ದಾಸನಾಗಬೇಕು ಸದಾಶಿವನ (ಬೆ-೨೪-೩)

೭೦. **ಅಖಿಲ** (ಳ) - ತತ್ತಿಯಾದ ಬ್ರಹ್ಮನೀಗೆ ದಿಕ್ಕು ಅಖಿಲಾಂಡವೆಲ್ಲ ಹೆತ್ತ ತಂದೆಗಾದವನೆ ನಿತ್ಯವುಳ್ಳವ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೪)
- ಅಕ್ಷಯ ಫಲದಾತ ಅಖಿಳ ಲೋಕೇಶ ಲಕ್ಷಣ ಪರಿಪೂರ್ಣ ಲಕ್ಷ್ಮಿಪ್ರಾಣೇಶ
- ಲಾಲಿ ಪಾವನ ಚರಣ ಲಾಲಿ ಅಘಹರಣ (ಸ-೨೨೯-೪)
- ಅಖಿಳ ಸುವ್ರತ ಕ್ಷೋಣಿಯಿಂದಲಿ ಹಿರಿಯ ಪ್ರಕೃತಿರಹಿತಾಂಬರೀಷ
- ಸಿಂಗರದ ಸಿರಿಧರನೆ (ಬೆ-೧೬೭-೨)
- ನಾದದಲಿ ಅಖಿಳ ಮಹಿ ನಟಿಸು ಮಹಾತ್ಮಕ ನಾದ ಸಾತ್ತ್ವಿಕನಾವನು
- ಆತನೇ ಪರಮಾತ್ಮ ಪರತತ್ತ್ವ (ಬೆ-೭೪-೩)
- ಸಮರದಲ್ಲಖಿಳ ರಾಜರ ಕೊಂದೆ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೧)
- ಉದ್ಯೋಗಿಸಿದರಖಿಳ ಸಾಧುಗಳು ಅರಿವಿ ಭಾಡನೊಲಿದುಪ್ಪವಡಿಸೊ ಹರಿಯೆ
- ತಂಗದಿರನನಿಮಿಷ ತಾರಕೆಗಳು (ಬೆ-೧೬೬-೧)

– ಭಾನು ಮೊದಲಾದಖಿಳ ಬ್ರಹ್ಮಾಂಡಗಳಿಗೊಂದು ಪಾದ ಹೊದಿಸಿದನಾವನು
– ಆತನೇ ಪರಮಾತ್ಮ ಪರತತ್ತ್ವ (ಬೆ–೭೪–೧)
– ಅಣುವಿಂಗೆ ಅಣುವು ಮಹತಿಂಗೆ ಮಹಿಮನು ಅಖಿಳ ಗುಣಭರಿತ ಪರಮ ಪಾವನ ಚರಿತ
– ಅಣುಮಹತ್ತಾದ ದೇವ (ಬೆ–೭೧–ಅ)
– ವಾಸುದೇವಾಯ ನಮೋ ವಾಸುಕಿ ಶಯನಾಯ ವಾಸವಾದ್ಯಖಿಳ ಸುರನಮಿತ ಪಾದಾಂಭೋಜ
– ವಾಸುದೇವಾಯ ನಮೋ (ಬೆ–೯೦–ಪ)
– ಅರಿಯದಂತಖಿಳದೊಳಡಗಿರ್ಪೆ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೩)

೭೧. ಅಗಜ – ಅಗಜನಂದು ತನ್ನ ಒಡಲೊಳಗಿಟ್ಟು ಮೂರ್ಬೊಗಸೆ ಮಾಡಿದ ಮುನಿಯ ಬಿಡಿಸಲಿಲ್ಲ
–ಆರು ಸಮಯಕ್ಕೊದಗಲಿಲ್ಲ (ಬೆ–೩೨–೧)

೭೨. ಅಗಜೆ (ಪಾರ್ವತಿ) – ಅಗಜೆಯ ಅರಸನ ನಗವ ನೆಗಹಿದನ ಬಗೆಯಿಂದಪ್ಪಳಿಸಿದನ
–ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ–೯೫–೧)

೭೩. ಅಗಣಿತ – ಅಂಜನೆಯಾತ್ಮಜ ಅಗಣಿತ ಬಲವಂತ ಭೀಮರಾಯ
– ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ–೧೯೩–೧)
– ಅಗಣಿತ ಮಹಿಮನ ಅಂಜಿಸಲೇಕಮ್ಮ ಬಗೆಯಬಾರದೆ ನಿಮ್ಮ ಮಕ್ಕಳಂತೆ
–ಇಂದು ಸೈರಿಸಿರಿ ಶ್ರೀಕೃಷ್ಣನ (ಬೆ–೧೦೫–೧)
– ಪೂಸರನ ಜನಕನೇ ಶತಕೋಟಿತರಣಿಪ್ರಕಾಶ ಅಗಣಿತಕೋಟಿಬ್ರಹ್ಮಾಂಡನಾಯಕನೆ
– ಪೂಸರನ ಜನಕನೇ (ಬೆ–೧೬೮–ಪ)

೭೪. ಅಗಧರ (ಕೃಷ್ಣ) – ವರ ಮತ್ಸ್ಯನಗಧರನ ಸೂಕರನ ಸಿಂಹನ ತಿರುಕ ತಾಯ್ತರೆದಾತನ ವರವಿತ್ತು ಶಬರಿಗೆ
– ಇಂದು ನೀ ಕರೆದುತಾರೆ (ಬೆ–೯೨–೩)

೭೫. ಅಗಸ – ಅಡಿಯ ಅಗಸನು ಎಂಬ ಎನಗೊಂದು ದೃಢಬುದ್ಧಿಯು ಇಲ್ಲದೆ
– ಕಾಡುವ ದುರಿತಗಳ ನೀ ಬಿಡಿಸೆಂದು (ಬೆ–೬೦–೧)

೭೬. ಅಗಸ್ತ್ಯ – ಯತಿಗಳೊಳಗಸ್ತ್ಯನೊ ಜೊತೆಗಳೊಳು ಹನುಮನೊ
– ಮೆರೆಯದಿರು ಮೆರೆಯದಿರು (ಬೆ–೧೪೮–೪)
– ಯತಿಗಳಲಗಸ್ತ್ಯನೋ ಧೃತಿಯೊಳಗೆ ಜಾಂಬವನೊ
– ಬೆರೆಯದಿರು ಬೆರೆಯದಿರು (ಬೆ–೧೪೩–೭)

೭೭. ಅಗಿ (ತೋಡು) – ಮಣ್ಣನಗಿದು ಬೇರ ಮೆದ್ದವನೆಂದೆನೆ ರಕ್ಕಸರೊಳು ಹೋರಾಡಿದವನೆಂದು ಹೊಗಳಿದೆನಲ್ಲದೆ
– ನಿನ್ನ ನಾನೇನೆಂದೆನೊ ರಂಗಯ್ಯ (ಬೆ–೯೧–೧)

೭೮. ಅಗ್ಗವಣಿ – ಮೂತೆರದ ಭೇದಗಳ ಕಡಿದು ಕಣ್ಣಿಯ ಮಾಡಿ ಚಿತ್‌ಲಿಂಗಕಗ್ಗವಣಿ ತಂದವರ ತೋರು
– ನಿಜವರಿತು ಲಿಂಗವನು ಪೂಜೆ ಮಾಡುವರು (ಸ–೧೪೨–೧)

೭೯. ಅಗ್ಗಳ – ಯಮಳರನು ಪಡೆದ ತಾಯಿಗೆ ಸಹೋದರನು ಭೂರಮಣರೊಳಗಗ್ಗಳನು ಅತಿ ಧೈರ್ಯನು
– ನೀನಾವ ಬಾಂಧವನೊ (ಬೆ–೭೮–೭)

೮೦. ಅಗ್ನಿ – ಮುಖದಲಿಂದ್ರರು ಅಗ್ನಿ ಸಪ್ತ ಋಷಿಗಳು ದ್ವಿಜರು ಮುಖದ್ವಾರದುಸುರಿನಲಿ ಶ್ರುತಿ ಮರುತರು
– ವಿಶ್ವಲೋಕೇಶ ವಿಶ್ವಲೋಕೇಶ (ಸ–೨೩೪–೧)
– ಅಡಿಯನಂಬರ ಮಾಡದನಕ ಅಗ್ನಿ ಕಿಡಿಯೆದ್ದು ಮೇಲಣ ಕೊಡನುಕ್ಕದನಕ
– ಸದರವಲ್ಲವೊ ನಿಜಯೋಗ (ಸ–೨೪೩–೧)
– ಸುಟ್ಟಗ್ನಿ ಹೊರಸೂಸಿ ಪಟ್ಟಣದ ಹೊರಗೆಲ್ಲ ನೆಟ್ಟನಾಹುತಿಗೊಂಡುವು
– ವಾಸುದೇವಾಯ ನಮೋ (ಬೆ–೯೦–೧೧)
– ನೊಸಲಗಣ್ಣಿನ ಬಲ ನಾಲ್ಕು ತೆರದಾ ಬಲ ತ್ರಿಶೂಲ ಡಮರು ಅಗ್ನಿ ಫಣಿಯ ಬಲವು
– ಆವ ಬಲವಿದ್ದರೇನು (ಬೆ–೧೩೩–೧)
– ಚೆನ್ನಾಗಿ ನೀ ನೋಡು ಚೆಲುವ ಕಂಗಳಿಂದ ತನ್ನಗ್ನಿಯೊಳಗಿರುವ ಪ್ರೌಢರಿಗಲ್ಲದೆ
– ಆರಿಗಳ ವಲ್ಲಾತ್ಮ ಯೋಗಸಿದ್ಧಿ (ಬೆ–೧೨೬–೨)

– ಒತ್ತಿದ ಕಸಕಿಂತ ಕಡುಕಷ್ಟದೀ ದೇಹ ಹೊತ್ತೊಯ್ದು ಅಗ್ನಿಯೊಳು ಬಿಸುಟ ಬಾಹರೊ
– ಆರು ಸಂಗಡ ಬಾಹೋರಿಲ್ಲ (ಬೆ–೧೫–೩)
೭೧. **ಅಗ್ನಿಕುಂಡ** – ಖಂಡ ಕೊಯ್ದು ಕೊಡ ಬೇಡ ದಳ್ಳುರಿಯಗ್ನಿಕುಂಡವನು ಹೊಕ್ಕು ಹೊರಡುವುದುಚಿತವೆ
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೨)
೭೨. **ಅಗ್ನಿಸಾಕ್ಷಿ** – ಧರೆ ಮಿತ್ರ ಬುಧ ಜನರ ಅಗ್ನಿಸಾಕ್ಷಿಯ ಮಾಡಿ ಕರವಿಡಿದು ಧಾರೆಯ ನೆರೆಸಿಕೊಂಡ
–ಆರು ಸಂಗಡ ಬಾಹೋರಿಲ್ಲ (ಬೆ–೧೫–೪)
೭೩. **ಅಗ್ರ** – ಮುಂದೊರೆದಿಹ ರೋಮಕೂಪ ದಗ್ರದಳತೆಯು ವೃಂದಗಳ ಶೋಭಿಪ ರೀತಿಯ ಪಡೆದೆಯೆಲೊ ಹರಿಯೆ
– ವಿಶ್ವಲೋಕೇಶ ವಿಶ್ವಲೋಕೇಶ (ಸ–೨೩೪–೨)
೭೪. **ಅಗ್ರಜ** – ಹರಿಯನಗ್ರಜಕೋಟಿ ತೇಜನ ಹರಿಯವದನನೆಂಬ
– ಭವಭಯವಿನಾಶ ಭೋ (ಬೆ–೪೧–೧)
– ಅತ್ತ ಅಣ್ಣನ ಅಗ್ರಜನ ಕೈಯಿಂದ ಬತ್ತಲೆ ಮಾಡಿ ಸುಲಿಸಿಕೊಂಡಾತನ
–ಬಲ್ಲವರು ನೀವು ಪೇಳರಯ್ಯ (ಬೆ–೧೫೦–೨)
– ದೃಢದಲಿ ವಿಭೀಷಣಾಗ್ರಜನನ್ನು ಬಾಣದಲಿ ಕೆಡಹಿಸಿದ ಬಳಿಕವಗೆ ಸ್ಥಿರಪಟ್ಟ ಕಟ್ಟುವುದು
–ಆವುದೊಳ್ಳೆಯದೊ ನಿನ್ನಂಗ (ಬೆ–೬೭–೨)
೭೫. **ಅಗ್ರಹಾರ** – ಪುರ ಅಗ್ರಹಾರ ಕೆಡಿಸಿದವಗೆ ರಾಜರೋಗವೆಂದು ಅರಿವುದು ಸಕಲ ಜನರು
– ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ–೧೨೪–೧)
೭೬. **ಅಘ** (ಪಾಪ) – ಭಾವಶುದ್ಧಿಯಲಿ ಹೇಳು ವನೊ ಕೇಳುವನವನಘಾವಳಿಯ ಪರಿಹರಿಸಿ
– ವಾಸುದೇವಾಯ ನಮೋ (ಬೆ–೯೦–೧೪)
೭೭. **ಅಘಹರಣ** (ಪಾಪನಾಶಕ)–ಲಾಲಿ ಪಾವನ ಚರಣ ಲಾಲಿ ಅಘಹರಣ ಲಾಲಿ ವೆಂಕಟ ರಮಣ ಲಲಿತ ಕಲ್ಯಾಣ
– ಲಾಲಿ ಪಾವನ ಚರಣ ಲಾಲಿ ಅಘಹರಣ (ಸ–೨೭೯–೫)

೭೮. **ಅಚ್ಚ** – ಅಚ್ಚಸೂಕರನಾಗಿ ಬಾಳಿದನೆ ಮದ ಹೆಚ್ಚೆ ಹಿರಣ್ಯಕನ ಸೀಳಿದನೆ
– ರಾಮ ಗೋವಿಂದ ಹರೆ (ಬೆ–೪೦–೧)
– ಅಚ್ಚಸೂಕರನಾಗಿ ಬಾಳಿದನೆ ಮದ ಹೆಚ್ಚೆ ಹಿರಣ್ಯನ ಸೀಳಿದನೆ
–ಗೋವಿಂದ ಹರಿ ಗೋವಿಂದ (ಬೆ–೫೬–೧)
– ಅರ್ತಿಯುಳ್ಳವರೆಲ್ಲ ಕೊಳ್ಳಿ ಬೇಕಾದರೆ ನಿತ್ಯ ಮಾಧವನೆಂಬ ಅಚ್ಚ ಮಾವಿನ ಹಣ್ಣು
–ಹಣ್ಣು ಕೊಂಬುವ ಬನ್ನಿರಿ (ಬೆ–೧೫೭–೧)
೭೯. **ಅಚ್ಯುತ** – ಮಚ್ಛ್ಯ ರೂಪದಿಂದ ಪೋಗಿ ಅವನ ಕೊಂದ ಅಚ್ಯುತರಾಯನೆಂಬ ಮಾಸಾಳಮ್ಮ
– ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ–೧೧೦–೧)
– ಯಾದವಗಿರಿವಾಸನಹುದೋ ಶ್ರೀನಾರಸಿಂಹ ಆದಿನಾರಾಯಣ ಅಚ್ಯುತನಹುದೊ
– ಯಾದವಗಿರಿವಾಸನಹುದೋ (ಸ–೨೧೯–೫)
– ಸಂಚಿತಾರ್ಥ ಪಾಪಗಳನು ಕಿಂಚಿತಾದರಿಡ ದಂತೆ ಮುಂಚಿತಾಗಿ ಕಳೆಯಬೇಕು ಸ್ವಾಮಿ ಅಚ್ಯುತಾ
– ಈಶ ನಿನ್ನ ಚರಣ ಭಜನೆ (ಬೆ–೬೫–೧೯)
– ಅಚ್ಯುತ ಸರ್ವೋತ್ತಮನೆ ಚಿನ್ಮಯ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೭೮–೧)
– ನಾರಾಯಣ ಅಚ್ಯುತಾನಂತಾದಿಕೇಶವನ ಸಾರಾಮೃತವನುಂಡು ಸುಖಿಸೊ ಲಂಡ ಜೀವವೆ
– ದಾಸನಾಗೋ ಭವಪಾಶ ನೀಗೋ (ಬೆ–೨೦–೫)
– ನಾರಸಿಂಹಾಚ್ಯುತ ಜನಾರ್ದನ ಉಪೇಂದ್ರ ಸಾರಸಭವ ವಂದ್ಯ ಹರಿ ಕೃಷ್ಣ
–ಅಭ್ಯಾಸವನು ಮಾಡಬೇಕು (ಬೆ–೩೭–೪)
– ಬಾಡದಾದಿಕೇಶವನೆ ಅನಾಥ ಬಂಧುವೆ ಅಚ್ಯುತ ಮುರಾರಿ ಹರಿಯೆಂಬ ಮಾತನಾಡಿಸಿ ಮುಕುತಿಯನೊದಗಿಸಯ್ಯ
– ಅಣುಮಹತ್ತಾದ ದೇವ (ಬೆ–೭೧–೩)
– ಶರಣು ಸಿರಿ ಸನಕಾದಿವಂದ್ಯ ಅಚ್ಯುತ ಕೃಷ್ಣ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೭೮–೨)

- ಶತ ಸಾಹಸ್ರ ಲಕ್ಷ ಪಣತೆಯ ಗೋಘೃತ ದೀಪ ಬೆಳಗಲಚ್ಯುತ ನಿಳಯದಿ
-ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೪)
- ಅಚ್ಯುತನ ನಾಮವನು ನೆನೆದು ಸುಖಿಯಾಗೊ
- ನೆಚ್ಚದಿರು ಸಂಸಾರ ನೆಲೆಯಲ್ಲ (ಬೆ-೧೧೬-ಪ)
- ಬಲಿ ಚಕ್ರವರ್ತಿ ಭಕ್ತಿಗೆ ಮೆಚ್ಚಿ ಅವನ ಬಾಗಿಲ ಕಾಯ್ದಚ್ಯುತನು ಅನುಗಾಲದಿ
- ಆರು ಬಲ್ಲರು ಹರಿಹರರ (ಬೆ-೮೨-೨)
- ಪ್ರೇಮದಲಿ ಹೇಳೆನಗೆ ಸ್ವಾಮಿ ಅಚ್ಯುತನೆ
- ಆವ ಸಿರಿಯಲಿ ನೀನು ಎನ್ನ ಮರೆತೆ (ಬೆ-೬೭-೩)

೯೦. ಅಜ - ಅಜಜ್ಞಾನಾಧಿಕ ಬಲ್ಲ ಅನಲ ಸ್ನೇಹಿತ ಬಲ್ಲ ಗಜ ಚರ್ಮಾಂಬರ ಬಲ್ಲ ಗರುಡ ಬಲ್ಲ
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-೧)
- ಭಜಿಸಿ ಬದುಕೆಲೊ ಮನುಜ ಮನಮುಟ್ಟಿ ಶ್ರೀಹರಿಯ ಅಜಸುರೇಂದ್ರಾದಿಗಳು ಆದಿವಂದಿತ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-ಪ)
- ಅಜನ ಪಡೆದ ಹಣ್ಣು ಗಜವ ಕಾಯ್ದ ಹಣ್ಣು
-ಹಣ್ಣು ಕೊಂಬುವ ಬನ್ನಿರಿ (ಬೆ-೧೫೭-೨)
- ಅಂಕಿತಕೆ ಗುರುತೇನು ಅಜನ ಗುಣವೇನು
- ಬಲ್ಲವರು ಪೇಳರೈ (ಬೆ-೧೬೩-೧)
- ಒಡೆಯ ಅಂಬುಧಿಯೊಳು ಪೊಕ್ಕು ವೇದವ ತಂದು ತಡೆಯದೆ ಅಜಗಿತ್ತನೆಂದೆನುತ
- ಅರಸಿನಂತೆ ಬಂಟನೊ (ಬೆ-೫_೧)

೯೧. ಅಜಪದ (ಬ್ರಹ್ಮನ ಪಟ್ಟ) - ಅಕ್ಷಾಸುರಾಂತಕಗೆ ಅಜಪದವನಿತ್ತವನೆ
-ವಾಸುದೇವಾಯ ನಮೋ (ಬೆ-೯೦-೭)

೯೨. ಅಜಪಿತ (ವಿಷ್ಣು) - ಅಜಪಿತ ಕಾಗಿನೆಲೆಯಾದಿಕೇಶವನೆ ತ್ರಿಜಗವಲ್ಲಭ ತಾನು ಭಜಕರ ವಶವಾನೆ
- ಆನೆಯ ನೋಡಿರಯ್ಯ (ಬೆ-೧೫೬-೩)

೯೩. ಅಜಮಿಳ/ಅಜಾಮಿಳ - ಗಾರಾದಜಮಿಳನಾರಗ ಎನಲು ಪಾರಗಾಣಿಸಿದಪರ ಗುಣನಿಧಿಯ
- ಮರೆಯದಿರು ಹರಿಯ (ಸ-೨೦೩-೨)
- ಘೋರ ಪಾತಕಿ ಅಜಮಿಳನ ಸಲಹಿದ ರಂಗ ನಾರಸಿಂಹನೆಂದರೆ ಧ್ವನಿದೋರೊ ಕೃಷ್ಣ
- ಹೂವ ತರುವರ ಮನೆಗೆ (ಬೆ-೪೩-೨)
- ಪೆಸರುಗೊಂಡರೆ ಮಗನ ಅಜಮಿಳನ ಸಲಹಿದೆಯೊ ವಸುದೇವನ ಸುತನೆ ಸಲಹೊ
- ವಾಸುದೇವಾಯ ನಮೋ (ಬೆ-೯೦-೬)
- ಯಮಸುತನ ರಾಣಿಗಕ್ಷಯವಸನವನ್ನಿತ್ತೆ ಸಮಯದಲಿ ಅಜಮಿಳನ ಪೊರೆದೆ
- ಬಾಗಿಲನು ತೆರೆದು ಸೇವೆಯನು (ಬೆ-೪೬-೩)
- ಅತಿ ಭಕುತರಿಗೆ ಮೆಚ್ಚಿ ಗತಿಮೋಕ್ಷವಿತ್ತನು ಮತಿಭ್ರಷ್ಟ ಅಜಮಿಳನ ಉದ್ಧಾರಮಾಡಿದ
- ನಂಬು ನಾರಾಯಣನ (ಬೆ-೫೩-೩)
- ಒಲಿಸಿ ನಿನ್ನನು ತುತಿಸಿ ಮುಕುತಿಯನು ಪಡೆದುದಕೆ ಸಲೆ ಶ್ರುತಿಯು ಗಿರಿಜೆ ಅಜಮಿಳನು ಹೊಣೆಯೊ
- ನಿನ್ನ ಮಹ ಮಹಿಮೆಗೆ (ಬೆ-೫೦-೨)
- ಅಂಗದಲಿ ಅಜಮಿಳನೊ ಶೃಂಗಾರದಲಿ ಧ್ರುವನೊ
- ಬೆರೆಯದಿರು ಬೆರೆಯದಿರು (ಬೆ-೧೪೩-೯)
- ಅಜಮಿಳನಿಗೆ ನಿಜ ಪದವಿಯ ಕೊಟ್ಟಾನೆ
- ಆನೆಯ ನೋಡಿರಯ್ಯ (ಬೆ-೧೫೬-೩)
- ವಿದುರ ಪ್ರಹ್ಲಾದ ರುಕ್ಮಾಂಗದ ವಿಭೀಷಣರು ಮದಗಜ ಅಜಾಮಿಳ ರುದ್ರ
- ಪೂಸರನ ಜನಕನೇ (ಬೆ-೧೬೮-೩)
- ಪಂಚ ಮಹಾಪಾತಕವ ಮಾಡಿದ ಅಜಾಮಿಳನ ವಂಚಿಸಿ ಯಮ ದೂತರೆಳೆದೊಯ್ಯುತಿರಲು
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೨)
- ಏನು ಅರಿಯದ ಅಜಾಮಿಳಗೆ ಸಾಯುಜ್ಯವನು ನೀನೊಲಿದು ಕೃಪೆ ಮಾಡಿದೆ
- ನೀನುಪೇಕ್ಷೆಯ ಮಾಡೆ (ಬೆ-೪೯-೨)

೯೪. ಅಜಾಂಡ (ಬ್ರಹ್ಮಾಂಡ) - ಸಟೆಯಲ್ಲ ಅಜಾಂಡಗಳೊಡೆವಂತೆ ಘರ್ಜಿಸೆ
- ಯಾದವಗಿರಿವಾಸನಹುದೋ (ಸ-೨೧೯-೨)

೯೫. ಅಜ್ಜ - ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ
- ನಾವು ಕುರುಬರು (ಬೆ-೧೫೨-೧)
- ಕಟ್ಟಿ ದೃಢಗೋಲಿಂದ ಕಾವ ನಮ್ಮಜ್ಜ
- ನಾವು ಕುರುಬರು (ಬೆ-೧೫೨-೨)
- ಕಾವ ನಮ್ಮಜ್ಜ ನರಗುರಿಯ ಹಿಂಡುಗಳ
- ನಾವು ಕುರುಬರು (ಬೆ-೧೫೨-ಪ)
- ಹುಟ್ಟುವುದು ಮೊದಲಿಲ್ಲ ಸಾವುದಕೆ ಕಡೆಯಿಲ್ಲ ಹುಟ್ಟು ಸಾವಿನ ಹೊಲಬ ಅಜ್ಜ ಬಲ್ಲ
- ನಾವು ಕುರುಬರು (ಬೆ-೧೫೨-೩)
- ವೇದ ಶಾಸ್ತ್ರ ಪುರಾಣ ಶ್ರುತಿ ತರ್ಕ ಮಹದಾದಿ ಸಾಧನದ ಶ್ವಾನ ನಮ್ಮಜ್ಜನ ಹಿಂಡಿನೊಳು
- ನಾವು ಕುರುಬರು (ಬೆ-೧೫೨-೪)
- ಅಷ್ಟು ನರಪ್ರಾಣಿಗಳು ನಮ್ಮ ಮನೆಯೊಳ ಗಿದ್ದು ಹೊಟ್ಟೆಗೆ ಕೇಳುವುವು ನಮ್ಮಜ್ಜನಲ್ಲಿ
- ನಾವು ಕುರುಬರು (ಬೆ-೧೫೨-೩)

೯೬. ಅಜ್ಞಾನ - ನೀನೇ ನಿಜವೆಂದು ನಿನ್ನ ಧೇನಿಸಿದರೆ ಅಜ್ಞಾನಕ್ಕೆ ಅಡ್ಡಬರಲಾಪೆಯಾ ರಂಗ
- ನೀನೇನ ಮಾಡಲಾಪೆ ರಂಗಯ್ಯ (ಬೆ-೪೮-೧)

೯೭. ಅಟ್ಟು (ಓಡಿಸು) - ನೆಂಟರೂರಿಗೆ ಹೋಗಿ ನಾಲ್ಕು ದಿವಸವಿದ್ದರೆ ಎಂಟು ದಿನದಾಯಸ ಅಟ್ಟಬಹುದೊ
- ಈ ಸಿರಿಯ ನಂಬಿ ಹಿಗ್ಗಲು ಬೇಡ (ಸ-೪೦-೧)
- ಕೊಲ್ಲಬಾರದೆನುತ ಹೇಳಿ ಮನೆಯ ಬಿಟ್ಟು ಹೊರಗಟ್ಟಿದ
- ಒಡವೆ ಹೋಯಿತು ಮನ ಧೃಡವಾಯಿತು (ಸ-೬೯-೪)
- ದಶಕಂಠನನುಜನು ಜಾನಕಿಯ ಬಿಡಹೇಳೆ ಅಸುರ ಕೋಪವ ತಾಳಿ ಅಟ್ಟಲಾಗ
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೪)
- ಪಾತಾಳಕಿಳಿದು ಭೂಮಿಯನೊಯ್ದವನ ಕಿರಾತನನಟ್ಟಿ ಸತಿಯ ಗೆದ್ದವನ
- ಕರೆತಾರೆ ಕಾಮಿನಿಕಮಲಜಪಿತನ (ಬೆ-೯೩-೩)
- ಮುಟ್ಟಲಮ್ಮರು ಎನ್ನ ಸತಿ ಸುತರು ಬಾಂಧವರು ಅಟ್ಟಿ ಎಳೆಯುತ್ತಿಹರೊ ಕೃಷ್ಣ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮-೧)
- ಎಸೆವ ಕಾಳಿಂಗನ ಮೆಟ್ಟಿದನೆ ಬಾಧಿಸುವರ ಯಮಪುರಕಟ್ಟಿದನೆ
- ಗೋವಿಂದ ಹರಿ ಗೋವಿಂದ (ಬೆ-೫೬-೩)

೯೮. ಅಟ್ಟುಳಿ (ಬಾಧೆ) - ಸೂರ್ಯಚಂದ್ರಮರಂತೆ ರಾಹುವಟ್ಟುಳಿಯಂತೆ
- ಆರಿಗಾದರು ಪೂರ್ವ ಕರ್ಮಬಿಡದು (ಬೆ-೧೦೮-೧)

೯೯. ಅಡಗಿಸು - ಅಲ್ಲಲ್ಲೆ ಸೊಲ್ಲಡಗಿಸಿ ವಲ್ಲಭ ನೆನಿಸಿದ ಬಲ್ಲಿದ ಕಲ್ಕಿಯೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೊ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೧೦)

೧೦೦. ಅಡಗು - ಮಾಡಬೇಕೆಂಬರ ತಡೆದು ಕಾಡಿಪನವನು ಹಿಡಿಗೆ ಅಡಗದಾ ಹಿರಣ್ಯಗರ್ಭ ನವನಿರೆ
- ಕೊಡಲು ನೀನಾರು (ಸ-೯೨-೧)
- ಮುಸುಕಿ ಕವಿವ ವ್ಯಾಪ್ರದಂತೆ ಅಡಗಿ ಮುಪ್ಪುಗೊಂಬ ರೋಗ
- ಎಷ್ಟು ಪ್ರೀತಿಯೊ ಮನಕೆ (ಸ-೫೨-೧)
- ಅರಿಯದಂತಖಿಳದೊಳಡಗಿರ್ಪ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೩)
- ಮಂಗಳ ಜನನಿಯ ಹಿಂಗದೆ ಕದ್ದು ಜಲಂ ಗಳೊಳಡಗಿಪ್ಪನ
- ಫುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೩)
- ಕುಬ್ಜ ಬ್ರಾಹ್ಮಣನಾಗಿ ಕುಂಭಿನಿ ಈರಡಿ ಮಾಡಿ ಹೆಜ್ಜೆಯೊಳಡಗಿಟ್ಟ ಹೆಚ್ಚಿನ ಪಾದ
- ಎಂಥ ಕೀರುತಿ ಪೊತ್ತುವೆರಡು ಪಾದ (ಬೆ-೮೩-೧)
- ಜನವರಿಯದಂತೆ ಜೀವನದೊಳಡಗಿದ್ದವನ

ಮನವ ಖತಿಗೊಳಿಸಿ ಕಾತರಿಸೆ ನುಡಿಸಿ
- ನೀನಾವ ಬಾಂಧವನೊ (ಬೆ-೭೮-೮)
- ಕಿಡಿಕಿಡಿಸೆ ನುಡಿಯಡಗಲೊಡನೆ ಮುಡಿ ವಿಡಿದು
- ಕಂಡೆ ನಾ ತಂಡತಂಡದ ಹಿಂಡು ದೈವ (ಬೆ-೮೪-೧)
- ಹರಿಯೆನಲು ಹರಿ ರೂಪ ತಾಳಿದೆ ಹರಿ ಯೊಳಡಗಿದೆ ಮತ್ತೆ
- ಭವಭಯವಿನಾಶ ಭೋ (ಬೆ-೪೧-೧)

೧೦೧. ಅಡರು - ಸಿರಿ ದಾರಿದ್ರ್ಯವು ಸುರ ತತಿಗಡರುವ ತೆರನೆಂದರಿದದರಿಂದಲಿ
- ಬೆರೆಯದಿರು ಬೆರೆಯದಿರು (ಬೆ-೧೪೪-೨)
- ರಥವನಡರಿ ಸುರಪಥದಲಿ ತಿರುಗುವ ಸುತನಿಗೆ ಶಾಪವನಿತ್ತವನ
- ಮಂಗಲಂ ಜಯ ಮಂಗಲಂ (ಬೆ-೧೭೨-೨)
- ಬಿಸಿಗದಿರ ಪೂರ್ವಾಚಲವನಡರಿ ಬಂದ
- ಸಿಂಗರದ ಸಿರಿಧರನೆ (ಬೆ-೧೬೭-೧)
- ತಂಗದಿರನನಿಮಿಷ ತಾರಕೆಗಳು ಮಸಳಿಸೆ ಪತಂಗ ಪರ್ವತವ ಅಡರಿ ಬಂದನು
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೫)
- ಕೃಷ್ಣನಲ್ಲದಿಲ್ಲವೆಂದು ಅಪ್ಪ ದಿಕ್ಕನಡರಿದೇವೆ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೬)

೧೦೨. ಅಡವಿ - ಅಡವಿ ಕೋತಿಗಳ ಕೂಡು ತಿದೆ ಚೆಲ್ವ ಮಡದಿಯರನು ಹಿಡಿದೆಳೆಯುತಿದೆ
- ಮಗುವಿನ ಮರುಳಿದು ಬಿಡದಲ್ಲ (ಸ-೧೯೮-೨)
- ನೆಗಳ ಕೈಯಲ್ಲಿ ಮಾತಂಗವು ಸಿಕ್ಕಿ ಒದರಲಾಗಿ ಆನೆಗಳೇನ ಮಾಡುತಿರ್ದವಡವಿಯಲ್ಲಿ
- ಬಂಧುಗಳದಾರಿಗಾರಿದ್ದರೇನು (ಸ-೧೭೩-೧)
- ತುಪ್ಪ ಪಂಚಾಮೃತವಂದು ಅಡವಿ ಗಡ್ಡೆ ಗಳಿಂದು
- ಎನ್ನ ಕಂದ ಹಳ್ಳಿಯ ಹನುಮಾ (ಬೆ-೬_೧)
- ಮೂಡುಗಡೆ ಮುಗಿಲು ಕೆಂಪಾದುದಡವಿಯ ತಾಮ್ರಚೂಡ ಕಾಳೋದರವು ಕೋಗಿಲೆಗಳುಲಿ ಯುತಿರೆ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೧)
- ಬಿಡದೆ ಶ್ರೀಹರಿಗೆ ಹಾಸಿಗೆಯಾದ ಫಣಿಪತಿಗೆ ಅಡವಿಯೊಳಗಣ ಹುತ್ತು ಮನೆಯಾಯ್ತು
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೭೯-೩)
- ನುಡಿ ನಡೆವ ಕಾಲದಲಿ ದಾನಮಾಡದೆ ಇರಲು ಅಡವಿಯೊಳು ಕೆರೆತುಂಬಿ ಬತ್ತಿದಂತೆ
- ಜಪವ ಮಾಡಿದರೇನು (ಬೆ-೧೨೩-೨)
- ಅಡವಿಯೊಳಗಾಡುವ ಮೃಗಜಾತಿ ಪಕ್ಷಿಗಳಿಗೆ ಅಡಿಗಡಿಗೆ ಆಹಾರವಿತ್ತವರದಾರು
- ತಲ್ಲಣಿಸದಿರು ಕಂಡೆಯಾ ತಾಳು ಮನವೆ (ಬೆ-೩೪-೨)
- ಶ್ರುತಿಯನುದ್ಧರಿಸಿ ಭೂಮಿಯ ಪೊತ್ತು ಅಡವಿಯ ಪಥದೊಳು ತಿರುಗಿದನ
- ಹರಿಮುಖಿ ಹರಿವಾಣಿ (ಬೆ-೯೮-೩)
- ನುಡಿ ನಡೆವ ಕಾಲದಲಿ ದಾನಮಾಡದೆ ಇರಲು ಅಡವಿಯೊಳು ಕೆರೆತುಂಬಿ ಬತ್ತಿದಂತೆ
- ಜಪವ ಮಾಡಿದರೇನು (ಬೆ-೧೨೩-೨)

೧೦೩. ಅಡವಿಜಟ್ಟಿಂಗ - ಅಡವಿಜಟ್ಟಿಂಗನ ಮಾಡಲು ಸಡಗರ ಸಂಪತ್ತಿಯಿಂದ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೩)

೧೦೪. ಅಡಿ (ತಳ) - ಅಡಿಸತ್ತ ಮಡಕೆಗೆ ಜೋಡಿಸಿ ಒಲೆಗುಂಡ ಹೂಡಬಾರದು
- ವರಕವಿಗಳ ಮುಂದೆ ನರಕವಿಗಳ ವಿದ್ಯೆ (ಸ-೨೩೨-೨)

೧೦೫. ಅಡಿ (ಪಾದ) - ಆರು ಮೂರು ಹದಿನಾರು ತತ್ತ್ವವ ಮೀರಿ ತೋರುವ ಕಾಗೆನೆಲೆ ಯಾದಿಕೇಶವನಡಿ
- ದಾಸನಾಗಬೇಕು ಸದಾಶಿವನ (ಬೆ-೨೪-೩)
- ಬೆಡಗಿಲಿ ಮುಗಿಲಿಗೆ ಬೆಳೆದು ಬಲಿಯನು ಅಡಿಯಿಂದ ಪಾತಾಳಕೊತ್ತಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೫)

– ಅಡಿಯ ಅಗಸನು ಎಂಬ ಎನಗೊಂದು ದೃಢಬುದ್ಧಿಯು ಇಲ್ಲದೆ
– ಕಾಡುವ ದುರಿತ ಗಳ ನೀ ಬಿಡಿಸೆಂದು (ಬೆ–೬೦–೧)
– ಭೂಮಿಯನು ಮೂರಡಿಯ ಮಾಡಿದೆನೆಂಬ ಸಿರಿಯೆ
– ಆವ ಸಿರಿಯಲಿ ನೀನು ಎನ್ನ ಮರೆತೆ (ಬೆ–೬೭–೩)
– ಕಾಯಜನ ಪಿತ ನಿನ್ನ ಅಡಿಯ ಬಿಡಲಾಗದು
– ತೊರೆದು ಜೀವಿಸಬಹುದೆ (ಬೆ–೫೫–೧)
– ಬಲಿಯಧ್ವರದ ಸಾಲೆಗೊಂದು ವೇಷವ ನಾಂತು ಸಲೆ ಬಂದು ಧರೆಯ ಮೂರಡಿಯ ಬೇಡೆ
– ನೋಡಯ್ಯ ನಿನ್ನ ದಾಸರ (ಬೆ–೮೫–೫)
– ಗೋವಿಂದ ಸಲಹೆನ್ನ ಕುಮುದಲೋಚನ ನಿನ್ನ ಸೇವಕರಡಿಯ ಸೇವಕನಯ್ಯಾ ಹರಿಯೆ
– ಗೋವಿಂದ ಸಲಹೆನ್ನನು (ಬೆ–೮೮–೮)
– ಭೂರಮಣಿಯನೊತ್ತಿ ಅಡಿಗೆ ಬೀಗನ ಶಿರವನ್ನು ಕಾಯ್ದ ಶ್ರೀರಮಣ ಆದಿಕೇಶವನನ್ನು ನೋಡಿರೊ
– ಈತನೀಗ ವಾಸುದೇವನು (ಬೆ–೭೫–೩)
– ಅಡಿಯನಂಬರ ಮಾಡದನಕ ಅಗ್ನಿ ಕಿಡಿ ಯೆದ್ದು ಮೇಲಣ ಕೊಡನುಕ್ಕದನಕ
– ಸದರವಲ್ಲವೊ ನಿಜಯೋಗ (ಸ–೨೪೩–೧)
– ಕಡಲೊಡೆಯ ನಿನ್ನಡಿಯ ಗಳಿಗೆ ಬಿಡ ಲಾಗದು
– ತೊರೆದು ಜೀವಿಸಬಹುದೆ (ಬೆ–೫೫–೨)
– ಪ್ರಾಣನಾಯಕನಾದ ಆದಿಕೇಶವರಾಯ ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದೊ
– ತೊರೆದು ಜೀವಿಸಬಹುದೆ (ಬೆ–೫೫–೩)
– ನಿನ್ನಡಿಗಳ ನೆನಹನು ಕೊಡು ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೨)
– ಒಡೆಯ ಬಾಡದಾದಿಕೇಶವನಡಿಗಳನ್ನು ಸ್ಮರಿಸಿ ಇಂಥ ದೊಡದೇವರ ಮೊರೆಯ ಬಿದ್ದರೆ ಮುಕ್ತಿ ತಪ್ಪದು
– ಕಣಿಯ ಹೇಳಬಂದೆ ನಾನು (ಬೆ–೭೨–೫)
– ಪೊಡವಿಗಧಿಕ ಕಾಗಿನೆಲೆಯ ಒಡೆಯ ವೆಂಕಟೇಶ ನಿನ್ನ ಅಡಿಗಳಿಂದ ಸಲಹೊ ಎನ್ನ ಕನಕನೊಡೆಯನೆ
– ಕಣಿಯ ಹೇಳಬಂದೆ ನಾನು (ಬೆ–೭೨–೫)

೧೦೬. ಅಡಿಕೆ – ಅಡಿಕೆಯಷ್ಟು ಆಕಳಣ್ಣ ಹಿಡಿಕೆಯಷ್ಟು ಕೆಚ್ಚಲಣ್ಣ
– ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ–೭೧–೩)

೧೦೭. ಅಡಿಗೆ – ಅಡಿಗೆಯನು ಮಾಡಬೇಕಣ್ಣ ನಾನೀಗ ಸುಜ್ಞಾನದ ಅಡಿಗೆಯನು ಮಾಡಬೇಕಣ್ಣ
– ಅಡಿಗೆಯನು ಮಾಡಬೇಕಣ್ಣ (ಸ–೧–ಪ)

೧೦೮. ಅಡಿದಾಸ (ಪಾದಸೇವಕ) – ಭಾಳಾಕ್ಷ ಮುಂತಾಗಿ ಭಜಿಪ ದೇವರ ಮನೆಯ ಆಳಿನ ಆಳಿನ ಆಳಿನಡಿದಾಸ ನಾನು
– ದಾಸ ದಾಸರ ಮನೆಯ ದಾಸ (ಬೆ–೨೩–೧)

೧೦೯. ಅಡಿಯಿಡು (ಹೆಜ್ಜೆಯನ್ನು ಊರು) – ಮನ್ನಿಸಲೈದಿ ಅರ್ಭಕನ ಅಡಿಯಿಟ್ಟಳೆಯೆ ಭೂಮಿಯನು ಕ್ಷತ್ರಿಯರ ಶಿರವ ತಡೆಗಡೆಯೆ
– ಪೂಸರನ ಜನಕನೇ (ಬೆ–೧೬೮–೫)

೧೧೦. ಅಡಿಯಿಡು (ನಡೆ)– ಅಡಿಯಿಡು ಮಗನೆ ಮೆಲ್ಲಡಿಯಿಡು ಎನುತಲಿ ನಡೆಗಲಿಸುವ ಪುಣ್ಯವೆಂತು ಪಡೆದಳಯ್ಯ
– ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ–೧೯೫–೩)

೧೧೧. ಅಡು (ಅಡುಗೆ ಮಾಡು) – ಮುಟ್ಟ ಬಾರದವರ ಮನೆ ಪಾಯಸ ಕಜ್ಜಾಯವ ಅಟ್ಟರೇನು ಅಡದಿದ್ದರೆ ಏನು
– ಮುಟ್ಟ ಬಾರದವರ ಮನೆಯ (ಬೆ–೧೪೭–ಪ)
– ಅಟ್ಟು ಉಣ್ಣದ ವಸ್ತುಗಳಿಲ್ಲವೊ
– ಕುಲ ಕುಲವೆಂದು ಹೋರಾಡದಿರಿ (ಬೆ–೧೨೧–೧)
– ಪರನಾರಿಯರೊಡನಾಟ ಗರಳವನಟ್ಟುಂಬಾಟ
– ಅಹುದಾದಡಹುದೆನ್ನಿ (ಬೆ–೧೩೨–೪)
– ಮುಟ್ಟಬಾರದವರ ಮನೆ ಪಾಯಸ ಕಜ್ಜಾಯವ ಅಟ್ಟರೇನು ಅಡದಿದ್ದರೆ ಏನು
– ಮುಟ್ಟಬಾರದವರ ಮನೆಯ (ಬೆ–೧೪೭–ಪ)

೧೧೨. ಅಡ್ಡ - ವೇಣು ಕೊರಳಿಗೆ ಇಕ್ಕಿ ಎವೆಯು ಅಡ್ಡಾದಾಗ ತ್ರಾಣ ನಿತ್ರಾಣ ಸತ್ರಾಣ ದಲಿ ಜಯ ಜಯ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೪)

೧೧೩. ಅಡ್ಡಗಟ್ಟು - ಪಂಥಗಳನಾಡಿ ಕಳಬಂಟ ರಡ್ಡಗಟ್ಟಿದಾಗ
- ಆರಿಗೆ ಆರಿಲ್ಲವಯ್ಯ (ಬೆ-೩೧-೨)

೧೧೪. ಅಡ್ಡಬರು - ನೀನೇ ನಿಜವೆಂದು ನಿನ್ನ ಧೇನಿಸಿದರೆ ಅಜ್ಞಾನಕ್ಕೆ ಅಡ್ಡಬರಲಾಪೆಯಾ ರಂಗ
- ನೀನೇನ ಮಾಡಲಾಪೆ ರಂಗಯ್ಯ (ಬೆ-೪೮-೧)
- ಪಂಚೇಂದ್ರಿಯಗಳು ತಮ್ಮ ದೆಸೆದೆಸೆಗೆಳೆವಾಗ ವಂಚನೆಯಿಲ್ಲದೆ ಅಡ್ಡಬರಲಾಪೆಯಾ ರಂಗ
- ನೀನೇನ ಮಾಡಲಾಪೆ ರಂಗಯ್ಯ (ಬೆ-೪೮-೨)

೧೧೫. ಅಣಲು - ತರಳ ಚೆಲುವ ಮುಂಗುರುಳ ಹುಲಿಯುಗುರ ಕೊರಳ ಉಂಗುರಗಳ ಬೆರಳ ಕಾಲಿಗೆ ಕಟ್ಟಣಲ ನಿಲುವುತಿಹ ದುರುಳತನದಲಿ ತುರುಗಳ ಕಾಯ್ದವನ
- ನೆನೆಯೋ ಎಲೆ ಮನವೆ (ಸ-೧೫೩-೧)

೧೧೬. ಅಣಿಮೆ - ಕುಣಿಕುಣಿದು ಮನದಣಿದು ಮಣಿದು ಸಜ್ಜನಪದಕೆ ಅಣಿಮಾದಿ ಅಷ್ಟಸಿದ್ಧಿಯ ಕೈಕೊಳ್ಳದಲೆ ನೀ
- ಹೇಗೆ ನೀ ದಾಸನಾದೆ (ಬೆ-೨೨-೮)

೧೧೭. ಅಣು - ಅಣುರೇಣುತೃಣಗಳಲಿ ಪರಿಪೂರ್ಣನೈ ನೀನು
- ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ-೬೩-೨)
- ಅಣುಮಹತ್ತಾದ ದೇವ
- ಅಣುಮಹತ್ತಾದ ದೇವ (ಬೆ-೭೧-ಪ)
- ಅಣುರೇಣುತೃಣದೊಳು ಪರಿಪೂರ್ಣ ನಾದನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೩)
- ಇಂತು ಅಣುರೇಣುತೃಣಕಾಷ್ಠದೊಳಗೆಲ್ಲ ಸಂತೋಷವಾಗಿಹುದು ನಿನ್ನ ಸ್ಮರಣೆ
- ಜಗದಂತರ್ಯಾಮಿ ಎಂತೆಂದು (ಬೆ-೫೮-೫)
- ಆವ ಪರಿಯಲಿ ನಿನ್ನನೊಲಿಸಿ ಮೆಚ್ಚಿಪ ವಿಧವು ಅಣುಮಾತ್ರ ತೋರದಲ್ಲ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-ಪ)
- ಅಣುವಿಂಗೆ ಅಣುವು ಮಹತಿಂಗೆ ಮಹಿಮನು ಅಖಿಳ ಗುಣಭರಿತ ಪರಮ ಪಾವನ ಚರಿತ
- ಅಣುಮಹತ್ತಾದ ದೇವ (ಬೆ-೭೧-೮)
- ಅಣುರೇಣು ಪರಿಪೂರ್ಣ ಮೂರುತಿಗೆ ನಾ ಪ್ರದಕ್ಷಿಣೆಯೆಂತು ಸುತ್ತಿ ಬರಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೩)

೧೧೮. ಅಣುಗ - ಪುಂಡನು ನಿನ್ನಣುಗ ಕಾಗೆನೆಲೆಯ ಆದಿಕೇಶವರಾಯ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೧೧)
- ಲೋಲಲೋಚನೆಯ ಮಾತೆಯ ಪುತ್ರ ನಣುಗನ ಮೇಲುಶಕ್ತಿಗೆ ಉರವಾಂತು
- ರಮಣಿ ಕೇಳೆಲೆ ಮೋಹನ (ಬೆ-೯೬-೨)
- ಉತ್ತಾನಪಾದನ ಅಣುಗಗೆ ಧ್ರುವಪದವಿ ಜತ್ತಯಿಸಿಕೊಟ್ಟೆ ಶ್ರೀ ನಾರಾಯಣಾ
- ನಾರಾಯಣಾ ನಮೋ (ಬೆ-೫೧-೧)

೧೧೯. ಅಣುಮಯ - ಅಣುಮಯ ರೂಪ ಕಾಣೆ ನಿನ್ನ ಮಗ ಚಿನುಮಯ ರೂಪ ಕಾಣೆ
- ನೆರೆದು ಗೋಪಿಯರೆಲ್ಲರು (ಬೆ-೧೦೩-೧೦)

೧೨೦. ಅಣ್ಣ - ಅಡಿಕೆಯಷ್ಟು ಆಕಳಣ್ಣ ಹಿಡಿಕೆಯಷ್ಟು ಕೆಚ್ಚಲಣ್ಣ
- ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ-೭೧-೩)
- ಜತನವೆಂಬೊ ಅತ್ತೆ ಮಾವ ಜೊತೆಗೆ ಹುಟ್ಟಿದಣ್ಣ ತಮ್ಮ
- ಯಾರಿಗಾರು ಬಹರು ಸಂಗಡ (ಸ-೨೨೧-೨)
- ಅಣ್ಣನ ವೈರಿಯ ಮಗನ ಕೊಂದಾತನ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ (ಬೆ-೮೦-೧)
- ಪೊಡವಿಯೊಳು ಅಣ್ಣನಾಜ್ಞೆಯ ಮೀರಿ ನಡೆಯುತಿಹ ಒಡಹುಟ್ಟಿದವಗೆ ಕೈವಲ್ಯವುಂಟೇ
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೨)

– ಅತ್ತ ಅಣ್ಣನ ಅಗ್ರಜನ ಕೈಯಿಂದ ಬತ್ತಲೆ ಮಾಡಿ ಸುಲಿಸಿಕೊಂಡಾತನ
– ಬಲ್ಲವರು ನೀವು ಪೇಳಿರಯ್ಯ (ಬೆ–೧೫೦–೨)
– ದನುಜೆಯಾಳ್ದನಣ್ಣನಣ್ಣನ ಪಿತನ ಮುತ್ತಿ
– ಈತನೀಗ ವಾಸುದೇವನು (ಬೆ–೭೫–೧)
– ಉರಿಯೊಳು ಜನಿಸಿದವನ ನಿಜ ತಂಗೆಯ ಸೆರಗಪಿಡಿದ ಖಳನಣ್ಣನ ತಂಗೆಯ
– ರಮಣಿ ಕೇಳೆಲೆ ಮೋಹನ (ಬೆ–೯೬–೩)
– ವೇದಮುಖದಣ್ಣನಿರೆ ಉರಿನಯನದಿಂದ ಸ್ಮರನು ಬೂದಿಯಾದಾಗ ಲೆಕ್ಕಿಸಲಿಲ್ಲವೇಕೆ
– ಆರು ಸಮಯಕ್ಕೊದಗಲಿಲ್ಲ (ಬೆ–೩೨–೨)
– ಕಣ್ಣನಿರಿದು ದಾನವ ಬೇಡಿದವನ ಅಣ್ಣಗಳ ಕಂಗಳ ಕಾಲಿಲೊತ್ತಿದನ
– ಕರೆತಾರೆ ಕಾಮಿನಿ ಕಮಲಜಪಿತನ (ಬೆ–೯೩–೪)
– ಮೂಗನಾದರೆ ವಿಶೇಷ ಒಳ ಮೂಗಲಿ ನೊಡಣ್ಣ ಲೀಲಾವಿಲಾಸ
– ಎಲ್ಲ ನೋಡಿದರಲ್ಲಿ ರಾಮ (ಸ–೫೧–೨)
– ಒಡನೆ ಕರದಾರ ಕರಿತ್ರೈತಿ ರಂಜಣಿಗಿ ಹಾಲಣ್ಣ
– ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ–೭೧–೩)
– ಇದ ಬಲ್ಲ ಜಾಣರ ದೇಹದೊಳಗೆ ನೋಡಣ್ಣ
– ಎಲ್ಲ ನೋಡಿದರಲ್ಲಿ ರಾಮ (ಸ–೫೧–೮)
– ಕಣ್ಣಿನ ಮೂರುತಿ ಬಿಗಿದು ಒಳಗಣ್ಣಿಂದಲೆ ದೇವರ ನೋಡಣ್ಣ
– ಎಲ್ಲ ನೋಡಿದರಲ್ಲಿ ರಾಮ (ಸ–೫೧–೧)
– ಮೂರು ಮೊಳದಾ ಬಳ್ಳಿಗೆ ಆರು ಮೊಳದ ಕಾಯಣ್ಣ
– ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ–೭೧–೪)
– ಆರು ಹತ್ತರ ಮೊಳದ ಕಾಯಿ ಕೊಯ್ಯುವ ಕುಡುಗೋಲಣ್ಣ
– ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ–೭೧–೪)
– ಅಡಿಕೆಯಷ್ಟು ಆಕಳಣ್ಣ ಹಿಡಿಕೆಯಷ್ಟು ಕೆಚ್ಚಲಣ್ಣ
– ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ–೭೧–೩)
– ಕಂದರ್ಪಪಿತ ಸೊಂಡೆಕೊಪ್ಪದ ಆದಿಕೇಶವನ ಮುಂದರಿತು ಭಜಿಸಿ ಮುಕ್ತಿಯ ಪಡೆಯಿರಣ್ಣ
– ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ–೧೨೪–೫)
– ಅಣ್ಣ ತಮ್ಮ ತಾಯಿ ತಂದೆ ಬಯಸಲಾಗದು
– ಡಿಂಬಿನೊಳು ಪ್ರಾಣವಿರಲು (ಬೆ–೧೧೭–೨)
– ಮಕ್ಕಳ ಪಡೆವುದು ಪುಣ್ಯ ಅದು ಕೇಳಿರಿಯಣ್ಣ
– ಅಹುದಾದಡಹುದೆನ್ನಿ (ಬೆ–೧೩೨–೨)
– ಮಸ್ತಕ ಬಂದು ಪಾದಕ್ಕೆ ಬಿದ್ದು ಮುಕ್ಕಿ ಯಾವುದು ನೀವು ತಿಳಿದು ಹೇಳಿರಣ್ಣ
– ಶಂಕರನಾರಾಯಣ ಬಿಡು (ಬೆ–೧೭೫–೭)
– ಎಲ್ಲ ದೇವರ ಪುಟ್ಟಿಸಿ ನೆಲೆಗೊಳಿಸಿದ ಫುಲ್ಲನಾಭನು ಪರದೈವ ನಂಬಣ್ಣ
– ಶಂಕರನಾರಾಯಣ ಬಿಡು (ಬೆ–೧೭೫–೮)
– ಚೋಳನ ತಂದು ಚರ್ಮವ ಸುಲಿದಾಕ್ಷಣ ತೋಳ ಚಪ್ಪರವ ಮಾಡಿದನು ನೋಡಣ್ಣ
– ಶಂಕರನಾರಾಯಣ ಬಿಡು (ಬೆ–೧೭೫–೪)
– ತಂದೆಗೆ ಹಿರಿಯನೆಂದೆನಿಸಿಕೊಂಡಾತನ ಹೊಂದಿಸಿದವರಣ್ಣನ
– ಫುಲ್ಲವದನೆ ಕೇಳೆ ನಿಲ್ಲಲಾರೆ (ಬೆ–೯೫–೨)
– ಗರುಡನ ಮಾತೆಯಣ್ಣನ ಮುಖ ಪಿಡಿದನ ನಾರಾಯಣ ಎನ್ನಿರೊ
– ನಾರಾಯಣ ಎನ್ನಿ ನಾರದವರದನ (ಬೆ–೭೬–೨)
– ಎರವಿನ ತಲೆಯವನಣ್ಣನಯ್ಯನ ಪರಮ ಸಖನ ಸುತನ
– ಹರಿಮುಖಿ ಹರಿವಾಣಿ (ಬೆ–೯೮–೧)
– ದನುಜೆಯಾಳ್ದನಣ್ಣನಣ್ಣನ ಪಿತನ ಮುತ್ತಿ
– ಈತನೀಗ ವಾಸುದೇವನು (ಬೆ–೭೫–೧)
– ಬಳಿದುಣ್ಣಲೀಸದೆ ಸೆಳೆದುಂಡನಣ್ಣನ ಸಲಹಿ ದಾತನ ಸುತನ
– ಏಣನಯನೆ ಏಣಭೋಜ ಮಧ್ಯಳೆ (ಬೆ–೯೯–೧)

- ಮೂರು ಬಟ್ಟೆಯೊಳಿಪ್ಪ ನಾರಿಯ ಗಂಡನ ವೈರಿಯ ಹಿರಿಯಣ್ಣನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೫)
- ಬ್ರಹ್ಮ ಕಪಾಲವ ಧರೆಗಿಳುಹಿದನ ತಮ್ಮ ಅಣ್ಣರನು ಕಡಿದಾಡಿಸಿದವನ
- ಕರೆತಾರೆ ಕಾಮಿನಿಕಮಲಜಪಿತನ (ಬೆ-೯೩-೧)

೧೨೧. **ಅತಿಥಿ** - ಸ್ಕಂಧದಲಿ ಅತಿಥಿಗಳು ವಿದ್ಯಾತತಿಗಳು ಮಹಾ ಚಂದದರಸುಗಳು ಭುಜ ತೋಳಿನಲ್ಲಿ
- ವಿಶ್ವಲೋಕೇಶ ವಿಶ್ವಲೋಕೇಶ (ಸ-೨೩೪-೨)
- ಅತಿಥಿಯಾದರಿಸುವನು ಅತಿ ಲುಬ್ಧನು
- ಸಹಜವಿದು ಈ ನುಡಿಯು (ಬೆ-೧೪೯-೧)

೧೨೨. **ಅತಿರಸ** (ಒಂದು ಕರಿದ ಸಿಹಿ ತಿಂಡಿ)
- ಅಪ್ಪಾಲು ಅತಿರಸ ತುಪ್ಪ ಕಜ್ಜಾಯವು ಒಪ್ಪುವ ಯಾಲಕ್ಕಿ ಶುಂಠಿ ಮೆಣಸು
- ಬಂದೆವಯ್ಯ ಗೋವಿಂದಶೆಟ್ಟಿ (ಬೆ-೧೫೧-೧)

೧೨೩. **ಅತಿಸಾರ** - ಪತಿವ್ರತೆಯರ ಪೀಡಿಸಿದವಗೆ ಅತಿಸಾರ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೨)

೧೨೪. **ಅತುಳ** - ಅತುಳ ಪ್ರಪಂಚಕ್ಕೆ ಹಿತನಾಗಿ ದುಷ್ಟ ಸಂಗತಿಯ ನಾನರಿದಿದ್ದನೊ ಶ್ರೀರಂಗ
- ಕಷ್ಟ ತನುವಿನಲಿ ಹುಟ್ಟಿ ತೊಳಲುವಂಥ (ಸ-೭೯-೨)

೧೨೫. **ಅತ್ತಿಗೆ** - ಅತ್ತಿಗೆ ಮೇಲತ್ತಿಗೆ ಮೊಮ್ಮಗಳ ಮುದ್ದಾಡುತ
- ಬಾರೊ ನಮ್ಮ ಮನೆತನಕ (ಬೆ-೧೦೬-೧)
- ಮಾವ ಅತ್ತೆಯು ನೊಂದು ಅತ್ತಿಗೆಯು ಜರೆದು ಹೇವವನಿಕ್ಕಿ ಚೂರ್ಣವ ಮಾಡಲು
- ಮಾವನ ಮನೆಯೊಳಗೆ (ಬೆ-೧೪೬-೩)
- ಅತ್ತಿಗೆಯ ಮೈದುನ ಬಾರೋ ಹೆತ್ತ ಮಗಳ ಗಂಡ
- ಬಾರೊ ನಮ್ಮ ಮನೆತನಕ (ಬೆ-೧೦೬-೧)

೧೨೬. **ಅತ್ತೆ** - ಅತ್ತೆ ಒಬ್ಬಳ ಕೂಡ ಆಡಿ ಬರುವುದ ಕಂಡೆ ಸತ್ಯ ಮಾಡದಿರೊ ಏ ಸರಿನಂಟ
- ಮುಟ್ಟದಿರೊ ಎನ್ನನು (ಬೆ-೧೦೨-೨)
- ಅತ್ತೆಮನೆ ಸೇರುವಗೆ ಅಭಿಮಾನವುಂಟೆ ಬತ್ತಲೆ ತಿರುಗುವಗೆ ಭಯವು ಇನ್ನುಂಟೆ
- ಹೆತ್ತ ತಾಯಿಗಿಂತ ಅತ್ಯಧಿಕ (ಬೆ-೧೨೮-೨)
- ಸುರರ ವಾದ್ಯದ ಪೆಸರವನ ಬಸುರಲಿ ಬಂದ ಉರಗನತ್ತೆಯ ಮಗನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೪)
- ಮಾವ ಅತ್ತೆಯು ನೊಂದು ಅತ್ತಿಗೆಯು ಜರೆದು ಹೇವವನಿಕ್ಕಿ ಚೂರ್ಣವ ಮಾಡಲು
- ಮಾವನ ಮನೆಯೊಳಗೆ (ಬೆ-೧೪೬-೩)
- ಅತ್ತೆಯೇ ಸೊಸೆಯಾಗಿ ಸೊಸೆಯು ಅತ್ತೆಯು ಆಗಿ ಪುತ್ರ ಪಿತನಾಗಿ ಪಿತ ಪುತ್ರನಾಗಿ
- ಕಲಿಯೇರಿ ಬಂತು (ಬೆ-೧೩೦-೧)
- ಅತ್ತೆಗೆ ವಲ್ಲಭನಾದ ಭೃತ್ಯರಿಗಾಳಾದ ಚಿತ್ತ ಒಲಿದು ಚೆನ್ನ ಆದಿಕೇಶವನೊಳು
- ಏನೆ ಮನವಿತ್ತೆ ಲಲಿತಾಂಗಿ (ಬೆ-೧೫೪-೩)
- ಜತನವೆಂಬೊ ಅತ್ತೆ ಮಾವ ಜೊತೆಗೆ ಹುಟ್ಟಿದಣ್ಣ ತಮ್ಮ
- ಯಾರಿಗಾರು ಬಹರು ಸಂಗಡ (ಸ-೨೨೧-೨)

೧೨೭. **ಅತ್ರಿ** - ಜಲಜಾಪ್ತ ವರಗಾಲವಾನ್ವಿತ ಅತ್ರಿ ಶಾಂಡಿಲ್ಯ
- ಸಿಂಗರದ ಸಿರಿಧರನೆ (ಬೆ-೧೬೭-೪)
- ಮೂಜಗದ ವ್ಯವಹಾರಿ ಮುಂಕೊಂಡು ಭರದ್ವಾಜ ರೋಮಶ ಅತ್ರಿ ಗಾರ್ಗೇಯ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೬)

೧೨೮. **ಅದಟ** - ಕ್ಷತ್ರಿಯರ ಚಟುಲ ಭಲದಿ ಒಗೆದು ಕರುಳ ಬಗೆದು ತುಳಿದದಟರನು ಸಂಹರಿಸಿದ ಚೆಲವರಾಯ
- ಯಾದವಗಿರಿವಾಸನಹುದೋ (ಸ-೨೧೯-೨

೧೨೯. **ಅದುಭುತ** - ಬಂಧು ಹದುಳ

ಪ್ರಹ್ಲಾದನ ಹೆದರಿಸಿದಸುರನ ಉದರವ ಬಗೆ ದಂಥದುಭುತ ಮಹಿಮನ
- ಮರೆಯದಿರು ಹರಿಯ (ಸ-೨೦೩-೧)

೧೩೦. **ಅದ್ದು** - ಕ್ಷೀರದೊಳದ್ದು ನೀರೊಳಗದ್ದು ಗೋವಿಂದ ಹೇರನೊಪ್ಪಿಸಿದ ಮೇಲ್ ಸುಂಕ ವೇತಕೆ ದೇವ
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೪)
- ಕ್ಷೀರದೊಳಗದ್ದು ನೀರೊಳಗದ್ದು ನೀನೆ ಗತಿ ನಾರಾಯಣನೆ ರಕ್ಷಿಸೈ
- ವಾಸುದೇವಾಯ ನಮೋ (ಬೆ-೯೦-೫)

೧೩೧. **ಅದ್ವಿತೀಯ** - ಏಕೋದೇವನದ್ವಿತೀಯ ಬ್ರಹ್ಮ ನೀನೆಂಬುದಕೆ ಏಕಾರ್ಣವದಲಿದ್ದ ವಟಪತ್ರ ಹೊಣೆಯೊ
- ನಿನ್ನ ಮಹ ಮಹಿಮೆಗೆ (ಬೆ-೫೦-೩)

೧೩೨. **ಅಧಮ** - ಕೇವಲಾಧಮರೆಲ್ಲ ಸಿರಿ ಮದದಿ ಸೊಕ್ಕಿದರು ಕಾವರಾರೈ ಸಾಧುಸಜ್ಜನರ ನೀಗ
- ಕಲಿಯೇರಿ ಬಂತು (ಬೆ-೧೩೦-೨)
- ಅತ್ತೆ ಮಾವರ ಕೀರ್ತಿಯ ಕೊಂಡಾಡುವ ಧಮರ ಹೊತ್ತು ಇರಲಾರೆನೆನುತ ಮತ್ತೆ ನಡುಗಿದೆಯ
- ಏಕೆ ನಡುಗಿದೆ ತಾಯೆ (ಸ-೫೬-೨)

೧೩೩. **ಅಧಿಕ** - ಧರೆಗಧಿಕನಾಥನಾ ತೊಡೆಯ ನೇರಲು ಕಂಡು ಜರೆಯಲಾ ಧ್ರುವನ ನೀ ಕಾಯ್ದೆಯಂತೆ
- ಆ ವೇಳೆಯಲ್ಲಿ ಆರಾರ ಕಾಯ್ದೆಯೊ (ಬೆ-೬೬-೨)
- ಪೊಡವಿಗಧಿಕ ಕಾಗೆನೆಲೆಯ ಒಡೆಯ ವೆಂಕಟೇಶ ನಿನ್ನ ಅಡಿಗಳಿಂದ ಸಲಹೊ ಎನ್ನ ಕನಕನೊಡೆಯನೆ
- ಕಣಿಯ ಹೇಳಬಂದೆ ನಾನು (ಬೆ-೭೨-೫)
- ಅಧಿಕವಾದ ಇನ್ನೊಂದೇನನುಸುರುವೆನು ನಾ ಮುನ್ನ ಸಂಪಾದಿಸುವ ಭಕುತಿ ಇನ್ನೆಂತಿಹುದೊ ದೇವ
- ಎಂತಹುದೊ ನಿನ್ನಯ ಭಕುತಿ (ಸ-೪೧-೨)
- ದೇಶಕಧಿಕ ಕಾಗೆನೆಲೆಯಾದಿಕೇಶವನ ಲೇಸಾದ ಚರಣಕಮಲದ ಬಲವಿರದನಕ
- ಆವ ಬಲವಿದ್ದರೇನು (ಬೆ-೧೩೩-೫)
- ನೆಲೆಯಿಲ್ಲದಧಿಕ ನರಕದೊಳಿಳಿವ ಎನ್ನ ನೀ ನಳಿನಾಕ್ಷ ಕಾಯ್ದುಕೊಳ್ಳೊ
- ನೊಂದೆನಾ ಹರಿಯೆನ್ನದೆ (ಬೆ-೧೩-೨)
- ಉತ್ತಮರ ಸಂಗದಿಂದ ಅಧಿಕ ಧರ್ಮವುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೧)
- ಶಾಪದಿ ಬಹುಕಾಲ ಅಹಲ್ಯೆಯ ಶಿಲೆಯಾಗೆ ಆ ಪ್ರಾಣ ನಿರ್ಮಿಸಿದ ಅಧಿಕ ಪಾದ
- ಎಂಥ ಕೀರುತಿ ಪೊತ್ತುವೆರಡು ಪಾದ (ಬೆ-೮೩-೨)
- ಪಿಸುಣನಿಗಿಂತ ಅಧಿಕಹೀನರುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೪)
- ಸುತಲಾಭದಿಂದ ಅಧಿಕ ಲಾಭವುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೨)
- ಧನಲಾಭದಿಂದ ಅಧಿಕ ಲಾಭವುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೩)
- ಆತನಾ ಪದತೋಯ ಶಿರಸಾವಹಿಸಿ ಪಾನದಿಂದಧಿಕರಾದರು ಜೀವಿಗಳು ಮನುಜ
- ಆತನೇ ಪರಮಾತ್ಮ ಪರತತ್ತ್ವ (ಬೆ-೭೪-ಪ)

೧೩೪. **ಅಧಿಕಪುರಿ** - ಅರಿಗಂಜೆನೊ ನಾನು ಅಧಿಕಪುರಿ ಕಾಗೆನೆಲೆಯಾದಿಕೇಶವ ರಾಯ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೫)

೧೩೫. **ಅಧಿಕಾರಿ** - ಗುರುವಿನುಪದೇಶದಲಿ ಪರಮ ರಹಸ್ಯವನರಿತು ಮರೆಯದಲೆ ಅಲ್ಲಿ ಅಧಿಕಾರಿಯಾಗೊ
- ನಾರಾಯಣೆನು ಮನವೆ (ಬೆ-೧೪೧-೧)

೧೩೬. **ಅಧಿದೇಶ** - ದೇಶಾಧಿದೇಶಗಳ ತಿರುಗುವ ಗರುಡನಿಗೆ ನಾಸಿಕದ ಕೊನೆ ಡೊಂಕ ತಿದ್ದಲಿಲ್ಲ ಹರಿಯು
- ಪ್ರಾಚೀನ ಕರ್ಮವಿದು (ಬೆ-೧೦೭-೩)

೧೩೭. **ಅಧಿಪ/ಅಧಿಪತಿ** – ಬೇಡ ಬೇಡಾ ಎಲೆಲೆ ದುರಿತಗಳಿರಾ ನಮ್ಮ ಬಾಡದಧಿಪನ ಕಿಂಕರನ ಕೂಡ ತೊಡರು
– ಬೇಡ ಬೇಡ ಎಲೆಲೆ ದುರಿತಗಳಿರ (ಬೆ–೨೯–ಪ)
– ದೇಶಾಧಿಪತಿ ನರಹರಿಯೆ ನಿನ್ನಯ ಪಾದ ದಾಸರ ದಾಸನೆಂದೆನಿಸಬೇಕೆನ್ನ
– ದೇಶಾಧಿಪತಿ ನರಹರಿಯೆ (ಬೆ–೨೧–ಪ)
– ವಾಸಾಧಿಪತಿ ಕಾಗೆನೆಲೆಯಾದಿಕೇಶವನ ದಾಸಾನುದಾಸರಿಗೆ ದಾಸ ನೀನಾಗೋ
– ನಾರಾಯಣೆನು ಮನವೆ (ಬೆ–೧೪೧–೩)
– ಖಗವೈರಿಯಂತೆ ಕಿಸುಕೆಲೆವುದಾವಾಟ ಜಗದಧಿಪತಿ ನಾಮ ಸ್ಮರಿಸು ಮರುಳೆ
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೪)
– ಭುಜಗೇಶ್ವರ ಬಲ್ಲ ಭೂರಿಲೋಚನ ಬಲ್ಲ ತ್ರಿಜಗದಧಿಪತಿ ತ್ರಿವಿಕ್ರಮನೆಂಬುದನು
– ಬಲ್ಲವರೆನಿಪರು ಬಲ್ಲವರರಿಯರು (ಬೆ–೭೩–೧)
– ಮೃಗಧರವೈರಿಯ ಪೆಗಲೇರಿ ಬರುವಂಥ ಜಗದಧಿಪತಿಯಾದನ
– ಫುಲ್ಲವದನೆ ಕೇಳೆ ನಿಲ್ಲಲಾರೆ (ಬೆ–೯೫–೧)

೧೩೮. **ಅಧೀನ** – ಈರೇಳು ಜನ್ಮದಿ ನಿನ್ನಾಧೀನ ನಾಗಿಪ್ಪೆ ನಾನಾರ ಸೇರುವೆನೊ ನಾನೇನ ಮಾಡುವೆನೊ
– ಹೂವ ತರುವರ ಮನೆಗೆ (ಬೆ–೪೩–೨)

೧೩೯. **ಅಧೀಶ** – ದಾಸಾರ್ಯರ ದಾಸರ ದಾಸ ನಾನು ಬಾಡಧೀಶ ಕಾಯ್ದುಕೊಳ್ಳೊ
– ದಾಸಾರ್ಯರ ದಾಸರ ದಾಸ (ಸ–೧೧೯–ಪ)

೧೪೦. **ಅಧೋಕ್ಷಜ** – ಎನ್ನ ಭೇದಮಾಡಿ ನೋಡದಿರು ಅಧೋಕ್ಷಜಾ
– ಈಶ ನಿನ್ನ ಚರಣ ಭಜನೆ (ಬೆ–೬೫–೧೭)

೧೪೧. **ಅಧ್ವರ** (ಯಜ್ಞ) – ಬಲಿಯಧ್ವರದ ಸಾಲೆಗೊಂದು ವೇಷವನಾಂತು ಸಲೆ ಬಂದು ಧರೆಯ ಮೂರಡಿಯ ಬೇಡೆ
– ನೋಡಯ್ಯ ನಿನ್ನ ದಾಸರ (ಬೆ–೮೫–೫)

೧೪೨. **ಅನಂತ** (ಕೊನೆಯಿಲ್ಲದ) – ಎಂತುಟು ತನ್ನ ನೆನೆವರ ಮೇಲೆ ಕರುಣವು ಅನಂತ ವಸ್ತ್ರಗಳಾದುವು
– ವಾಸುದೇವಾಯ ನಮೋ (ಬೆ–೯೦–೯)

೧೪೩. **ಅನಂತ** (ವಿಷ್ಣು) – ನಾರಾಯಣ ಅಚ್ಯುತಾನಂತಾದಿಕೇಶವನ ಸಾರಾಮೃತವನುಂಡು ಸುಖಿಸೊ ಲಂಡ ಜೀವವೆ
– ದಾಸನಾಗೋ ಭವಪಾಶ ನೀಗೋ (ಬೆ–೨೦–೫)

೧೪೪. **ಅನಕ** – ಕ್ಷೋಣಿಯೊಳು ಕನಕದಾಸನ ನೆರಳು ಅನಕ ಏನು ಬಲಿಸಿದೆಯೊ ಔಷಧಿಯ ಕುಣುಕ
– ಕದರಮಂಡಲಗಿಯ ಕರುಣಿ ಹನುಮ ರಾಯ (ಸ–೭೫–೩)
– ಆವ ಬಲವಿದ್ದರೇನು ವಾಸುದೇವನಾ ಬಲವು ನಿಜವಾಗಿ ಇರದನಕ
– ಆವ ಬಲವಿದ್ದರೇನು (ಬೆ–೧೩೩–ಪ)
– ಆರು ಬಾಳಿದರೇನು ಆರು ಬದುಕಿದರೇನು ನಾರಾಯಣನ ಸ್ಮರಣೆ ನಮಗಿಲ್ಲದನಕ
– ಆರು ಬಾಳದರೇನು (ಬೆ–೩೦–ಪ)
– ಕಂತುಪಿತ ಕಾಗೆನೆಲೆಯಾದಿಕೇಶವ ಲಕ್ಷ್ಮೀಕಾಂತ ತನ್ನಲ್ಲಿಗೆ ಕರೆಕಳುಹುವನಕ
– ಒಲ್ಲೆನೆಂದರಾಗುವುದೆ (ಬೆ–೧೧೦–೩)
– ದೇಶಕಧಿಕ ಕಾಗೆನೆಲೆಯಾದಿಕೇಶವನ ಲೇಸಾದ ಚರಣಕಮಲದ ಬಲವಿರದನಕ
– ಆವ ಬಲವಿದ್ದರೇನು (ಬೆ–೧೩೩–೫)

೧೪೫. **ಅನರ್ಘ್ಯ** (ಅತ್ಯಂತ ಶ್ರೇಷ್ಠನಾದವನು)
– ಅನರ್ಘ್ಯನೊಲಿದುಪ್ಪವಡಿಸಯ್ಯ ಹರಿಯೆ
– ತಂಗದಿರನನಿಮಿಷ ತಾರಕೆಗಳು (ಬೆ–೧೬೯–೨)

೧೪೬. **ಅನರ್ಥಕ** – ಊದುವ ಕಾಳೆಯ ದನರ್ಥಕವಾದಲ್ಲಿ ನುಡಿಸುವ ಬಿರುದು ಒಡೆಯಂಗಲ್ಲದೆ
– ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ–೧೪೫–೩)

೧೪೭. **ಅನಲಸ್ನೇಹಿತ** (ವಾಯು) – ಅಜಜ್ಞಾನಾಧಿಕ ಬಲ್ಲ ಅನಲಸ್ನೇಹಿತ ಬಲ್ಲ ಗಜ ಚರ್ಮಾಂಬರ ಬಲ್ಲ ಗರುಡ ಬಲ್ಲ

– ಬಲ್ಲವರೆನಿಪರು ಬಲ್ಲವರರಿಯರು (ಬೆ–೭೩–೧)

೧೪೮. ಅನವರತ – ಅನವರತ ನಾಭಿಯೊಳು ಶತಪತ್ರವಿಹಗೆ ಮಿಕ್ಕಿನ ಪೂವ ಮುಡಿಸಲೆಂತೈ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೧)
– ಆತನ ಪಾಡುವೆ ಅನವರತ ಪ್ರೀತಿಯಿಂದ ಭಾಗವತರ ಸಲಹುವ ದೇವನೆಂದು
– ಆತನ ಪಾಡುವೆ ಅನವರತ (ಬೆ–೭೦–ಪ)

೧೪೯. ಅನಾಥ – ಬಾಡದಾದಿಕೇಶವನೆ ಅನಾಥ ಬಂಧುವೆ ಅಚ್ಯುತ ಮುರಾರಿ ಹರಿ ಯೆಂಬ ಮಾತನಾಡಿಸಿ ಮುಕುತಿಯನೊದಗಿಸಯ್ಯ
– ಅಣುಮಹತ್ತಾದ ದೇವ (ಬೆ–೭೧–೩)

೧೫೦. ಅನಾಥಬಂಧು – ದಕ್ಷಸುತೆಪತಿಸಖನೆ ಪಕ್ಷಿವಾಹನ ದೇವ ರಕ್ಷಿಸು ಅನಾಥಬಂಧು
– ವಾಸುದೇವಾಯ ನಮೋ (ಬೆ–೯೦–೭)

೧೫೧. ಅನಾಥಳು – ಅನಾಥಳನು ದೇವ ಅಭಿಮಾನ ಕಾಯೊ
– ವಾಸುದೇವಾಯ ನಮೋ (ಬೆ–೯೦–೨)
– ಭಾರ ನಿನ್ನದು ಎಂದು ನಂಬಿದ ಅನಾಥಳನು
– ವಾಸುದೇವಾಯ ನಮೋ (ಬೆ–೯೦–೫)

೧೫೨. ಅನಿಮಿಷ (ದೇವತೆ) – ತಂಗದಿರನ ನಿಮಿಷ ತಾರಕೆಗಳು ಮಸಳಿಸೆ ಪತಂಗ ಪರ್ವತವ ಅಡರಿ ಬಂದನು
– ತಂಗದಿರನ ನಿಮಿಷ ತಾರಕೆಗಳು (ಬೆ–೧೬೯–ಪ)
– ಅನಿಮಿಷರಂದದಿ ವನವಾಸವ ಪೊಕ್ಕನ ಶ್ರೀರಾಮನೆನ್ನಿರಿ
– ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ–೮೧–೧)
– ಅನಿಮಿಷರಿಗಮೃತವನ್ನೆರೆದವನ ತೃಷೆಯ ನೀರಿನ್ನೊಳೆಂತು ಸಂತವಿಡಲಿ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೩)

೧೫೩. ಅನಿರುದ್ಧ – ಕಿಂಕರನ ಜನಕ ಅನಿರುದ್ಧ ಪುರುಷೋತ್ತಮ ನಾಮಂಗಳಂ ಬಿಡದೆ
– ಅಭ್ಯಾಸವನು ಮಾಡಬೇಕು (ಬೆ–೩೮–೩)
– ಎನಗೆ ಮುಕ್ತಿ ಪಾಲಿಸಿಂದು ಅನಿರುದ್ಧನೆ
– ಈಶ ನಿನ್ನ ಚರಣ ಭಜನೆ (ಬೆ–೬೫–೧೫)

೧೫೪. ಅನಿಲ – ವಿನತೆಯಾತ್ಮಜ ಪಕ್ಷದ ನಿಲನಿರೆ ಬೇರೆ ಬೀಸಣಿಗೆಯಿನ್ನೇಂ ಬೀಸಲಿ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೩)

೧೫೫. ಅನಿಲಜ (ಭೀಮಸೇನ) – ಅನುವರ ದೊಳಾಯವನು ತೊಡೆಯ ಸನ್ನೆಯ ಮಾಡಿ ಅನಿಲಜನ ಕೈಲಿ ಕೌರವನ ಕೊಲ್ಲಿಸಿದೆ
– ನೀನಾವ ಬಾಂಧವನೊ (ಬೆ–೭೮–೮)

೧೫೬. ಅನುಗತಿ (ಸಾವು ?) – ಜನನವಾದರೆ ಹಾಡಿ ಹರಸಲೇತಕೆ ಅನುಗತಿಯನು ಹೇಳಿದ ರಳಲೇಕೆ
–ಬೆರೆಯದಿರು ಬೆರೆಯದಿರು (ಬೆ–೧೪೪–೩); ಬೇಕೆಂದರೆ ಬಾರದು (ಸ–೧೮೭–೩)

೧೫೭. ಅನುಗಾಲ – ಬಲಿ ಚಕ್ರವರ್ತಿ ಭಕ್ತಿಗೆ ಮೆಚ್ಚಿ ಅವನ ಬಾಗಿಲ ಕಾಯ್ದುಚ್ಯುತನು ಅನುಗಾಲದಿ
– ಆರು ಬಲ್ಲರು ಹರಿಹರರ (ಬೆ–೮೨–೨)

೧೫೮. ಅನುಚರ್ಮ (?) – ಅಂಡಲೆದು ಓಡುವ ವ್ಯಾಘ್ರಾನುಚರ್ಮ ಕಂದ(?)
– ಸಿಂಗರದ ಸಿರಿಧರನೆ (ಬೆ–೧೬೭–೩)

೧೫೯. ಅನುಜ – ದಶಕಂಠನ ಕೊಂದು ಅನುಜಗೆ ಪಟ್ಟಗಟ್ಟಿದ ದಶರಥಸುತನೆಂಬ ಮದ ಸೊಕ್ಕಿದಾನೆ
– ಆನೆ ಬರುತಾದೆ ನೋಡಮ್ಮ (ಸ–೧೫–೨)
– ಸುರಮುನಿಯನುಜನ ಪಾದವ ಪಿಡಿದನ ಗೋವಿಂದ ಎನ್ನಿರೋ
– ಮಂದರಧರ ಪಾವನ ಇಂದಿರಾರಮಣ (ಸ–೨೦೦–೧)
– ಎರವಿನ ಮಾತಾಪಿತರನುಜರೆಂಬ ಉರಿ ಕಾವು ಕ್ಷಯವೆಂಬ ಸರಿಗಳನು ವಂದಿಸುವೆನು
– ಎಂತಹುದೊ ನಿನ್ನಯ ಭಕುತಿ (ಸ–೪೧–೪)
– ಚಂದ್ರವಂಶದ ರಾಯನನುಜ ಸಖನಾದವನ
– ಕಾವನಯ್ಯನ ಕಳುಹು (ಬೆ–೧೫೩–೧)
– ಶ್ರೀಕಾಂತ ನೀನಿತ್ತ ವರವು ಸ್ಥಿರವೆಂಬುದಕೆ ನಾಕೇಶಜಿತನ ಪಿತನನುಜ ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ–೫೦–೩)

- ಜಗವರಿಯೆ ಸೋದರನು ಮಮತೆಯುಳ್ಳವನೆನಲೆ ಜಗವರಿಯೆ ವಾಲಿಯನು ಅನುಜ ಕೊಲಿಸಿದ ಮೇಲೆ
- ಆರು ಹಿತವರು ಎಂದು ನಂಬಬೇಡ (ಬೆ-೩೩-೨)
- ಅಂಧಕನನುಜನ ಕಂದನ ತಂದೆಯ ಕೊಂದನ ಶಿರದಲಿ ನಿಂದವನ
- ಮಂಗಲಂ ಜಯ ಮಂಗಲಂ (ಬೆ-೧೭೨-೧)
- ವರುಷವೈದರ ಪೆಸರವನ ತಾಯನುಜನ ಧರಿಸಿದಾತನ ಸಖನ
- ರಾಜವದನೆ ಸುರರಾಜನ (ಬೆ-೯೭-೨)
- ಗರಳಕಂಧರ ಸಖನನುಜನ ಕೊಂದನ ಗೋವಿಂದ ಎನ್ನಿರೋ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೧)
- ರಾಜ ಧರ್ಮಗೆ ಅನುಜನಾದಗೆ ರಾಜ ಪೂಜಿತ ರಾಜಗೆ
- ಶರಣು ಶರಣು ದಶರಥರಾಮದೂತಗೆ (ಸ-೨೩೬-೨)
- ಭಾವ ಮೈದುನ ಬಾರೊ ಮಾವ ಬೀಗನ ಅನುಜ
- ಬಾರೊ ನಮ್ಮ ಮನೆತನಕ (ಬೆ-೧೦೬-೨)
- ದಶಕಂಠನನುಜನು ಜಾನಕಿಯ ಬಿಡಹೇಳೆ ಅಸುರ ಕೋಪವ ತಾಳಿ ಅಟ್ಟಲಾಗ
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೪)
- ದಶಕಂಠನನುಜಂಗೆ ಸ್ಥಿರ ಪಟ್ಟವನು ಕೊಟ್ಟೆ
- ವಾಸುದೇವಾಯ ನಮೋ (ಬೆ-೯೦-೬)
- ಹಗಲೆ ಮೋಹಿಸಿದನ ಮಗನ ಅನುಜರೊಳು ಹಗೆಮಾಡಿಕೊಂಡಿಪ್ಪನ
- ಫುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೧)
- ಪಣ್ಣ ಕೊಯ್ದನನುಜಗೆ ಸಹಾಯನಾದನ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ (ಬೆ-೮೦-೧)

೧೬೦. ಅನುಜೆ - ತನ್ನ ಅನುಜೆಯಾಳಿದವನ ಬೆಂಕಿ ತಿನ್ನದಂತೆ ಕಾಯ್ದ
- ಈತನೀಗ ವಾಸುದೇವನು (ಬೆ-೭೫-೧)
- ರುಕ್ಮನನುಜೆಯಾಳಿದವನ ಮೂರ್ತಿಯನ್ನು ನೋಡಿರೊ
- ಈತನೀಗ ವಾಸುದೇವನು (ಬೆ-೭೫-೧)
- ಕೌರವೇಶನ ಅನುಜೆಯನಾಳಿದನ ಶಿರವನ್ನು ಭೇದಿಸಿ
- ಈತನೀಗ ವಾಸುದೇವನು (ಬೆ-೭೫-೧)

೧೬೧. ಅನುದಾಸ (ದಾಸನ ದಾಸ) - ದಾಸ ದಾಸರ ಮನೆಯ ದಾಸಾನುದಾಸ ನಾನು
- ದಾಸ ದಾಸರ ಮನೆಯ ದಾಸ (ಬೆ-೨೩-ಪ)
- ವಾಸಾಧಿಪತಿ ಕಾಗೆನೆಲೆಯಾದಿಕೇಶವನ ದಾಸಾನುದಾಸರಿಗೆ ದಾಸ ನೀನಾಗೋ
- ನಾರಾಯಣೆನು ಮನವೆ (ಬೆ-೧೪೧-೩)

೧೬೨. ಅನುದಿನ - ಲಂಕೆಯ ಅನುದಿನ ಸ್ಥಿರರಾಜ್ಯವಾಳಿದ ಕಿಂಕರರೊಳಿರಿಸು ಕಂಡೆಯ ಎನ್ನನು
- ಶೇಷಶಯನ ನಿನ್ನ ಭಾಗವತರ (ಬೆ-೨೭-೪)
- ಶರವ ತಪ್ಪಿಸಿ ತನ್ನ ದಾಸರಿಗೆ ಅನುದಿನ ಕರೆದು ವರವನಿತ್ತು ಮನ್ನಿಸಿ ಸಲಹುವ
- ರಮಣಿ ಕೇಳೆಲೆ ಮೋಹನ (ಬೆ-೯೬-೩)
- ಮೋಸದಿ ಬಲಿಯ ದಾನವ ಬೇಡಿ ಅನುದಿನ ಬೇಸರಿಸಿದ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೩)
- ಉನ್ನತ ಕಾಗೆನೆಲೆ ಆದಿಕೇಶವನ ಅನುದಿನ ನೆನೆವುದು ಭಕ್ತಿಗಾಗಿ ಪರಮುಕ್ತಿಗಾಗಿ
- ಎಲ್ಲರೂ ಮಾಡುವುದು ಹೊಟ್ಟೆಗಾಗಿ (ಬೆ-೧೩೪-೯)
- ಘನ ಕೃಪಾನಿಧಿ ಕಾಗೆನೆಲೆಯಾದಿಕೇಶವನ ಅನುದಿನದಿ ನಂಬಿದವಗಿಹಪರದ ಸುಖವು
- ಆರು ಹಿತವರು ಎಂದು ನಂಬಬೇಡ (ಬೆ-೩೩-೩)
- ತನು ನಿನ್ನದು ಜೀವನ ನಿನ್ನದು ರಂಗ ಅನುದಿನದಲಿ ಬಾಹ ಸುಖದುಃಖ ನಿನ್ನದಯ್ಯಾ
- ತನು ನಿನ್ನದು ಜೀವನ ನಿನ್ನದು (ಬೆ-೫೭-ಪ)

೧೬೩. **ಅನುಬಂಧಿ** - ತನಗೆ ದೇಹಾನು ಬಂಧಿಗಳೆ ಬಂಧುಗಳೆಂದು ಮನದಿ ನಿಚ್ಚಳವಾಗಿ ನಂಬಬೇಡ
- ಆರು ಹಿತವರು ಎಂದು ನಂಬಬೇಡ (ಬೆ-೩೩-೩)

೧೬೪. **ಅನುಭವ** - ನೆಲೆಯು ಸರ್ವರಿಗನುಭವವ ಕೋಟಿ ಮನೋಹರುಷವನ್ನು ನಮಗಿತ್ತ ವೈಭವವ
- ಕೈಯ ತೋರಿದ ಬಗೆಯ (ಸ-೯೧-೪)
- ಲಿಂಗಾಂಗದೊಳಗಿರುವ ಅನುಭವವ ತಿಳಿಯದೆ ಅಂಗಲಿಂಗದ ನೆಲೆಯ ಗುರುತರಿಯದೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೪)

೧೬೫. **ಅನುಭವಗೋಷ್ಠಿ** - ಬಹು ಕೋಪಿಗಳಿದ್ದಲ್ಲಿ ಅನುಭವಗೋಷ್ಠಿಯ ಮಾಡಬಾರದು
- ವರಕವಿಗಳ ಮುಂದೆ ನರಕವಿಗಳ ವಿದ್ಯೆ (ಸ-೨೩೨-೧)

೧೬೬. **ಅನುಭವಿಸು** - ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲ ಅರ್ಥ ಸಂಪದರಾಗಿ ಅನುಭವಿಸುತಿಹರು
- ಕಲಿಯೇರಿ ಬಂತು (ಬೆ-೧೩೦-೮)

೧೬೭. **ಅನುಮಾನ** - ಅನುಮಾನ ಮಾಡದೆ ಪೇಳೋ ನರಹರಿಯೆ
- ಆವ ಸಿರಿಯಲಿ ನೀನು ಎನ್ನ ಮರೆತೆ (ಬೆ-೬೭-೪)
- ಅನುಮಾನವಾಗಿ ಜೀವನ ತೊಲಗಿದಾಕ್ಷಣದಿ ಮನೆಯೊಳೊಂದರೆಗಳಿಗೆ ನಿಲ್ಲಿಸಿಕೊಳ್ಳರೊ
- ಆರು ಸಂಗಡ ಬಾಹೋರಿಲ್ಲ (ಬೆ-೧೫-೨)

೧೬೮. **ಅನುರಾಗಿಸು** (ಪ್ರೀತಿಸು) - ಕೆಲವರನುರಾಗಿಸುತ ರತ್ನದಾರತಿಯ ತಾಳ್ದರು
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೭)

೧೬೯. **ಅನುವರ** (ಯುದ್ಧ) - ಅನುವರದೊಳಾಯವನು ತೊಡೆಯ ಸನ್ನೆಯ ಮಾಡಿ ಅನಿಲಜನ ಕೈಲಿ ಕೌರವನ ಕೊಲ್ಲಿಸಿದೆ
- ನೀನಾವ ಬಾಂಧವನೊ (ಬೆ-೭೮-೮)

೧೭೦. **ಅನುವು** - ಅನುವರಿತು ಇಕ್ಕಬೇಕು ಅರಿವರ್ಗವೆಂಬ ತುಂಟರಳಿಸಿ
- ಅಡಿಗೆಯನು ಮಾಡಬೇಕಣ್ಣ (ಸ-೧-೧)

೧೭೧. **ಅನುಶ್ರುತಿ** (ಸ್ಮರಣೆ) - ಮುನೀಶನೆಂದೆನಿಸುವ ಕಾಗಿನೆಲೆ ಆದಿಕೇಶವನ ಅನುಶ್ರುತಿಯನು ಬಿಡದಿರು ಎಲೆ ಮನವೆ
- ಬೆರೆಯದಿರು ಬೆರೆಯದಿರು (ಬೆ-೧೪೪-೩);
ಬೇಕೆಂದರೆ ಬಾರದು (ಸ-೧೮೭-೩)

೧೭೨. **ಅನುಷ್ಠಾನ** - ಜಪತಪಾನುಷ್ಠಾನ ಜಪಿತನೆಂದೆನಿಸುವೆನೆ ಜಾಣತನ ಮೊದಲಿಗಿಲ್ಲ
- ನೀನುಪೇಕ್ಷೆಯ ಮಾಡೆ (ಬೆ-೪೯-೧)

೧೭೩. **ಅನುಸರಿಸು** - ಅಪರಿಮಿತ ಕರ್ಮವನು ಅನುಸರಿಸಿ ನಡೆವುದಕೆ ನಿಪುಣತ್ವವೆನಗೆ ಇಲ್ಲ
- ನೀನುಪೇಕ್ಷೆಯ ಮಾಡೆ (ಬೆ-೪೯-೧)

೧೭೪. **ಅನೃತ** - ತರಣಿತನಯನ ಸುತನ ಬಾಯೊಳು ಅನೃತವ ಭರದಿಂದ ನುಡಿಸಿದನ
- ತೋರೆ ಬೇಗನೆ ಸಖಿ (ಬೆ-೯೪-೧)
- ಕಪಟವರಿಯದ ನೃಪನಕೈಯೊಳನೃತವ ನುಡಿಸಿ ಉಪಮೆಯಲಿ ಶಸ್ತ್ರಪಂಡಿತನ ಕೊಲ್ಲಿಸಿದೆ
- ನೀನಾವ ಬಾಂಧವನೊ (ಬೆ-೭೮-೫)

೧೭೫. **ಅನ್ನ** - ಜೊನ್ನೆಯ ತುಪ್ಪ ಅನ್ನ ಒಲ್ಲದೆ ಎಲುವು ಮಾಂಸವನ್ನು ತಿಂಬ ಕುನ್ನಿಯಾದನಯ್ಯ ಕೃಷ್ಣ
- ಎಷ್ಟು ಪ್ರೀತಿಯೊ ಮನಕೆ (ಸ-೫೨-೫)
- ಹಸಿದವರಿಗನ್ನವಿಕ್ಕದವಗೆ ಆಮ್ಲಪಿತ್ತ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೩)
- ಅನ್ನ ತುಪ್ಪವಿರಲಿಕ್ಕೆ ಮದ್ಯಪಾನಗಳೇಕೆ
- ಮರೆಯದಿರು ಮರೆಯದಿರು (ಬೆ-೩೬-೩)
- ಅನ್ನ ವಸ್ತ್ರ ಭೋಗಿಯಾಗಿ ತನ್ನ ಸುಖವ ಕಾಣಲಿಲ್ಲ
- ಡಿಂಬಿನೊಳು ಪ್ರಾಣವಿರಲು (ಬೆ-೧೧೭-೨)
- ಅನ್ನ ವಸ್ತ್ರಗಳಿಂದ ಚೆನ್ನಾಗಿ ಬಾಳುವರು ಭಿನ್ನತಂತ್ರವಮಾಡಿ ಕೆಡಿಸುತಿಹರು
- ಕಲಿಯೇರಿ ಬಂತು (ಬೆ-೧೩೦-೭)

- ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ
- ಬಂದೆವಯ್ಯ ಗೋವಿಂದ ಶೆಟ್ಟಿ (ಬೆ-೧೫೧-೨)
- ಒಡಲು ಹಸಿಯಲು ಅನ್ನವಿಲ್ಲದಲೆ ಇರಬಹುದು
- ತೊರೆದು ಜೀವಿಸಬಹುದೆ (ಬೆ-೫೫-೨)
- ಷಡುರಸದನ್ನಕೆ ನಲಿದಾಡುವ ಜಿಹ್ವೆ ಕಡು ರುಚಿಗೊಂಡರಾರುಚಿ ನಿನ್ನದಯ್ಯ
- ತನು ನಿನ್ನದು ಜೀವನ ನಿನ್ನದು (ಬೆ-೫೭-೨)
- ಮೀಸಲ ಅನ್ನ ಕೂಸಾಗಿ ಸವಿದುಂಡ ವೇಷಧಾರಿ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೩)
- ತೊಗಲ ಬಿಲ್ಲೆ ಕೊರಳಲಿ ಕಟ್ಟಿಕೊಂಡು ಹಗಲು ಇರುಳು ಅನ್ನಪಾನಕೆ ಹೋಗದೆ
- ಗೋವಿಂದ ಗೋವಿಂದ ಎನ್ನಲರಿಯದೆ (ಬೆ-೧೬-೪)
- ಅನ್ನದಿಂದ ಬಂದ ಕಾಮ ನಿನ್ನದೇನೆಲೊ
- ನಾನು ನೀನು ಎನ್ನದಿರೊ (ಬೆ-೧೪೦-೧)
- ಯೋಧಾರ್ಜುನನ ಅರೆದು ಸ್ವಾದು ಅನ್ನವ ತೊರೆದು
- ಸಿಂಗರದ ಸಿರಿಧರನೆ (ಬೆ-೧೬೭-೫)
- ಎಂಟುಹತ್ತರ ಅನ್ನವನು ಭಕ್ಷಿಸುವುದು
- ಮರ ನುಂಗುವ ಪಕ್ಷಿ (ಬೆ-೧೬೧-೧)
- ಇಕ್ಕುವ ಅನ್ನವು ಧರ್ಮ ಇಹಪರಕದು ಅತಿ ಧರ್ಮ
- ಅಹುದಾದಡಹುದೆನ್ನಿ (ಬೆ-೧೩೨-೨)

೧೭೬. ಅನ್ನದಾನ - ಹೊನ್ನಿದ್ದು ಅನ್ನದಾನ ಮಾಡದವನೆ ದ್ರೋಹಿ
- ದ್ರೋಹಿಗಳ ವಿವರ ವನು ನಾ ಪೇಳ್ವೆನಯ್ಯ (ಸ-೧೨೩-೩)
- ನಿತ್ಯ ಅನ್ನದಾನವಿರಲು ಭಯವು ಏತಕೆ
- ಸತ್ಯವಂತರ ಸಂಗವಿರಲು (ಬೆ-೧೨೪-ಪ)
- ವಸುಧೆಯೊಳನ್ನದಾನಕೆ ಸರಿಯುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೪)

೧೭೭. ಅನ್ಯ - ಬೆರೆತನ್ಯಜಾತಿಯ ಪರನಾರಿಯ ಕೂಡಿ ಹಿರಿಯರ ಜರೆದು ತಾ ನರಕಕ್ಕೆ ಬೀಳುವ
- ಮಗನಿಂದೆ ಗತಿಯುಂಟೆ (ಬೆ-೧೪೫-೩)
- ಮತಿಗೆಟ್ಟು ಮನಸೋತು ಅನ್ಯಪುರುಷರ ಕೂಡಿ ರತಿಯೊಳಗೆ ಸಿಲುಕುವರು ರಮ್ಯದೊಳಗಿಹರು
- ಕಲಿಯೇರಿ ಬಂತು (ಬೆ-೧೩೦-೬)
- ಪೃಥ್ವಿಯೊಳಗೆ ಕಾಗೆನೆಲೆಯಾದಿಕೇಶವಗೆ ಮರ್ತ್ಯದೊಳನ್ಯದೇವರು ಸರಿಯುಂಟೆ
- ಹೆತ್ತ ತಾಯಿಗಿಂತ ಅತ್ಯಧಿಕ (ಬೆ-೧೨೮-೩)

೧೭೮. ಅನ್ಯ - ತನ್ನ ಕಾಂತನ ಬಿಟ್ಟು ಸ್ತ್ರೀಯರು ಅನ್ಯರಿಗೆ ಮನವೆರಗಿ ಮೋಹಿಪರು
- ಕಲಿ ಹೆಚ್ಚಿ ಬಂದಿತಲ್ಲ (ಸ-೭೮-೩)
- ತನ್ನ ಪ್ರಾಪ್ತಿಯ ಫಲವ ತಾನರಿಯದೆ ಅನ್ಯರಿಗೆ ಆಡುವುದು ಅವಗುಣವು ಮರುಳೆ
- ತನ್ನ ಪ್ರಾಪ್ತಿಯ ಫಲವ (ಬೆ-೧೧೨-ಪ)

೧೭೯. ಅನ್ಯಾಯ - ನಾಡಿನೊಳಗನ್ಯಾಯವ ಮಾಡುವನ ಸಂಗ
- ಸಜ್ಜನರ ಸಂಗದೊಳಗಿರಿಸೆನ್ನ (ಸ-೨೪೧-೧)
- ನ್ಯಾಯವಾದರೆ ದುಡುಕು ನಿನ್ನದೊ ಮತ್ತ ನ್ಯಾಯವಾದರೆ ಪೇಳುವರಾರು
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೫)
- ಬಿನ್ನಣ ಮಾತುಗಳು ಮತ್ತು ಘನ್ನ ಮತ್ಸರ ಕ್ರೋಧಗಳು ಅನ್ಯಾಯದಿಂದಲಿ ಅರ್ಥವ ಗಳಿಸುವರು
- ಕಲಿ ಹೆಚ್ಚಿ ಬಂದಿತಲ್ಲ (ಸ-೭೮-೩)

೧೮೦. ಅನ್ವಯ - ಆಗಮದ ಅನ್ವಯವನರಿಯ ದವನ ಸಂಗ
- ಸಜ್ಜನರ ಸಂಗದೊಳಗಿರಿಸೆನ್ನ (ಸ-೨೪೧-೩)

೧೮೧. ಅಪಕೀರ್ತಿ - ಇನಿತು ಪರಿಯಲಿ ನಾನು ಹಲುಬಿದೊಡೆ ನೀನು ಸುಮ್ಮನಿದ್ದೊಡೆ ಬಹುದು ಅಪಕೀರ್ತಿಯು
- ಎಂತಹುದೊ ನಿನ್ನಯ ಭಕುತಿ (ಸ-೪೧-೫)

- ನಿನಗಲ್ಲದಪಕೀರ್ತಿ ಎನಗೇನೋ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೨)
- ಕಂಡು ಬಿಡಿಸಿಕೊಂಬರಾರೊ ಕೀರ್ತಿಯಪ ಕೀರ್ತಿಯೆರಡೆ
- ಏನು ಬರುವುದೋ ಸಂಗಡ (ಬೆ-೧೩೭-೧)
- ಬಂದಿದೆ ದೂರು ಬರಿದೆ ಪಾಂಡವರಿಗೆ ಕಾದಿಕೊಂದರು ಕೌರವರನೆಂಬಪಕೀರ್ತಿ
- ಬಂದಿದೆ ದೂರು ಬರಿದೆ (ಬೆ-೮೬-ಪ)

೧೮೨. **ಅಪರರಾತ್ರಿ** - ಕಡೆಗೆ ಅಪರರಾತ್ರಿಯಲ್ಲಿ ತಿಂದು ಒರಗುವೆ
- ಸಾಕು ಸಾಕು ಮನುಜ ಸೇವೆಯು (ಬೆ-೪೨-೧)

೧೮೩. **ಅಪರಾಧ** - ಮೋಸದಿಂದಾತ್ಮಘಾತುಕನಾಗಿ ಅಪರಾಧವೇ ಸೊಂದು ಮಾಡಿದೆನಯ್ಯ ಶ್ರೀರಂಗ
- ಕಷ್ಟ ತನುವಿನಲಿ ಹುಟ್ಟಿ ತೊಳಲುವಂಥ (ಸ-೭೯-೪)
- ಅಪರಾಧದ ಕೋಟಿ ತ್ಯಜಿಸಬೇಕಾದರೆ ಶಿವ ಶಿವ ಎನ್ನಿರೊ
- ಶಿವ ಶಿವ ಶಿವ ಎನ್ನಿರೊ (ಬೆ-೩_೩)

೧೮೪. **ಅಪವಾದ** - ನಿಂದಾಪವಾದ ಘಟಿಸುವುದೈಸೆ ಇದರಿಂದ ಮುಂದೆ ಮುಕ್ತಿಯು ನಿಮಗೆ ಸಾಧ್ಯವಹುದೆ
- ಗೋವಿಂದ ಗೋವಿಂದ ಎನ್ನಲರಿಯದೆ (ಬೆ-೧೬-೭)
- ಉತ್ತಮ ಗರತಿಗೆ ಅಪವಾದ ಅವಿವೇಕಿಗಳು ಎತ್ತ ನೋಡಲು ಹೆಚ್ಚಿ ಹೆದರಿಸಿತು ಉನ್ಮತ್ತತನದಲಿ
- ಕಲಿ ಹೆಚ್ಚಿ ಬಂದಿತಲ್ಲ (ಸ-೭೮-೧)

೧೮೫. **ಅಪಾರ** - ಸಾರಸ ಹೃದಯದಿ ಕೇರಿ ಕೇರಿಯಲಿ ಶೃಂಗಾರದಿ ಮೆರೆವ ಅಪಾರ ದಯಾನಿಧಿ
- ಬಾರೊ ಭಾಗ್ಯದ ನಿಧಿಯೆ (ಸ-೧೮೨-ಅ)

೧೮೬. **ಅಪಾರ್ಥ** - ಭೋಗಿಸದೆ ಇಹಪರಕೆ ಗಳಿಸಿದರ್ಥ ಅಪಾರ್ಥ
- ಎನ್ನ ನುಡಿ ಪುಸಿಯಲ್ಲ (ಸ-೪೭-೩)

೧೮೭. **ಅಪ್ಪ** - ಅಪ್ಪ ಜಯದರಸನ ಕೂಡೆ ಜನಿಸಿದಳ ಕಪ್ಪುವರ್ಣದ ಮೈಯಳ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೨)
- ಅಪ್ಪನ ಮಿತ್ರನ ಮಗನೆಂಬ ಬೊಮ್ಮನ ಬೊಪ್ಪನ ತೋರೆನಗೆ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೨)

೧೮೮. **ಅಪ್ಪಣೆ** - ತಾಯಿಯಪ್ಪಣೆಗೊಂಡು ಸೇವೆಗೆ ರಘುಪತಿ ರಾಯನಲ್ಲಿ ನಿಂದು
- ಎಷ್ಟು ಪೊಗಳಲಿ ನಾನು (ಸ-೫೩-೧)

೧೮೯. **ಅಪ್ಪರೂಪ** (ಅಪರೂಪ) - ಅಪ್ಪರೂಪವಾದ ಕಜ್ಜಾಯ ರಾಶಿಗಳ ಭಪ್ಪನ್ನ ದೇಶಕೆ ಮಾರುವ ಶೆಟ್ಟಿ
- ಬಂದೆವಯ್ಯ ಗೋವಿಂದ ಶೆಟ್ಟಿ (ಬೆ-೧೫೧-೧)

೧೯೦. **ಅಪ್ಪಳಿಸು** - ಉರದೊಳಪ್ಪಳಿಸಿ ಅರಿ ಶಿರವ ಸರಸರ ಸೀಳಿ
- ಕಂಡೆ ನಾ ತಂಡ ತಂಡದ ಹಿಂಡು ದೈವ (ಬೆ-೮೪-೨)
- ಅಗಜೆಯ ಅರಸನ ನಗವ ನೆಗಹಿದನ ಬಗೆಯಿಂದಪ್ಪಳಿಸಿದನ
- ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೧)

೧೯೧. **ಅಪ್ಪಾಲು** (ಒಂದು ಸಿಹಿ ತಿನಿಸು) - ಅಪ್ಪಾಲು ಅತಿರಸ ತುಪ್ಪ ಕಜ್ಜಾಯವು ಒಪ್ಪುವ ಯಾಲಕ್ಕಿ ಶುಂಠಿ ಮೆಣಸು
- ಬಂದೆವಯ್ಯ ಗೋವಿಂದಶೆಟ್ಟಿ (ಬೆ-೧೫೧-೧)

೧೯೨. **ಅಪ್ಪಿಕೊಳ್ಳು** - ಸ್ವರ್ಣಪಂಕದೊಳು ಶಿವನಪ್ಪಿಕೊಂಡನ ನಾರಾಯಣ ಎನ್ನಿರೊ
- ನಾರಾಯಣ ಎನ್ನಿ ನಾರದವರದನ (ಬೆ-೭೬-೩)
- ಮಿಸುಕದಂತೆ ಬಂದು ಸೆಳೆದಪ್ಪಿಕೊಂಡು ಕಕ್ಕಸ ಕುಚಗಳ ಪಿಡಿದ
- ನೆರೆದು ಗೋಪಿಯರೆಲ್ಲರು (ಬೆ-೧೦೩-೩)

೧೯೩. **ಅಪ್ಪು** - ಬಂದು ಬೇಗದಿ ಬಿಗಿದಪ್ಪ

ದಿರಲು ಆ ಕಂದನ ತಪ್ಪೋ ಮಾತೆಯ ತಪ್ಪೋ ಪರಮಾತ್ಮ
– ನನ್ನಿಂದ ನಾನೇ ಜನಿಸಿ ಬಂದೆನೆ (ಬೆ–೫೪–೩)

೧೯೪. **ಅಪ್ರಮೇಯ** (ಭಗವಂತ) – ಹರಿ ಆದಿಕೇಶವ ಗುರು ಅಪ್ರಮೇಯ ಸಿರಿಧರ ಶೇಷಗಿರಿ ವರ ತಿಮ್ಮರಾಯ
– ಲಾಲಿ ಪಾವನ ಚರಣ ಲಾಲಿ ಅಘಹರಣ (ಸ–೨೨೯–೫)
– ಕಲ್ಪನಾಕಥೆಗಳಲಿ ಕಳೆಯಪಡೆಯುವರು ಸಂಕಲ್ಪವದು ಎಂತುಟೋ ಸಿರಿ ಅಪ್ರಮೇಯ
– ಕಲಿಯೇರಿ ಬಂತು (ಬೆ–೧೩೦–೫)

೧೯೫. **ಅಪ್ಸರ** – ಸುರರು ಅಂಬರದಿ ಸಂದಣಿಸಿರೆ ಅಪ್ಸರ ಸ್ತ್ರೀಯರು ಮೈಮರೆದಿರೆ
– ಯಾದವರಾಯ ಬೃಂದಾವನದೊಳು (ಸ–೨೨೦–೧)

೧೯೬. **ಅಬಲೆ** – ಮೂರುಪುರದಬಲೆಯರ ವ್ರತಗಳನೆ ಕೆಡಿಸಲಿಕೆ ಬೇರೊಂದು ಅಶ್ವತ್ಥ ವೃಕ್ಷವಾಗಿ
– ನೋಡಯ್ಯ ನಿನ್ನ ದಾಸರ (ಬೆ–೮೫–೯)

೧೯೭. **ಅಬ್ಜ** (ಕಮಲ) – ಕೇಶವ ನಾರಾಯಣ ಮಾಧವ ಗೋವಿಂದ ಭವನಾಶ ಭಕ್ತರ ಹೃದಯಕಮಲಾಬ್ಜಮಣಿ
– ಅಭ್ಯಾಸವನು ಮಾಡಬೇಕು (ಬೆ–೩೮–೧)

೧೯೮. **ಅಬ್ಧಿ** – ಸೂತಕಾಬ್ಧಿಯಲಿ ನವಮಾಸ ತುಂಬಿರೆ ತನ್ನ ಮಾತೆಯುದರದಿ ಬಂದು ಬೆರಸಿ ಬೆಳೆದು
– ತಾನಾರು ದೇಹವಾರು (ಬೆ–೧೪–೨)
– ಆಶಾಕ್ಲೇಶ ದೋಷವೆಂಬ ಅಬ್ಧಿಯೊಳು ಮುಳುಗಿ ಯಮನ
– ದಾಸನಾಗೋ ಭವಪಾಶ ನೀಗೋ (ಬೆ–೨೦–೮)
– ದೇವಕಿ ಕುವರ ನಗ್ನನು ಹಯವನೇರಿದ ವಿವಿಧದಬ್ಧಿಯೊಳಾಡಿ ಗಿರಿಧರ
– ಇಂದು ನೀ ಕರೆದುತಾರೆ (ಬೆ–೯೨–೨)
– ಅಬ್ಧಿಯೊಳಗೆ ಬಿದ್ದು ನಾನು ಒದ್ದುಕೊಂಬೆನಯ್ಯ ಭವದಿ
– ಈಶ ನಿನ್ನ ಚರಣ ಭಜನೆ (ಬೆ–೬೫–೧೦)

೧೯೯. **ಅಬ್ಧಿಶಯನ** (ವಿಷ್ಣು) – ನಂದನ ಕಂದ ಮುಕುಂದಾಬ್ಧಿಶಯನನ ಗೋವಿಂದ ಎನ್ನಿರೋ
– ಮಂದರಧರ ಪಾವನ ಇಂದಿರಾರಮಣ (ಸ–೨೦೦–೮)

೨೦೦. **ಅಭದ್ರ** – ಒಂದೊಂದಭದ್ರ ನುಡಿ ಒಳಗೊಳಗೆ ಹುಟ್ಟಿದುವು ಸಂದೇಹವೇಕೆ ಸಂಸಾರಿಗಳಿಗೆ
– ಮಾವನ ಮನೆಯೊಳಗೆ (ಬೆ–೧೪೬–೪)

೨೦೧. **ಅಭಯ** – ಪರಿಪರಿಯಲಿ ದೇವ ಪರಮಭಕ್ತರ ಕಾವ ಸುರರಿಗಭಯವಿತ್ತನ
– ತೋರೆ ಬೇಗನೆ ಸಖಿ (ಬೆ–೯೪–೩)
– ಹರಿಯ ಸುತನಿಗೆ ಅಭಯವನಿತ್ತೆ ಹರಿಯ ಮಗನಾ ಕೊಂದೆ
– ಭವಭಯವಿನಾಶ ಭೋ (ಬೆ–೪೧–೧)
– ಬೆದರಬೇಡೆನುತ ಅಭಯವನಿತ್ತು ಮುದದಿಂದ ಸುಧೆಯೊಳಗೆ ಬಂದು ಜನಿಸಿ
– ನೋಡಯ್ಯ ನಿನ್ನ ದಾಸರ (ಬೆ–೮೫–೧೦)

೨೦೨. **ಅಭವ** (ಶಿವ) – ಗೀರ್ವಾಣಪತಿ ಅಭವ ಕಮಲಭವರ್ಮೈದಿಹರು ಸರ್ವೇಶನೊಲಿದು ಪ್ಪವಡಿಸು ಹರಿಯೆ
– ಪೂಸರನ ಜನಕನೇ (ಬೆ–೧೬೮–೧)

೨೦೩. **ಅಭಿಮನ್ಯು** – ಕುಸುಮಬಾಣನ ಪಡೆದ ದೇವ ತಾನೆಲ್ಲಿ ಶಿಶುವೆನಿಪ ಅಭಿಮನ್ಯುವೆಲ್ಲಿ
– ಇರಬಂದುದಿಲ್ಲ ಸಂಸಾರ (ಬೆ–೧೧೩–೨)

೨೦೪. **ಅಭಿಮಾನ** – ದ್ರುಪದನ ಮಗಳ ಅಭಿಮಾನ ರಕ್ಷಕನಾರು
– ಆತನ ಪಾಡುವೆ ಅನವರತ (ಬೆ–೭೦–೩)
– ಅನಾಥಳನು ದೇವ ಅಭಿಮಾನ ಕಾಯೊ
– ವಾಸುದೇವಾಯ ನಮೋ (ಬೆ–೯೦–೨)
– ನೀನಾವ ಬಾಂಧವನೊ ನಿಖಿಳ ಯಾದವರೊಳಗೆ ಮಾನಭಿಮಾನ ಇನಿತಿಲ್ಲ ನಿನ್ನೊಳಗೆ
– ನೀನಾವ ಬಾಂಧವನೊ (ಬೆ–೭೮–೫)
– ಮಂಗಳಂ ತರಳೆಯಭಿಮಾನವನು ಕಾಯ್ದವನೆ
– ವಾಸುದೇವಾಯ ನಮೋ (ಬೆ–೯೦–೧೫)
– ಇಂದೆನ್ನ ಮಾನ ಅಭಿಮಾನವನು ತಂದೆಯೆ ಮುಕುಂದ ನಿನಗೊಪ್ಪಿಸಿದೆನೊ
– ವಾಸುದೇವಾಯ ನಮೋ (ಬೆ–೯೦–೮)

- ಅತ್ತೆಮನೆ ಸೇರುವಗೆ ಅಭಿಮಾನವುಂಟೆ ಬತ್ತಲೆ ತಿರುಗುವಗೆ ಭಯವು ಇನ್ನುಂಟೆ
- ಹೆತ್ತತಾಯಿಗಿಂತ ಅತ್ಯಧಿಕ (ಬೆ-೧೨೮-೨)
- ಮಾನಾಭಿಮಾನಗಳ ಹಿಡಿಯುವನೆ ಯೋಗಿ
- ಸಹಜವಿದು ಈ ನುಡಿಯು (ಬೆ-೧೪೯-೨)
- ಮಾನಿನಿ ಮನಸದು ನಿಧಾನವಿರದಿರೆ ಮಾನಾಭಿಮಾನಗಳುಳಿದೀತೆ
- ಕೇಶವನೊಲುಮೆಯು ಆಗುವ ತನಕ (ಸ-೮೯-೨)

೨೦೫. **ಅಭಿಮಾನಿ** - ಭಾವೆಯ ತಂದ ಮನೆಯಲಿ ಜೀವಿಪುದಕಿಂತ ಸಾವುದೇ ಲೇಸು ಅಭಿಮಾನಿಗಳಿಗೆ
- ಮಾವನ ಮನೆಯೊಳಗೆ (ಬೆ-೧೪೬-೧)
- ಈ ಪರಿಯಲುಂಬಂಥ ಅಳಿಯ ಭೋಜನದಿಂದ ಗೋಪಾಳ ಲೇಸು ಅಭಿಮಾನಿಗಳಿಗೆ
- ಮಾವನ ಮನೆಯೊಳಗೆ (ಬೆ-೧೪೬-೫)

೨೦೬. **ಅಭಿವೃದ್ಧಿ** - ಇದ್ದೀಯಾ ಶ್ರೀಹರಿ ನೀನು ವೃದ್ಧಿಸಿದ್ಧಿಯ ನಡುವೆ ಪದುಮನಾಭನು ಅಭಿವೃದ್ಧಿಯಾಗಲು ತಡವೇನು
- ಇದ್ದೀಯಾ ಶ್ರೀ ಹರಿ ನೀನೊಲಿದು ಬಂದಿದ್ದೀಯಾ (ಸ-೩೨-೧)

೨೦೭. **ಅಭೇದ** - ಹರಿಹರ ಅಭೇದಗೈದವಗೆ ದಂತಚ್ಯುತವು
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೧)

೨೦೮. **ಅಭ್ರ** - ಅಭ್ರದಲಿ ಚೀರ್ವ ಭ್ರಮರಾಳಿ ಎರಗೆ
- ಪೂಸರನ ಜನಕನೇ (ಬೆ-೧೬೮-೧)

೨೦೯. **ಅಮರ** - ನಳಿನೋದ್ಭವನಯ್ಯ ಅಮರ ಚೆನ್ನಿಗರಾಯ
- ಯಾದವಗಿರಿವಾಸನಹುದೋ (ಸ-೨೧೯-೧)
- ಸಿಂಧುಮಥನವ ಮಾಡೆ ಅಮರರೆಲ್ಲರು ಮಂದರಗಿರಿ ನೀರೊಳು ಮುಳುಗಲು
- ತಾಳಲ್ಲಲ್ಲಲ್ಲ್ಯೋ ಮಾಸಾಳಲ್ಲಲ್ಲಲ್ಲ್ಯೋ (ಸ-೧೧೦-೨)
- ಅಮರ ದೈತ್ಯರು ಕೂಡಿ ಅಂಬುಧಿಯ ಕಡೆಯಲಿಕೆ ಕ್ರಮದಿ ಮಂದರಕೆ ಕಟ್ಟಿದ ಶೇಷನ
- ನೋಡಯ್ಯ ನಿನ್ನ ದಾಸರ (ಬೆ-೮೫-೨)
- ಕಾಗಿನೆಲೆಯಾದಿಕೇಶವ ರಾಯನಮರ ಸಂಯೋಗಿ ಒಲಿದುಪ್ಪವಡಿಸು ಹರಿಯೆ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೭)
- ವಾಸವಮರಾಳಿ ಪರಮೇಷ್ಠಿವಂದಿತ ವೆಂಕಟೇಶನೊಲಿದುಪ್ಪವಡಿಸಯ್ಯ ಹರಿಯೆ
- ಪೂಸರನ ಜನಕನೇ (ಬೆ-೧೬೮-೫)
- ರಮಣಿ ಕೇಳೆಲೆ ಮೋಹನ ಶುಭಕಾಯನ ಅಮರವಂದಿತ ರವಿಶತಕೋಟಿತೇಜನ
- ರಮಣಿ ಕೇಳೆಲೆ ಮೋಹನ (ಬೆ-೯೬-೫)
- ಅಮರರಿಗೊಲಿದಮೃತವನಿತ್ತೆ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೧)
- ಅಮರರಿಗೊದಗದ ಯಾಗ ಆಡಿನ ಮೇಲಣ ರೋಗ
- ಅಹುದಾದಡಹುದೆನ್ನಿ (ಬೆ-೧೩೨-೫)

೨೧೦. **ಅಮರಲೋಕ** (ಸ್ವರ್ಗ) - ನಾಗಿಣಿಯರ ಮರಲೋಕದ ನರ್ತಕಿಯರು ಬಾಗಿಲೊಳು ಮಂಗಳೋದಕವಿಡಿದು
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೭)

೨೧೧. **ಅಮರವೈರಿ** (ರಾಕ್ಷಸ) - ಅಮರ ವೈರಿಯ ಕರುಳ ಕಿತ್ತಿ ಕಡಿದಾ ಹತಿಯೊ ಕ್ಷಮೆಯನಳೆದಾ ಪಾದಕಮಲನೊಂದುವೊ ರಂಗ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೧)

೨೧೨. **ಅಮರೇಂದ್ರ** (ಇಂದ್ರ) - ಯಕ್ಷ ಗಂಧರ್ವ ಅಮರೇಂದ್ರ ಮುನಿವಂದಿತನೆ
- ವಾಸುದೇವಾಯ ನಮೋ (ಬೆ-೯೦-೭)

೨೧೩. **ಅಮಳ** - ಆತ ತನ್ನಮಳ ಹಯವನೇರಿಕೊಂಡು ಪ್ರಖ್ಯಾತ ದುಂದುಭಿಯ ರಭಸದೊಡನೆ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೪)

೨೧೪. **ಅಮಿತ** - ಶಶಿಧರಾನ್ವಯ ದೂತ ಸೌಮಿತ್ರಿಯ ವರೂಥ ಅಸಮಾಸ್ತ್ರಧೃತವೇದ ಅಮಿತ ಪ್ರಖ್ಯಾತ
- ಕದರಮಂಡಲಗಿಯ ಕರುಣಿ ಹನುಮರಾಯ (ಸ-೭೫-೨)

- ಮಮಕಾರ ತತ್ತ್ವದಲಿ ಮತ್ತೊಂದು ರೂಪಾಗಿ ಅಮಿತಗುಣಮೂರ್ತಿ ನೀನಂದು ಬೇರೆ
- ನೋಡಯ್ಯ ನಿನ್ನ ದಾಸರ (ಬೆ-೮೫-೨)

೨೧೫. **ಅಮಿತವಾಹನ** (ಕಲ್ಕಿ?) - ಅಮಿತ ವಾಹನ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೧)

೨೧೬. **ಅಮೃತ** - ಆತ್ಮವೆಂಬುದರೊಳಗೆ ಅಮೃತ ಚಿಲುಮೆಯ ತೆಗೆದು ನೀತಿ ಮಾರ್ಗ ವೆನ್ನುವ ಕೊಡನ ಪಿಡಿದು
- ನಿಜವರಿತು ಅಂಗವನು ಪೂಜೆ ಮಾಡುವರು (ಸ-೧೪೨-೧)
- ಕಿಂಚಿತ್ತು ಹರಿಯ ನಾಮಾಮೃತ ನೆನೆಯಲು ಅಂಚಕೆಳೆದೊಯ್ದವರು ವಿಷ್ಣುದೂತರಲ್ಲವೆ
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೨)
- ಹರಿವಾಣದೊಳಗಮೃತಾನ್ನವು ಇರುತಿರೆ ತಿರಿದ ಕೂಳನು ತಿನ್ನಲೇತಕಯ್ಯ
- ನಾರಾಯಣ ನಿನ್ನ ನಾಮವು (ಬೆ-೫೨-೨)
- ಸಿರಿ ಕಾಗಿನೆಲೆಯಾದಿಕೇಶವರಾಯನು ಸುರರಿಗಮೃತವನು ಎರೆದನೆನುತ
- ಅರಸಿನಂತೆ ಬಂಟನೂ (ಬೆ-೫-೩)
- ಅಮರರಿಗೊಲಿದಮೃತವನಿತ್ತ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೧)
- ನಾರಾಯಣ ಅಚ್ಯುತಾನಂತಾದಿಕೇಶವನ ಸಾರಾಮೃತವನುಂಡು ಸುಖಿಸೊ ಲಂಡ ಜೀವವೆ
- ದಾಸನಾಗೋ ಭವಪಾಶ ನೀಗೋ (ಬೆ-೨೦-೫)
- ಸ್ವಾದು ಕಲ್ಪಿತವಾದ ಭಕ್ಷ್ಯ ಭೋಜ್ಯಗಳನು ಆದರದಿಂದಮೃತವನುಣಲು ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೩)
- ಕಾಲಿಲ್ಲದೆ ಆಡಿದ ವೇದ ತಂದಿತ್ತ ಕಾಲಿಲ್ಲದನ ಪೊತ್ತ ಅಮೃತವನಿತ್ತ
- ಇಂದು ನೀ ಕರೆದು ತಾರೆ (ಬೆ-೯೨-೧)
- ಅನಿಮಿಷರಿಗಮೃತವನ್ನೆರೆದವನ ತೃಷೆಯ ನೀರಿನ್ನೊಳೆಂತು ಸಂತವಿಡಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೩)

೨೧೭. **ಅಮೃತಮಥನ** - ಜತನದೊಳಮೃತ ಮಥನದಿಯಂದು ಪರ್ವತವನುದ್ಧರಿಸಿದೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೨)

೨೧೮. **ಅಮ್ಮ** - ಅಂಗಜಪಿತ ನೆಲೆಯಾದಿ ಕೇಶವ ಅಂತರಂಗದೊಳಿರುವ ಮಾಸಾಳಮ್ಮ
- ತಾಳಲ್ಲಲ್ಲಲ್ಲಯ್ಯೊ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೧೧)
- ಅಮ್ಮನ ನುಡಿ ಕೇಳದ ಹನುಮಂತ ಕಟ್ಟ
- ನಾ ನಿಮ್ಮ ದಾಸರ ದಾಸ (ಸ-೧೩೪-೪)
- ನಮ್ಮಮ್ಮ ಶಾರದೆ ಉಮಾಮಹೇಶ್ವರಿ ನಿಮ್ಮೊಳಗಿಹನಾರಮ್ಮಾ
- ನಮ್ಮಮ್ಮ ಶಾರದೆ (ಬೆ-೧-ಪ)
- ಹೇಳುವೆ ಕೇಳೆ ಅಮ್ಮ ಇವಳು ಬೇತಾಳ ನಂತಿರುತಿಹಳು
- ನೆರೆದು ಗೋಪಿಯರೆಲ್ಲರು (ಬೆ-೧೦೩-೪)
- ನಿನಗಿಂತ ಕುಂದೇನೊ ನಮ್ಮಮ್ಮ ಜಯಲಕ್ಷ್ಮಿ
- ನಿನಗಿಂತ ಕುಂದೇನೊ (ಬೆ-೮೭-ಪ)
- ರಾಶಿ ವಿದ್ಯೆಯ ಬಲ್ಲ ರಮಣೀ ಹಂಬಲ ನೊಲ್ಲ ಭಾಷಿಗನಿವನಾರಮ್ಮ
- ನಮ್ಮಮ್ಮ ಶಾರದೆ (ಬೆ-೧-೩)
- ಚಂದದಿ ಕೂರ್ಮ ರೂಪಿನಿಂದೆತ್ತಿದ ಗೋವಿಂದನೆಂಬುವ ಮಾಸಾಳಮ್ಮ
- ತಾಳಲ್ಲಲ್ಲಲ್ಲಯ್ಯೊ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೨)
- ರೋಷದಿ ದೈತ್ಯನ ಕರುಳ ಕಿತ್ತ ನರಕೇಸರಿ ರೂಪಿನ ಮಾಸಾಳಮ್ಮ
- ತಾಳಲ್ಲಲ್ಲಲ್ಲಯ್ಯೊ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೪)
- ನೇಮಿಸಿ ಎರಡೇ ಹೆಜ್ಜೆಯೊಳಳಕೊಂಡ ವಾಮನ ರೂಪಿನ ಮಾಸಾಳಮ್ಮ
- ತಾಳಲ್ಲಲ್ಲಲ್ಲಯ್ಯೊ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೫)
- ತಾಮಸವಿಲ್ಲದೆ ಕ್ಷತ್ರಿಯರ ಸಂಹರಿಸಿದ ರಾಮ ಭಾರ್ಗವನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಯ್ಯೊ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೬)

– ಘನ ಕೋಪದಿ ದಶಶಿರನ ಕತ್ತರಿಸಿದ ಇನಕುಲ ರಾಮನೆಂಬ ಮಾಸಾಳಮ್ಮ
– ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ–೧೧೦–೭)
– ಮಾವನ ಕೊಂದು ಮತ್ತೈವರ ಸಲಹಿದ ದೇವ ಕೃಷ್ಣನೆಂಬ ಮಾಸಾಳಮ್ಮ
– ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ–೧೧೦–೮)
– ನುತ ಬೌದ್ಧ ರೂಪದಿ ಬಹು ಭಂಗಪಡಿಸಿದ ರತಿಪಿತನೆಂಬ ಮಾಸಾಳಮ್ಮ
– ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ–೧೧೦–೯)
– ಮಚ್ಛ್ಯ ರೂಪದಿಂದ ಪೋಗಿ ಅವನ ಕೊಂದ ಅಚ್ಯುತರಾಯನೆಂಬ ಮಾಸಾಳಮ್ಮ
– ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ–೧೧೦–೧
– ದೂಡಿ ಧ್ವಂಸವ ಮಾಡಿ ರೂಢಿಯ ತಂದ ಕಾಡು ವರಾಹ ರೂಪಿ ಮಾಸಾಳಮ್ಮ
– ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ–೧೧೦–೩)
– ಅಲ್ಲಲ್ಲೆ ಸೊಲ್ಲಡಗಿಸಿ ವಲ್ಲಭನೆನಿಸಿದ ಬಲ್ಲಿದ ಕಲ್ಕಿಯೆಂಬ ಮಾಸಾಳಮ್ಮ
– ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ–೧೧೦–೧೦)
– ಉತ್ತರದಿಶೆಯೊಳು ಬೆಳುದಿಂಗಳಾಯಿತಮ್ಮ
– ಎಂದೆಂದು ಇಂಥ ಚೋದ್ಯ (ಬೆ–೧೬೬–೨)
– ಭಾಗವತರ ಬೆಡಗಿದು ಬೆಳುದಿಂಗಳಾಯಿ ತಮ್ಮ
– ಎಂದೆಂದು ಇಂಥ ಚೋದ್ಯ (ಬೆ–೧೬೬–೩)
– ಮೋರೆ ಕಪ್ಪಿನ ಭಾವ ಮೊರದಗಲದ ಕಿವಿ ಕೋರೆದಾಡೆಯನಾರಮ್ಮ
– ನಮ್ಮಮ್ಮ ಶಾರದೆ (ಬೆ–೧–೧)
– ಉಟ್ಟ ಪಟ್ಟೆಯ ಬಿಗಿದುಟ್ಟ ಚೆಲ್ಲಣದ ದಿಟ್ಟ ತಾನಿವನಾರಮ್ಮ
– ನಮ್ಮಮ್ಮ ಶಾರದೆ (ಬೆ–೧–೨)

೨೧೯. ಅಮ್ಮಮ್ಮ – ಕೈಯ ತೋರಿದ ಬಗೆಯ ಅಮ್ಮಮ್ಮ ಯಾದವಗಿರಿ ಕಲ್ಯಾಣಿ ನೀನು
– ಕೈಯ ತೋರಿದ ಬಗೆಯ (ಸ–೯೧–೪)
– ಗಂಧ ಕಸ್ತೂರಿ ಬೊಟ್ಟು ಗಮಕದಿಂದಲಿ ಇಟ್ಟು ಗೊಂದಲ ಗಡಿಬಿಡಿ ಸುರಲೋಕ ಅಮ್ಮಮ್ಮ
– ಆನೆ ಬರುತಾದೆ ನೋಡಮ್ಮ (ಸ–೧೫–೩)

೨೨೦. ಅಮ್ಮಯ/ಅಮ್ಮಯ್ಯ – ಅಮ್ಮಯ್ಯ ಇಲ್ಲ ಕಾಣೆ ಇವಳು ಎನ್ನ ಸುಮ್ಮನೆ ದೂರುವಳೆ
– ನೆರೆದು ಗೋಪಿಯರೆಲ್ಲರು (ಬೆ–೧೦೩–೨)
– ಹಸುಮಗು ನೋಡಿದರೆ ಅಮ್ಮಯ್ಯ ನಾ ಮೊಸರನು ಕಡೆಯುತಿದ್ದೆ
– ನೆರೆದು ಗೋಪಿಯರೆಲ್ಲರು (ಬೆ–೧೦೩–೩)

೨೨೧. ಅಮ್ಮು (ಶಕ್ತನಾಗು) – ಈ ದೇಹ ತಾನು ಸತ್ತ ಗಳಿಗೆ ಮುಟ್ಟಲಮ್ಮರು ಬರಿದೆ ನಾವು ವ್ಯಥೆಗೆ ಸಿಕ್ಕಿದೆವೆಂಬರು ಆತ್ಮ
– ಯಾರಿಗಾರು ಬಹರು ಸಂಗಡ (ಸ–೨೨೧–೨)
– ಮುಟ್ಟಲಮ್ಮರು ಎನ್ನ ಸತಿ ಸುತರು ಬಾಂಧವರು ಅಟ್ಟಿ ಎಳೆಯುತ್ತಿಹರೊ ಕೃಷ್ಣ
– ಪೂರ್ವಜನ್ಮದಲಿ ನಾ ಮಾಡಿದಾ (ಬೆ–೮–೧)

೨೨೨. ಅಯ್ಯ – ಪಂಚಬಾಣನಯ್ಯ ಕಾಯೊ ಎನ್ನವವಗುಣಗಳನೆಣಿಸದೆ
– ಅಹಹ ಮೋಸ ಹೋದೆನಯ್ಯ (ಸ–೯–೪೨)
– ನಳಿನೋದ್ಭವನಯ್ಯ ಅಮರ ಚೆನ್ನಿಗರಾಯ
– ಯಾದವಗಿರಿವಾಸನಹುದೋ (ಸ–೨೧೯–೧)
– ಯಾತರವನೆಂದುಸರಲಿ ಜಗನ್ನಾಥ ಮಾಡಿದ ಒಂದು ನರರೂಪವಯ್ಯ
– ಯಾತರವನೆಂದುಸುರಲಿ (ಸ–೨೧೮–೪)
– ನಿಚ್ಚ ಕಾಗಿನೆಲೆಯಾದಿಕೇಶವನ ಹುಚ್ಚಗೆ ನನಗಿನ್ಯಾತರ ಕುಲವಯ್ಯ
– ಯಾತರವನೆಂದುಸುರಲಿ (ಸ–೨೧೮–೫)
– ಪಕ್ಷಿವಾಹನ ನೀನು ಅಂಜಬೇಡ ಎನುತಲಿ ರಕ್ಷೆ ಇಡುವ ಪುಣ್ಯವನೆಂತು ಪಡೆದಳಯ್ಯ
– ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ–೧೯೫–೪)
– ನರದೇಹ ಹೊತ್ತು ತಿರುಗುವಂಥ ತಿರುಕ ನನಗಿನ್ಯಾತರ ಕುಲವಯ್ಯ
– ಯಾತರವನೆಂದುಸುರಲಿ (ಸ–೨೧೮–೪)

- ಬೆಲ್ಲವು ಕರದೊಳಗಿರುತಿರೆ ಕಾಡಿನ ಕಲ್ಲನು ಕಡಿಯಲಿನ್ನೇಕಯ್ಯ
- ನಾರಾಯಣ ನಿನ್ನ ನಾಮವು (ಬೆ-೫೨-೩)
- ಸುತ್ತ ಕತ್ತಲೆ ಚಿಂತೆ ಮತ್ತೆ ಭಯದ ಭ್ರಾಂತಿ ಚಿತ್ತಜನಯ್ಯ ದೊರಕುವ ಬಗೆಯೆಂತು
- ಹೇಗೆ ನೀ ದಾಸನಾದೆ (ಬೆ-೨೨-೧೭)
- ಹಿರಿಯಣ್ಣನಯ್ಯನ ಮೊಮ್ಮನ ಮಾವನ ತರೆದೊಟ್ಟಿದನ ಹಗೆಯ
- ಹರಿಮುಖಿ ಹರಿವಾಣಿ (ಬೆ-೯೮-೧)
- ಧಾರಿಣಿಯ ಭಾರವನು ತಾಳಲಾರದೆ ದೇವಿ ಶ್ರೀರಾಮ ರಾಮೆಂದು ಶಿರವ ತೂಗುವಳಯ್ಯ
- ಕಲಿಯೇರಿ ಬಂತು (ಬೆ-೧೩೦-೪)
- ದಾಸರ ದಾಸನಯ್ಯ ರಂಗಯ್ಯ ಕರ್ಮಪಾಶ ಗಳ ಮೋಚನೆ ಮಾಡೊ ರಂಗಯ್ಯ
- ಯಾತಕೆ ದಯಮಾಡಲೊಲ್ಲೆ ರಂಗಯ್ಯ (ಸ-೨೧೭-೩)
- ನಡತೆ ಹೀನನಾದರೇನಯ್ಯ ಜಗದೊಡೆಯನ ಭಕುತಿ ಇದ್ದರೆ ಸಾಲದೆ
- ನಡತೆ ಹೀನನಾದರೇನಯ್ಯ (ಸ-೧೨೭-ಪ)
- ನಮಗೆಲ್ಲಿ ಮನೆಗಳಯ್ಯ ನಾರಾಯಣ
- ನಮಗೆಲ್ಲ ಮನೆಗಳಯ್ಯ (ಸ-೧೩೨-ಪ)
- ಕಂಡಿಯೊಳು ಕೈಸನ್ನೆ ಮಾಡದಿರಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೧)
- ಕೊಂಡೆಗಾತಿಯರುಂಟು ದುಡುಕದಿರಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೧)
- ಮೇಳದವರ ಬಿಟ್ಟು ಮೇರೆದಪ್ಪುವರಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೨)
- ದ್ರೋಹಿಗಳ ವಿವರವನು ನಾ ಪೇಳ್ವೆನಯ್ಯ
- ದ್ರೋಹಿಗಳ ವಿವರವನು ನಾ ಪೇಳ್ವೆನಯ್ಯ (ಸ-೧೨೩-ಪ)
- ಬೇಳುವೆಯ ಮಾತಾಡಿ ಗಾಳ ಹಾಕದಿರಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೨)
- ನೋಡುವರು ಜನರೆಲ್ಲ ನಾಚಿಕೆ ಇಲ್ಲವೇನಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೩)
- ಭೇದಿಸಿ ನೋಡುವವರುಂಟು ಬೆಂಬತ್ತಿ ಬಾರದಿರಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೮)
- ಕಂಡ ಕಂಡ ಠಾವಿನಲ್ಲಿ ಕಣ್ಣಿತ್ತಿ ನೋಡದಿರಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೧)
- ಗಂಡನುಳ್ಳವಳ ಜೊತೆ ಭಂಡಾಟವ್ಯಾಕಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೧)
- ಆಳುವ ಅರಸಾಗಿ ನಿನಗಾವ ಬರವಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೨)
- ಕೂಡಿದ ಕನಕ ಆದಿಕೇಶವ ನೀನಹುದಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೩)
- ಕಾಮಿತ ಫಲಗಳ ಕೊಟ್ಟು ನೀ ಸಲಹಯ್ಯ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ
- (ಸ-೧೯೩-೮)
- ಸುಟ್ಟು ಸುಡುಗಾಡಿನಲಿ ಪಿಂಡಗಳನಿಕ್ಕಿ ಬಲು ಕಟ್ಟಳೆಯ ಕಾಣಿಸಿದರಯ್ಯ ಹರಿಯೆ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೧)
- ಸಂಖ್ಯೆಯಿಲ್ಲದಾಭರಣಗಳ ತೊಡಿಸಿ ಯಲಂಕರಿಸುವ ಪುಣ್ಯವೆಂತು ಪಡೆದಳಯ್ಯ
- ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ-೧೯೫-೫)
- ನೆಂಟರಿಷ್ಟರು ನೀನೆ ರಂಗಯ್ಯ ನಿನ್ನ ಬಂಟ ರಿಗೆ ಬಂಟನಯ್ಯ ರಂಗಯ್ಯ
- ಯಾತಕೆ ದಯ ಮಾಡಲೊಲ್ಲೆ ರಂಗಯ್ಯ (ಸ-೨೧೭-೨)
- ಮಿಂಡಿ ಪೆಣ್ಣನು ಸಭೆಯಲ್ಲಿ ಸೀರೆ ಸುಲಿಯಲು ಗಂಡರೈವರು ನೋಡಿ ಏನು ಮಾಡುತಿರ್ದರಯ್ಯ

– ಬಂಧುಗಳದಾರಿಗಾರಿದ್ದರೇನು (ಸ–೧೭೩–೨)
– ಅಡಿಯಿಡು ಮಗನೆ ಮೆಲ್ಲಡಿಯಿಡು ಎನುತಲಿ ನಡೆಗಲಿಸುವ ಪುಣ್ಯವೆಂತು ಪಡೆದಳಯ್ಯ
– ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ–೧೯೫–೩)
– ಆಗಮ ನಿಗಮಗಳರಸಿ ಕಾಣದ ವಸ್ತುವನು ತೂಗಿ ಪಡುವ ಪುಣ್ಯವೆಂತು ಪಡೆದಳಯ್ಯ
– ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ–೧೯೫–೬)
– ನೀಲದುಡುಗೆಯುಟ್ಟ ಬಾಲನೆ ಬಾರೆಂದು ಪಾಲುಣಿಸುವ ಪುಣ್ಯವೆಂತು ಪಡೆದಳಯ್ಯ
– ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ–೧೯೫–೧)
– ಇಷ್ಟರೊಳಗೆ ಒಂದು ವಿವರವರಿಯದಿಂಥ ಭ್ರಷ್ಟಗೆ ನನಗಿನ್ಯಾತರ ಕುಲವಯ್ಯ
– ಯಾತರವನೆಂದುಸುರಲಿ (ಸ–೨೧೮–೧)
– ಇಂಬಿಲ್ಲದೆ ಹೊಲೆಗೊಂಡ ಠಾವಿನಲಿ ಬಂದಂಥ ಡಂಬಕ ನನಗಿನ್ಯಾತರ ಕುಲವಯ್ಯ
– ಯಾತರವನೆಂದುಸುರಲಿ (ಸ–೨೧೮–೩)
– ಬಂದದ್ದು ಬಚ್ಚಲಗುಣಿ ತಿಂದದ್ದು ಮೊಲೆ ಮಾಂಸ ಇಂಥ ಅಂಧಕಗೆ ನನಗಿನ್ಯಾತರ ಕುಲವಯ್ಯ
– ಯಾತರವನೆಂದುಸುರಲಿ (ಸ–೨೧೮–೨)
– ಮೂಲ ವೃಕ್ಷದಲಾರ ಮುಂದೆಯ ದಾನವ ರಿರ್ದಾಲಯ ದಹಿಪನೆಂಬುದಯ್ಯನ
– ಚೆಲ್ವ ಕಂಗಳ ಚೆಲ್ವಕಾರ – (ಸ–೯–೩)
– ಬಾಡದಾದಿಕೇಶವನೆ ಅನಾಥ ಬಂಧುವೆ ಅಚ್ಯುತ ಮುರಾರಿ ಹರಿಯೆಂಬ ಮಾತನಾಡಿಸಿ ಮುಕುತಿಯನೊದಗಿಸಯ್ಯ
– ಅಣುಮತ್ತಾದ ದೇವ (ಬೆ–೭೧–೩)
– ಭರದಿ ಹಾರೈಸುತಿಹರು ಜಲಕ್ರೀಡೆಗೇಳಯ್ಯ ಸ್ಮರನ ಪಿತನೊಲಿದುಪ್ಪವಡಿಸಯ್ಯ ಹರಿಯೆ
– ಪೂಸರನ ಜನಕನೇ (ಬೆ–೧೬೮–೨)
– ಭಾರವು ನಿನ್ನದೊ ದೂರು ನಿನ್ನದೊ ಕೃಷ್ಣ ನಾರಿ ಮಕ್ಕಳು ತನು ಮನ ನಿನ್ನವಯ್ಯ
– ನನ್ನಿಂದ ನಾನೇ ಜನಿಸಿ ಬಂದೆನೆ (ಬೆ–೫೪–೪)
– ಲೋಲಕಮಲನಾಭನಾದರೆ ಆಕೆ ಬಾಲ ಕಮಲಮುಖಿಯಾದಳಯ್ಯ
– ನಿನಗಿಂತ ಕುಂದೇನೊ (ಬೆ–೮೭–೨)
– ಸರ್ವೇಶನೊಲಿದುಪ್ಪವಡಿಸಯ್ಯ ಹರಿಯೆ
– ಪೂಸರನ ಜನಕನೇ (ಬೆ–೧೬೮–೩)
– ದಿಟ್ಟ ಶೇಷನ ನೀ ತುಳಿದರೆ ಆಕೆ ಕಟ್ಟಿ ಬಾಸೆಗೆ ಶೇಷನ ನಿಲಿಸಿಹಳಯ್ಯ
– ನಿನಗಿಂತ ಕುಂದೇನೊ (ಬೆ–೮೭–೩)
– ನವಮೋಹನಾಂಗಿಯರ ರೂಪವ ಕಣ್ಣಿಂದ ಎವೆಯಿಕ್ಕದಲೆ ನೋಡುವ ನೋಟ ನಿನ್ನದಯ್ಯ
– ತನು ನಿನ್ನದು ಜೀವನ ನಿನ್ನದು (ಬೆ–೫೭–೧)
– ನಾರಾಯಣ ನಿನ್ನ ನಾಮವೊಂದಿರುತಿರೆ ಬೇರೊಂದು ನಾಮವಿನ್ನೇತಕಯ್ಯ
– ನಾರಾಯಣ ನಿನ್ನ ನಾಮವು (ಬೆ–೫೨–ಪ)
– ನಕುಲ ಸಹದೇವಕರು ಬಂದರೇಳ್ಕೆ ಭೃತ್ಯ ನಿಕರಕೊಲಿದು ಉಪ್ಪವಡಿಸಯ್ಯ ಹರಿಯೆ
– ಸಿಂಗರದ ಸಿರಿಧರನೆ (ಬೆ–೧೬೭–೨)
– ನೇಮವಿಲ್ಲದ ಹೋಮವೇತಕಯ್ಯ ರಾಮ ನಾಮವಲ್ಲದೆ ಮತ್ತೆ ನಮಗೆ ಬೇರೊಂದೆ
– ನೇಮವಿಲ್ಲದ ಹೋಮವೇತಕಯ್ಯ (ಬೆ–೧೭–ಪ)
– ನೆರಹಿದಾ ಫಣಿಪತಿಯ ಸ್ತೋತ್ರದೂರನ ನಾನು ಸ್ಮರಿಪೆನೆಂತಯ್ಯ ದೇವ ದೇವ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೨)
– ನೆಟ್ಟನ ದಾರಿಯ ಬಟ್ಟೆಯೊಳಿರುತಿರೆ ಬೆಟ್ಟವ ಬಳಸಲಿನ್ನೇಕಯ್ಯ
– ನಾರಾಯಣ ನಿನ್ನ ನಾಮವು (ಬೆ–೫೨–೧)
– ನಿಜವಾದ ಸಿಂಹ ನೀನಾದರೆ ನಿನ್ನ ಭಜಿಸಿ ಸಿಂಹಮಧ್ಯೆಯಾಗಿಪ್ಪಳಯ್ಯ
– ನಿನಗಿಂತ ಕುಂದೇನೊ (ಬೆ–೮೭–೪)
– ಪಶುವಿನ ಮಾಂಸದೊಳುತ್ಪತ್ತಿ ಕ್ಷೀರವ ವಸುಧೆಯೊಳಗೆ ಭೂಸುರರುಣ್ಣರೇನಯ್ಯ
– ಕುಲ ಕುಲ ಕುಲವೆನ್ನುತಿಹರೊ (ಬೆ–೧೨೦–೧)

– ಪರಶು ನೇವಾಳಂಗಳಿರುತಿರೆ ಬೀದಿಯ ಬರಿಗಲ್ಲ ತೊಳೆಯಲಿನ್ನೇಕಯ್ಯ
– ನಾರಾಯಣ ನಿನ್ನ ನಾಮವು (ಬೆ–೫೨–೨)
– ಪಾರುವತಿಪತಿಯಾದ ಕೈಲಾಸದೊಡೆಯನಿಗೆ ಊರ ಹೊರಗಣ ಮಸಣ ಮನೆಯಾಯಿತಯ್ಯ
– ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ–೧೯೯–೪)
– ಪಥ ನಡೆಯದಯ್ಯ ಪರಲೋಕಕ್ಕೈದುವಡೆ
– ಪಥ ನಡೆಯದಯ್ಯ (ಬೆ–೯_ಪ)
– ಬಲ್ಲವರು ನೀವು ಪೇಳಿರಯ್ಯ
– ಬಲ್ಲವರು ನೀವು ಪೇಳರಯ್ಯ (ಬೆ–೧೫೦–ಪ)
– ಬಲ್ಲಿದ ಕಾಗೆನೆಲೆಯಾದಿಕೇಶವನಿರೆ ಚಿಲ್ಲರೆ ದೈವದ ಹಂಬಲೇತಕಯ್ಯ
– ನಾರಾಯಣ ನಿನ್ನ ನಾಮವು (ಬೆ–೫೨–೩)
– ಬೀಜಾಕ್ಷರದ ಕೀರ್ತನೆಗೈಯ್ದು ಇನಕೋಟಿ ತೇಜನೊಲಿದುಪ್ಪವಡಿಸಯ್ಯ ಹರಿಯೆ
– ತಂಗದಿರನನಿಮಿಷ ತಾರಕೆಗಳು (ಬೆ–೧೬೯–೬)
– ಷಡುರಸದನ್ನಕೆ ನಲಿದಾಡುವ ಜಿಹ್ವೆ ಕಡುರುಚಿಗೊಂಡರಾರುಚಿ ನಿನ್ನದಯ್ಯ
– ತನು ನಿನ್ನದು ಜೀವನ ನಿನ್ನದು (ಬೆ–೫೭–೨)
– ವಾಸವಮುರಾಳಿ ಪರಮೇಷ್ಠಿವಂದಿತ ವೆಂಕಟೇಶನೊಲಿದುಪ್ಪವಡಿಸಯ್ಯ ಹರಿಯೆ
– ಪೂಸರನ ಜನಕನೇ (ಬೆ–೧೬೮–ಪ)
– ವನಜಲೋಚನ ನಾನಿನ್ನವನಯ್ಯ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೨)
– ಮುಕುತಿ ದೇಹಿಕ ಸಿಲೀಮುಖನಯ್ಯ ಧ್ರುವ ದೇವ
– ಸಿಂಗರದ ಸಿರಿಧರನೆ (ಬೆ–೧೬೭–೨)
– ಮಂಡುಕನಂದದಿ ಕೆರೆಯ ದಂಡೆಯಲ್ಲಿ ಕುಳಿತುಕೊಂಡು ಮಂಡೆ ಮುಸುಕನಿಟ್ಟು ಮೂಗ ಹಿಡಿವ ಭ್ರಮಿತ ನಾನಯ್ಯ
– ಎಳ್ಳು ಕಾಳನಷ್ಟು ಭಕ್ತಿ (ಬೆ–೧೨–೧)
– ಮತ್ತೆ ಗಂಡನಿಗೆ ಹೆಂಡತಿಯೆ ಗಂಡನು ಆಗಿ ವರ್ತಿಸುವರಯ್ಯ ತಮಗೆದುರಿಲ್ಲವೆಂದು
– ಕಲಿಯೇರಿ ಬಂತು (ಬೆ–೧೩೦–೧)
– ಮದನನಯ್ಯ ನಿನ್ನ ಮಹಿಮೆ ವದನದಲಿಯೆ ಇರುವಂತೆ ಹೃದಯದಲ್ಲಿ ಸದನ ಮಾಡು ಮುದದಿ ಶ್ರೀಧರಾ
– ಈಶ ನಿನ್ನ ಚರಣ ಭಜನೆ (ಬೆ–೬೫–೮)
– ಮಾನವಮೃಗೇಂದ್ರ ರಾಮಚಂದ್ರ ರಕ್ಷಿಸಯ್ಯ
– ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ–೧೧೮–ಪ)
– ಮಾರಪಿತ ಕಾಗೆನೆಲೆಯಾದಿಕೇಶವ ರಾಯ ಕಾರಣಕೆ ಕರ್ತ ನೀ ಕಡೆಹಾಯಿಸಯ್ಯ
– ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ–೧೯೯–೫)
– ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರ ಕೂಡಿ ಆಣಿಮುತ್ತ ಹಿಡಿದು ಹಿಡಿದು ಬಿಡುವ ಭ್ರಮಿತ ನಾನಯ್ಯ
– ಎಳ್ಳು ಕಾಳನಷ್ಟು ಭಕ್ತಿ (ಬೆ–೧೨–೨)
– ವಾರ್ತೆ ಕೀರ್ತಿಯೆಂಬವೆರಡು ಬಂದುವಯ್ಯ ಸತ್ತಮೇಲೆ
– ಡಿಂಬನೊಳು ಪ್ರಾಣವಿರಲು (ಬೆ–೧೧೭–೫)
– ಮೊರೆಯ ಇಡುವೆನಯ್ಯ ನಿನಗೆ ಸೆರೆಯ ಬಿಡಿಸು ಭವದ ಎನಗೆ
– ಈಶ ನಿನ್ನ ಚರಣ ಭಜನೆ (ಬೆ–೬೫–೨೨)
– ಅನರ್ಘ್ಯನೊಲಿದುಪ್ಪವಡಿಸಯ್ಯ ಹರಿಯೆ
– ತಂಗದಿರನನಿಮಿಷ ತಾರಕೆಗಳು (ಬೆ–೧೬೯–೨)
– ಅಬ್ಧಿಯೊಳಗೆ ಬಿದ್ದು ನಾನು ಒದ್ದುಕೊಂಬೆನಯ್ಯ ಭವದಿ
– ಈಶ ನಿನ್ನ ಚರಣ ಭಜನೆ (ಬೆ–೬೫–೧೦)
– ಅಷ್ಟೈಶ್ವರ್ಯದ ಮೃಷ್ಟಾನ್ನವಿರುತಿರೆ ಬಿಟ್ಟ ಕೂಳನು ತಿನ್ನಲೇತಕಯ್ಯ
– ನಾರಾಯಣ ನಿನ್ನ ನಾಮವು (ಬೆ–೫೨–೧)
– ಅಂಭೋಜನಾಭನನು ಭಾವದಲಿ ನೆನೆದರೆ ಇಂಬುಂಟು ವೈಕುಂಠಪುರದೊಳಗೆ ಅಯ್ಯ
– ನೇಮವಿಲ್ಲದ ಹೋಮವೇತಕಯ್ಯ (ಬೆ–೧೭–೨)

- ಅಂಬುಜಜನಯ್ಯನೆ ಬಾರೊ ಆದಿಮೂರುತಿ ರಂಗ
- ಬಾರೊ ನಮ್ಮ ಮನೆತನಕ (ಬೆ-೧೦೬-೩)
- ಜನನಿ ಜನಕ ನೀನೆಯೆಂದು ಎನುವೆನಯ್ಯ ದೀನಬಂಧು
- ಈಶ ನಿನ್ನ ಚರಣ ಭಜನೆ (ಬೆ-೬೫-೧೫)
- ಆನೆಯ ನೋಡಿರಯ್ಯ ನೀವೆಲ್ಲರು ಆನಂದ ಪಡೆಯಿರಯ್ಯ
- ಆನೆಯ ನೋಡಿರಯ್ಯ (ಬೆ-೧೫೬-ಪ)
- ಆನೆಯ ನೋಡಿರಯ್ಯ ನೀವೆಲ್ಲರು ಆನಂದ ಪಡೆಯಿರಯ್ಯ
- ಆನೆಯ ನೋಡಿರಯ್ಯ (ಬೆ-೧೫೬-ಪ)
- ಆರಿಗಾದರು ಪೂರ್ವಕಲ್ಪನೆಯು ತಪ್ಪದು ಬೇರೆ ಬಯಸಿದರೆ ಬರಲರಿಯದಯ್ಯ
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೦೯-)
- ಆರಿಗೆ ಆರಿಲ್ಲವಯ್ಯ ಆಪತ್ತುಕಾಲಕೆ ವಾರಿಜ ನಾಭನ ನೆನೆ ಮನವೆ
- ಆರಿಗೆ ಆರಿಲ್ಲವಯ್ಯ (ಬೆ-೩೧-ಪ)
- ಆತ್ಮನು ಕಾಗೆನೆಲೆಯಾದಿಕೇಶವನೊಲಿದ ಭಕ್ತರಿಗೆ ಕುಲವಾವುದು ಹೇಳಿರಯ್ಯ
- ಕುಲ ಕುಲ ಕುಲವೆನ್ನುತಿಹರೊ (ಬೆ-೧೨೦-೩)
- ಇಳೆಯ ಭಾರವನಿಳುಹಿದನಾರಯ್ಯ
- ಆತನ ಪಾಡುವೆ ಅನವರತ (ಬೆ-೭೦-೨)
- ರಸಪೂರಿತ ಶ್ರುತಿ ಮಸುಳಿಸದಲೆ ತಂದೆ ಬಿಸಜಸಂಭವನಯ್ಯ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೧)
- ರಮೆಯ ಗಂಡನೊಲಿದುಪ್ಪವಡಿಸಯ್ಯ ಹರಿಯೆ
- ಸಿಂಗರದ ಸಿರಿಧರನೆ (ಬೆ-೧೬೭-೩)
- ರುಕುಮಿಣಿಯರಸು ನೀನಿಂದುಪ್ಪವಡಿಸಯ್ಯ ಹರಿಯೆ
- ಪೂಸರನ ಜನಕನೇ (ಬೆ-೧೬೮-೪)
- ಎರವಿನ ತಲೆಯವನಣ್ಣನಯ್ಯನ ಪರಮ ಸಖನ ಸುತನ
- ಹರಿಮುಖ ಹರಿವಾಣಿ (ಬೆ-೯೮-೧)
- ಹನ್ನೆರಡನೆಯ ತಾರೆಯ ಪೆಸರಾಕೆಯ ಕನ್ನೆಯಯ್ಯನ ಮನೆಯ
- ರಾಜವದನೆ ಸುರ ರಾಜನ (ಬೆ-೯೭-೩)
- ಹರಿನಾಮವನು ಪಾಡಿ ಪೊಗಳುವುದ ಕರುಣಿಸಯ್ಯ
- ಅಣುಮತ್ತಾದ ದೇವ (ಬೆ-೭೧-೧)
- ಹರಿವಾಣದೊಳಗಮೃತಾನ್ನವು ಇರುತಿರೆ ತಿರಿದ ಕೂಳನು ತಿನ್ನಲೇತಕಯ್ಯ
- ನಾರಾಯಣ ನಿನ್ನ ನಾಮವು (ಬೆ-೫೨-೨)
- ಹೆಚ್ಚಿನ ಶಂಖವ ಪಿಡಿದರೆ ಆಕೆ ನಿಚ್ಚ ಶಂಖದ ಕಂಠಳಾದಳಯ್ಯ
- ನಿನಗಿಂತ ಕುಂದೇನೊ (ಬೆ-೮೭-೧)
- ಕಲುಬಗಿರಿ ರಂಗನೊಲಿದುಪ್ಪವಡಿಸಯ್ಯ ಹರಿಯೆ
- ಸಿಂಗರದ ಸಿರಿಧರನೆ (ಬೆ-೧೬೭-ಪ)
- ಕಲಿಯೇರಿ ಬಂತು ನಾ ಕಡೆಹಾಯ್ದುವ ದೆಂತಯ್ಯ ಜಲಜನೇತ್ರನ ಕೃಪೆಯ ಪಡೆದವರು ಕೇಳಿ
- ಕಲಿಯೇರಿ ಬಂತು (ಬೆ-೧೩೦-ಪ)
- ಕಷ್ಟ ದಾರಿದ್ರ್ಯವನು ಪರಿಹರಿಸದಿರೆ ದೂರು ಮುಟ್ಟುವುದು ನಿನಗಯ್ಯ ಕೃಷ್ಣ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮-೧)
- ಕಾಳುದಾಸರ ಮನೆಯ ಆಳು ದಾಸ ನಾನಯ್ಯ
- ದಾಸ ದಾಸರ ಮನೆಯ ದಾಸ (ಬೆ-೨೩-೧)
- ಕಾಶಿಯಾವಾಸವನು ಬಯಸಿ ಬಹು ದಿನದಿಂದ ಆಸೆಯೊಳಗಿದ್ದೆನಯ್ಯ ಕೃಷ್ಣ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮-೨)
- ಕಂಸಮರ್ದನನೆ ನೀ ಕಾಯಬೇಕಯ್ಯ ಹರಿ ವಾಸುದೇವನೆ ಮುದ್ದುಕೃಷ್ಣ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮-೨)
- ಕಾವನಯ್ಯನ ಕಳುಹು ರಮಣಿ ಕೋವಿದರು ಪಡೆವ ಬಾಡದಾದಿಕೇಶವನ
- ಕಾವನಯ್ಯನ ಕಳುಹು (ಬೆ-೧೫೩-ಪ)
- ಕುರಿಕೋಣ ನೈವೇದ್ಯ ಧೂಪ ದೀಪಗಳಿಂದ ಪರಮ ಭಕ್ತಿಯ ಮಾಡಿ ಪೂಜಿಸುವರಯ್ಯ
- ಕಲಿಯೇರಿ ಬಂತು (ಬೆ-೧೩೦-೧೦)

– ಕಾರುಣ್ಯನಿಧಿಯೆನ್ನ ಕಾಯಬೇಕಯ್ಯ ಹರಿ ವಾರಿಜನಾಭನೇ ಮುದ್ದು ಕೃಷ್ಣ
– ಪೂರ್ವಜನ್ಮದಲಿ ನಾ ಮಾಡಿದಾ (ಬೆ–೮–೩)
– ಕತ್ತಲೆಯೊಳು ಕಾದಿ ಅಳಿದಯ್ಯನ ಶಿರವ ಕತ್ತರಿಸಿದ ಧೀರನ
– ರಾಜವದನೆ ಸುರರಾಜನ (ಬೆ–೯೭–೧)
– ಕೆಸರೊಳು ತಾವರೆ ಪುಟ್ಟಲು ಅದ ತಂದು ಕುಸುಮನಾಭನಿಗೆ ಅರ್ಪಿಸರೇನಯ್ಯ
– ಕುಲ ಕುಲ ಕುಲವೆನ್ನುತಿಹರೊ (ಬೆ–೧೨೦–೧)
– ಗಜರಾಜವರದ ನೀನಾದರೆ ಆಕೆ ಗಜಗ ಮನೆಯು ತಾನಾದಳಯ್ಯ
– ನಿನಗಿಂತ ಕುಂದೇನೊ (ಬೆ–೮೭–೪)
– ಗೋವಿಂದ ಸಲಹೆನ್ನ ಕುಮುದಲೋಚನ ನಿನ್ನ ಸೇವಕರಡಿಯ ಸೇವಕನಯ್ಯಾ ಹರಿಯೆ
– ಗೋವಿಂದ ಸಲಹೆನ್ನನು (ಬೆ–೮೮–೩)
– ತನು ನಿನ್ನದು ಜೀವನ ನಿನ್ನದು ರಂಗ ಅನುದಿನದಲಿ ಬಾಹ ಸುಖದುಃಖ ನಿನ್ನದಯ್ಯಾ
– ತನು ನಿನ್ನದು ಜೀವನ ನಿನ್ನದು (ಬೆ–೫೭–೫)
– ತಂದೆ ಕಾಗಿನೆಲೆಯಾದಿಕೇಶವನ ನಾಮ ಒಂದೇ ವೈಕುಂಠವನ್ನೈದಿಪುದಯ್ಯ
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೭)
– ದನುಜರ ಜಡತೆಯಂತಿಹೆನಯ್ಯ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೨)
– ದಾಸಿಯ ನಂದನ ನಾರದೆನಿಪನು ಕಾಶ್ಯಪ ಪೌತ್ರನ ಕುಲ ಪೇಳಿರಯ್ಯ
– ಕುಲ ಕುಲ ಕುಲವೆನ್ನುತಿಹರೊ (ಬೆ–೧೨೦–೨)
– ಚೇತನಾತುಮಕೆ ನಿನ್ನಯ ಬಳಿಗೆ ಬಂದರು ವಿಶ್ವನಾಥನೊಲಿದುಪ್ಪವಡಿಸಯ್ಯ ಹರಿಯೆ
– ತಂಗದಿರನನಿಮಿಷ ತಾರಕೆಗಳು (ಬೆ–೧೪೯–೪)

೨೨೩. ಅಯ್ಯೋ – ಇಟ್ಟಲ್ಲಿ ಸೀರೆಗಳಿಲ್ಲ ಕಟ್ಟಿವಯ್ಯಯ್ಯೊ
– ಸೈಯೇ ಇದು ಸೈಯೇ ಗೋಪಿ (ಬೆ–೧೦೪–೬)

೨೨೪. ಅರಣ್ಯ – ಕ್ರೂರ ಖಳನ ತರಿದು ಆ ಪಾಂಡವರ ಅರಣ್ಯದಿ ಪೊರೆದ
– ಮರೆಯದಿರು ಹರಿಯ (ಸ–೨೦೩–೨)

೨೨೫. ಅರಮನೆ – ತಿರುಗಿ ಪೋದನು ತನ್ನ ಅರಮನೆಯ ಬಾಗಿಲಿಗೆ
– ವಾಸುದೇವಾಯ ನಮೋ (ಬೆ–೯೦–೧೩)
– ಪಂಚಪ್ರಾಣಗಳ ಗೊತ್ತು ಗುರಿ ಜಾಡನು ತಿಳಿದು ಪಂಚಾಕ್ಷರಿಯೆಂಬ ಅರಮನೆಯೊಳಗೆ
– ನಿಜವರಿತು ಅಂಗವನು ಪೂಜೆ ಮಾಡುವರು (ಸ–೧೪೨–೨)

೨೨೬. ಅರವಿಂದ – ಅರವಿಂದವಿಲ್ಲದಿಹ ಕೊಳವು ತಾ ಕಂಗಳವು
– ಎನ್ನ ನುಡಿ ಹುಸಿಯಲ್ಲ (ಸ–೪೭–೧)

೨೨೭. ಅರವಿಂದನಯನ – ಅರವಿಂದನಯನ ಆದಿಕೇಶವ ರಾಯ ಕರುಗಳ ಸಹಿತ ಗೋವ್ಗಳ ತಿರುಹುತ
– ಯಾದವರಾಯ ಬೃಂದಾವನದೊಳು (ಸ–೨೨೦–೩)

೨೨೮. ಅರವಿಂದನಾಭ (ಶ್ರೀಹರಿ)– ಅರವಿಂದ ನಾಭ ಸಿರಿವಿಧಿಭವಾದಿಗಳೊಡೆಯ ಹಿರಿದಾಗಿ ಕೋಳಿ ಕೂಗಿತೇಳಯ್ಯ ಹರಿಯೇ
– ಏಳು ನಾರಾಯಣ (ಸ–೫೯–೨)

೨೨೯. ಅರಸ – ವಾಣಿಯರಸನ ಪೆತ್ತ ವೈಕುಂಠ ಪತಿ ನೀನು
– ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ–೬೩–೨)
– ಅಗಜೆಯ ಅರಸನ ನಗವ ನೆಗಹಿದನ ಬಗೆಯಿಂದಪ್ಪಳಿಸಿದನ
– ಫುಲ್ಲವದನೆ ಕೇಳೆ ನಿಲ್ಲಲಾರೆ (ಬೆ–೯೫–೧)
– ಶಪಥದಲಿ ರಣದೊಳರಸನ ಹಿಡಿವನೆಂದು ಬಲು ತಪಸಿಗಳ ಕಳುಹಿ ತತ್ತ್ವ ಬೋಧಿಸಿ
– ನೀನಾವ ಬಾಂಧವನೊ (ಬೆ–೭೮–೫)
– ಅಪ್ಪ ಜಯದರಸನ ಕೂಡೆ ಜನಿಸಿದಳ ಕಪ್ಪುವರ್ಣದ ಮೈಯಳ
– ಏಣನಯನೆ ಏಣಭೋಜಮಧ್ಯಳೆ (ಬೆ–೯೯–೨)

– ಪನ್ನಗಶಯನ ಬೇಲಾಪುರದರಸನು ತನ್ನ ನೆನೆವ ಭಕ್ತನ
– ರಾಜವದನೆ ಸುರರಾಜನ (ಬೆ–೯೭–೩)
– ಯಮದೂತರಿನ್ನೇನ ಮಾಡುವರು ಪೇಳೊ ರಮೆಯರಸನೆ ನಿನ್ನ ಅರಿಕೆಯುಳ್ಳವರಿಗೆ
– ಯಮದೂತರಿನ್ನೇನ ಮಾಡುವರು (ಬೆ–೪೪–ಪ)
– ದೊರೆ ನೋಡುತ್ತಿದ್ದಂತೆ ಬಂಟನನು ಪರರು ಕೊಂಡೊಯ್ಯಲು ಕುಂದು ಅರಸಗಲ್ಲದೆ ಆಳಿಗೇನು
– ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ–೧೪೫–೨)
೨೩೦. ಅರಸಿ – ಬಾಲಕನ ವಂದರಿಸಿ ಬಹು ಭಾಗ್ಯವಂತನೆನಿಸಿ ಎಲ್ಲರೊಳು ಸಲಿಗೆ ನಿಲಿಸಿದಳೊ ನಿಮ್ಮರಸಿ
– ಯಾಕೆಲೊ ರಂಗ ನಿನಗಿಂತ ನಟನೆಯ ಮಾತು (ಸ–೨೧೬–೧)
– ಅರಸಿ ಜಯಜಯವೆಂದು ದ್ರೌಪದಿಯ ಸಿರಿ ಮುಡಿಗೆ ಸುರಿಸಿದರು ಪೂಮಳೆಗಳ
– ವಾಸುದೇವಾಯ ನಮೋ (ಬೆ–೯೦–೧೩)
– ಕುಂಜರದಗಮನೆ ಕೋವಿದನರಸಿ
– ಬೀಜ ಮೂರನು ಬಿತ್ತಿ (ಬೆ–೧೬೨–೧)
– ಸಕಲೈಶ್ವರ್ಯದ ಶ್ರೀದೇವಿ ನಿನ್ನರಸಿ ಬಹು ಮುಕುತಿಯಿಂದಲಿ ಲೋಕ ಪುಟ್ಟಿಸುವ
– ಸಿರಿಯ ಮದವೆ ಮುಕುಂದ (ಬೆ–೬೯–೧)
– ತನ್ನ ತಾ ಮರೆಮಾಡಿಕೊಂಡಿಪ್ಪರರಸಿಯ ಬಣ್ಣವ ಕಾಯ್ದಿಹನ
– ರಾಜವದನೆ ಸುರ ರಾಜನ (ಬೆ–೯೭–೩)
– ನಿನ್ನರಸಿಯು ಅರಿಯದಂತಿಹೆ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೩)
೨೩೧. ಅರಸು (ರಾಜ) – ಆಳುವ ಅರಸಾಗಿ ನಿನಗಾವ ಬರವಯ್ಯ
– ಬೀದಿಯೊಳು ಯಾತರಾ ನಂಟು ಬೇಡ (ಸ–೧೮೫–೨)
– ದಂತಿಯಿಲ್ಲದ ಅರಸು ಮುರಿದ ಕಾಲಿನ ಗೊರಸು
– ಎನ್ನ ನುಡಿ ಪುಸಿಯಲ್ಲ (ಸ–೪೭–೨)
– ಸ್ಕಂಧದಲಿ ಅತಿಥಿಗಳು ವಿದ್ಯಾತತಿಗಳು ಮಹಾ ಚಂದದರಸುಗಳು ಭುಜ ತೋಳಿನಲ್ಲಿ
– ವಿಶ್ವಲೋಕೇಶ ವಿಶ್ವಲೋಕೇಶ (ಸ–೨೩೪–೨)
– ಧರ್ಮವಿಲ್ಲದ ಅರಸು ಮುರಿದ ಕಾಲಿನ ಹೊರಸು
– ಅಹುದಾದರಹುದೆನ್ನಿ (ಬೆ–೧೩೧–೨)
– ಮರಕತನಗರಿಯ ಬಾಡ ಬಂಕಾಪುರದರಸು ಭಕ್ತರಕ್ಷಕ ಆದಿಕೇಶವನ ಪಾದ
– ಎಂಥ ಕೀರುತಿ ಪೊತ್ತುವೆರಡು ಪಾದ (ಬೆ–೮೩–೩)
– ದಿಟ್ಟ ವರ ಕೆಟ್ಟ ಮುನಿ ದೈವಗಳ ಪಟ್ಟದರಸು ಅದಾವನು
– ಆತನೇ ಪರಮಾತ್ಮ ಪರತತ್ತ್ವ (ಬೆ–೭೪–೨)
– ಸಾರತತ್ತ್ವದ ಮತವು ಮೀರಿ ಹೋಹುತಲಿದೆ ಆರೈದುಕೊಂಬ ಅರಸುಗಳಿಲ್ಲವು
– ಕಲಿಯೇರಿ ಬಂತು (ಬೆ–೧೩೦–೪)
– ಬಲಿ ನಂಬಿ ಪಾತಾಳ ಲೋಕಕರಸಾದನದೆ ಕುಲದ ಪ್ರಹ್ಲಾದನು ನಿಜವ ಕಂಡ
– ನಂಬು ನಾರಾಯಣನ (ಬೆ–೫೩–೧)
– ಅರಸಿನಂತೆ ಬಂಟನೊ ಹನುಮರಾಯ ದೊರೆಯಂತೆ ಸೇವಕನೊ
– ಅರಸಿನಂತೆ ಬಂಟನೊ (ಬೆ–೫_ಪ)
– ಅರಸಿನಂತೆ ಬಂಟನೆಂಬುದು ನಿನ್ನೊಳು ಕುರುಹು ತೋರಿತು ಮೂರು ಲೋಕಕೆ ಹನುಮ
– ಅರಸಿನಂತೆ ಬಂಟನೊ (ಬೆ–೫_ಅ)
೨೩೨. ಅರಸು (ಹುಡುಕು) – ಆಗಮ ನಿಗಮ ಗಳರಸಿ ಕಾಣದ ವಸ್ತುವನು ತೂಗಿ ಪಡುವ ಪುಣ್ಯವೆಂತು ಪಡೆದಳಯ್ಯ
– ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ–೧೯೫–೬)
– ವಿತ್ತವನರಸುವಂಗೆ ಮುಕ್ತಿಯೆಂಬುದುಂಟೆ
– ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ–೧೨೫–೧)
– ಕುಲಸತಿಯ ಅರಸಿ ಕಾಣದೆ ತೆರೆದೆಯೋ ಬಾಯ
– ಏನು ಕಾರಣ ಬಾಯ ತೆರೆದಿ (ಬೆ–೧೫೫–೨)

- ಪ್ರಳಯ ಕೋಟಿ ಪ್ರಾಣಿಗಳಿಗೆ ಹೊಳವು ಗಾಣಲೀಸದಂತೆ ಬೆಳೆದು ಹೋಗುವ ಗತಿ ಯೆಂಬುದಿತ್ತಲರಸುತ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೭)

**೨೩೩. ಅರಸುತನ** - ಇಭಪುರಿಯನಾಳಿದ ನೃಪತಿ ಕೌರವೇಂದ್ರನರಸುತನವು ತೊಡೆಯದೆ
- ನಂಬಬೇಡಿ ಸಿರಿಯು ತನ್ನದೆ (ಬೆ-೧೧೫-೨)

**೨೩೪. ಅರಳು** (ಹೂವು) - ಅಂದವಹ ಸಂಪಿಗೆಯು ಅರಳ ಪರಿಮಳವುಂಡು ಮುಂದುವರಿಯದೆ ಬೀಳ್ವ ಮಧುಪನಂದದಲಿ
- ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-೨)
- ಅರಳು ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳ ಸುರರು ತಂದಿದ್ದಾರೆ ಬಲು ಭಕುತಿಯಿಂದ
- ಏಳು ನಾರಾಯಣ (ಸ-೫೯-೨)

**೨೩೫. ಅರಳೆಲೆ** (ಒಂದು ಆಭರಣ) - ಕಾಲಲಂದುಗೆ ಗೆಜ್ಜೆ ತೋಳ ಮಣಿಯು ದಂಡೆ ಫಾಲದ ಅರಳೆಲೆಯು ಕುಣಿಯೆ
- ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ-೧೯೫-೧)

**೨೩೬. ಅರಿ** (ಕತ್ತರಿಸು) - ಉರದೊಳಪ್ಪಳಿಸಿ ಅರಿ ಶಿರವ ಸರಸರ ಸೀಳಿ
- ಕಂಡೆ ನಾ ತಂಡತಂಡದ ಹಿಂಡು ದೈವ (ಬೆ-೮೪-೨)
- ಧರಣಿಜಾತನ ಶಿರವರಿದು ನಾರಿಯರನು ಪುರಕೆ ತಂದವನ ತೋರೆ
- ರಾಜವದನೆ ಸುರರಾಜನ (ಬೆ-೯೭-೨)
- ಪ್ರಕಟದಿಂದರಿದು ಕರಿಯನು ಸೀಳಿ ತನಗೆ ಸಮ್ಮುಖರಾದ ಮಲ್ಲರನು ಇರಿದೊರಗಿಸಿ
- ನೋಡಯ್ಯ ನಿನ್ನ ದಾಸರ (ಬೆ-೮೫-೮)
- ಕ್ಷೂಣವಿಲ್ಲದೆ ತಾಯ ಶಿರವರಿದು ತಂದೆ ಯನು ಪ್ರಾಣಹತ್ಯವ ಮಾಡಿದರ ಕುಲವನು
- ನೋಡಯ್ಯ ನಿನ್ನ ದಾಸರ (ಬೆ-೮೫-೬)
- ಮಡದಿಯನು ಕದ್ದು ಪೋದಸುರನಾ ಶಿರವರಿದು ಬಿಡದೆ ಸಾಸಿರ ಗೋಪರೊಡನೆ ಬಳಲಿದೆಯೊ
- ಏಕೆ ನೀನಿಲ್ಲ ಪವಡಿಸಿದೆ (ಬೆ-೬೪-೨)
- ಕೂಡಿದ ಶಿರವರಿದು ರೂಢಿಗೀಶ್ವರ ಕೆಟ್ಟ
- ನಾ ನಿಮ್ಮ ದಾಸರ ದಾಸ (ಸ-೧೩೪-೨)

**೨೩೭. ಅರಿ** (ತಿಳಿ) - ಅಂತರವರಿಯದಾ ದೇಶಿ ಹೇಸಿ
- ಎನ್ನ ನುಡಿ ಪುಸಿಯಲ್ಲ (ಸ-೪೭-೨)
- ಭವರೋಗದ ವೈದ್ಯ ಬಾಡದಾದಿಕೇಶವನ ವಿವರವರಿತು ಭಾವಿಸಿ ಭಕ್ತಜನರು
-ಶಂಕರನಾರಾಯಣ ಬಿಡು (ಬೆ-೧೭೫-೯)
- ಸನ್ನೆಯರಿತು ನಡೆಯದಂಥ ಸತಿಯಿದ್ದೇತಕೆ
- ಸತ್ಯವಂತರ ಸಂಗವಿರಲು (ಬೆ-೧೨೪-೫)
- ಸೇವೆಯರಿಯದ ಧಣಿಯು ಕಲ್ಲಿನಾ ಖಣಿಯು
- ಅಹುದಾದರಹುದೆನ್ನಿ (ಬೆ-೧೩೧-೧)
- ಸೋದರತ್ತೆಯ ಸೊಸೆಯ ಮಗ ನಿನಗೆ ಭಾವಿಸಲು ಸೋದರಳಿಯನು ಮೂರು ಲೋಕ ವರಿಯೆ
- ನೀನಾವ ಬಾಂಧವನೊ (ಬೆ-೭೮-೩)
- ಶ್ರುತಿ ಸ್ಮೃತಿಗಳನರಿತು ನಡೆವೆನೆನಬೇಡ ಶ್ರೀಪತಿಯ ಶ್ರೀನಾಮವೊಂದೇ ಸಾಕು ಮರುಳೆ
- ಸಂಸಾರವೆಂಬ ಸಾಗರವನು (ಬೆ-೧೮-೧)
- ನರಿಯ ಬುದ್ಧಿಯಲಿ ನಡೆದುಕೊಂಡರು ಇಲ್ಲ ಅರಿಯದೆ ಹಲವ ಹಂಬಲಿಸಿದರಿಲ್ಲ
- ಕಷ್ಟ ಪಟ್ಟರೂ ಇಲ್ಲ (ಬೆ-೧೧೧-೧)
- ನಾಡೊಳಗೆ ಕೆಟ್ಟವರ ಪರಿಯ ನೀನರಿತು
- ನೋಡಿ ಮರುಳಾಗದಿರು (ಬೆ-೧೨೭-ಪ)
- ನೆಲೆಯನರಿತು ನೀ ಹರಿಯ ನೆನೆ ಮನುಜ
- ಕುಲ ಕುಲವೆಂದು ಹೋರಾಡದಿರಿ (ಬೆ-೧೨೧-೨ಪ)
- ನಿನ್ನರಸಿಯು ಅರಿಯದಂತಿಹೆ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೩)
- ನೀ ದಯಾಪಾತ್ರನೆಂಬುದ ಕೇಳಿ ನಾನರಿತೆ ಭೂಧರೆಯ ಸುರರ ನೀ ಸಲಹಲಾಗ
- ನೋಡಯ್ಯ ನಿನ್ನ ದಾಸರ (ಬೆ-೮೫-೧)
- ನಿಗಮತತಿ ಕಾಣದ ಮಹಾ ಮಹಿಮನನು ನಮಿಪ ಬಗೆಯನಾನರಿವೆನೆಂತೈ ದೇವ

- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೪)
- ಪ್ರಾಚೀನಕರ್ಮವಿದು ಬಿಡಲರಿಯದು ಯೋಚನೆಯ ಮಾಡಿ ಬಳಲುವುದೇಕೊ ಮನುಜ
- ಪ್ರಾಚೀನ ಕರ್ಮವಿದು (ಬೆ-೧೦೭-೫)
- ಪರಮಮುನಿಶಾಪದಿಂದವನಂಗದಲ್ಲಿ ಸಾಸಿರ ಕಣ್ಣಳಾಗಿರ್ದ ಪರಿಯ ನೀನರಿತು
- ನೋಡಿ ಮರುಳಾಗದಿರು (ಬೆ-೧೨೭-೨)
- ಪಟ್ಟೆನಾಮವನಿಟ್ಟು ಪತ್ರೆ ಕೈಯಲಿ ಪಿಡಿದು ಗುಟ್ಟಿನಲಿ ಜಪಿಸುವ ಗುರುತರಿಯದೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೧)
- ಬಲ್ಲವರೆನಿಪರು ಬಲ್ಲವರರಿಯುರು ಫುಲ್ಲಲೋಚನ ಪೂರ್ಣಬ್ರಹ್ಮನೆಂಬುದನು
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-೫)
- ಬಲ್ಲಿದರಿಗೆಲ್ಲ ಬಲ್ಲಿದನೆಂಬ ಅರಿ ಹೃದಯ ದಲ್ಲಣನೆಂಬ ಧೈರ್ಯವು ಸಾಹಸ
- ಸಿರಿಯ ಮದವೆ ಮುಕುಂದ (ಬೆ-೬೯-೪)
- ಬರೆದೂ ಅರಿಯದ ಲೆಕ್ಕ ಕಡೆಯಲಿ ಬಹು ದುಃಖ
- ಅಹುದಾದಡಹುದೆನ್ನಿ (ಬೆ-೧೩೨-೪)
- ಬಣ್ಣಿಸಲರಿಯೆ ನಾನಿವನ ಮಹಿಮೆಯ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ (ಬೆ-೮೦-೧)
- ಭಿನ್ನವರಿತು ನಡೆಯದಂಥ ಸ್ನೇಹವೇತಕೆ
-ಸತ್ಯವಂತರ ಸಂಗವಿರಲು (ಬೆ-೧೨೪-೫)
- ಲಿಂಗಾಂಗದೊಳಗಿರುವ ಅನುಭವವ ತಿಳಿಯದೆ ಅಂಗಲಿಂಗದ ನೆಲೆಯ ಗುರುತರಿಯದೆ
- ತೀರ್ಥ ಪಿಡಿದವರು ತಿರುನಾಮ ಧಾರಿಗಳೆ (ಬೆ-೧೩೮-೪)
- ಸಿರಿ ದಾರಿದ್ರ್ಯವು ಸುರ ತತಿಗಡರುವ ತೆರನೆಂದರಿದದರಿಂದಲಿ
- ಬೆರೆಯದಿರು ಬೆರೆಯದಿರು (ಬೆ-೧೪೪-೨)
- ವಾಸನೆಯ ಗುರುತಿನಾ ಹೊಲಬನರಿಯದ ಇಂಥ ವೇಷಧಾರಿಗಳು ಸಂನ್ಯಾಸಿಗಳು ಅಹುದೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೫)
- ಮುಂದರಿತು ಹರಿಪದ ಹೊಂದುವುದು ಲೇಸು
- ಎಂದಿದ್ದರೀ ಕೊಂಪೆ ಎನಗೆ ನಂಬಿಕೆ ಯಿರದು (ಬೆ-೧೦-೫)
- ಮುಂದರಿದು ನೋಡು ನರರ ತನುವು ದೊರಕಲರಿಯದು
- ಏನು ಬರುವುದೋ ಸಂಗಡ (ಬೆ-೧೩೭-೫)
- ಮುಂದೆ ಉಪಮಿತರೋರ್ಮಿತರರಿಯದ ಜಪವಿದು ಶಿವ ಶಿವ ಎನ್ನಿರೊ
- ಶಿವ ಶಿವ ಶಿವ ಎನ್ನಿರೊ (ಬೆ-೩-೩)
- ಮಂಡಲಕೆ ಹೊಸಪರಿಯು ಮನ್ಮಥನ ಠಾಣ್ಯ ವಿದು ಮಂಡೆಹೋಗುವುದನ್ನು ಅರಿಯದೀ ಕೊಂಪೆ
- ಎಂದಿದ್ದರೀ ಕೊಂಪೆ ಎನಗೆ ನಂಬಿಕೆ ಯಿರದು (ಬೆ-೧೦-೨)
- ಮರೆಯ ಮಾತೇಕಿನ್ನು ಅರಿತು ಪೇಳುವೆನು
- ತೊರೆದು ಜೀವಿಸಬಹುದೆ (ಬೆ-೫೫-೫)
- ಮಗಳ ಮಗಗೆ ಮೈದುನನಾಗಿ ಮಾವನ ಜಗವರಿಯಲು ಕೊಂದ ಕುಲಗೇಡಿ ಗೋವಳ
- ಏನೆ ಮನವಿತ್ತೆ ಲಲಿತಾಂಗಿ (ಬೆ-೧೫೪-೨)
- ಮೇಲ ತಾನರಿಯದೆ ನಿಂದೆ ಹೊಂದಿರುವಾಗ
- ಆರಿಗೆ ಆರಿಲ್ಲವಯ್ಯ (ಬೆ-೩೧-೨)
- ಮೇಲನರಿತು ವಿಷ್ಣುಭಕುತಿಯ ಮಾಳ್ಪ ಚಾಂಡಾಲರ ಮನೆಯ ಬಾಗಿಲ ಕಾಯಿಸೆನ್ನನು
- ದೇಶಾಧಿಪತಿ ನರಹರಿಯೆ (ಬೆ-೨೧-೪)
- ಅಲ್ಲಾ ಖುದಾ ಎಂಬ ಅರ್ಥವನು ಅರಿಯದೆ ಮುಲ್ಲಾಶಾಸ್ತ್ರದ ನೆಲೆಯ ಮುನ್ನರಿಯದೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೩)
- ಅಲ್ಲಾ ಖುದಾ ಎಂಬ ಅರ್ಥವನು ಅರಿಯದೆ ಮುಲ್ಲಾಶಾಸ್ತ್ರದ ನೆಲೆಯ ಮುನ್ನರಿಯದೆ

- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೩)
- ಅನುವರಿತು ನೀರೊಳಗೆ ಬಿಡದೆ ಮುಳುಗಲು ಬೇಡ ವನಜಾಕ್ಷನಾಮವೊಂದೇ ಸಾಕು ಮರುಳೆ
- ಸಂಸಾರವೆಂಬ ಸಾಗರವನು (ಬೆ-೧೮-೨)
- ಅರಿಯದಂತಖಿಳದೊಳಡಗಿರ್ಪ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೩)
- ಅರಿಯದಂತೆ ವಿಮಲಜ್ಯೋತಿ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೧)
- ಅರಿಯದಂತೆ ಬಂದು ಮಗ್ಗುಲೊಳಗೆ ಬಿಟ್ಟು ಇರದೆ ಓಡಿ ಪೋದನೆ
- ನೆರೆದು ಗೋಪಿಯರೆಲ್ಲರು (ಬೆ-೧೦೩-೭)
- ಅರಿಯೆನು ನಾನು ನಿನ್ನವನಯ್ಯ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೩)
- ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ
- ನಾವು ಕುರುಬರು (ಬೆ-೧೫೨-೧)
- ಅರಿತವರಿರೆ ಮನೆಯೊಳು ಅದು ಸ್ವರ್ಗವು ಕೇಳು
- ಅಹುದಾದಡಹುದೆನ್ನಿ (ಬೆ-೧೩೨-೧)
- ಅತಿಬೇಗ ಚಲಿಸೆಂದು ಬೆಸಸಲಾ ಮುನಿಯಿಂದ ಗತಿಗೆಟ್ಟು ಉರಗನಾಗಿರ್ದ ಪರಿಯರಿತು
- ನೋಡಿ ಮರುಳಾಗದಿರು (ಬೆ-೧೨೭-೧)
- ಅರ್ಥವಿಷಯಂಗಳ ಫಲವನರಿತು ಪುಣ್ಯತೀರ್ಥಯಾತ್ರೆಗಳ ಮಾಡುವುದ ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೭)
- ಆದಿ ಗುರುವರಿಯದೆ ಅತ್ತಲಿತ್ತಲು ತೊಳಲಿ ವೇದಶಾಸ್ತ್ರವನೋದಿ ಬಾಯಾರಲು
- ಜಪವ ಮಾಡಿದರೇನು (ಬೆ-೧೨೩-೧)
- ಜನವರಿಯದಂತೆ ಜೀವನದೊಳಡಗಿದ್ದವನ ಮನವ ಖತಿಗೊಳಿಸಿ ಕಾತರಿಸೆ ನುಡಿಸಿ
- ನೀನಾವ ಬಾಂಧವನೊ (ಬೆ-೭೮-೮)
- ಜಂಗಮಸ್ಥಾವರದ ಹೊಲಬನರಿಯದ ಇಂಥ ಭಂಗಿಮುಕ್ಕುಗಳೆಲ್ಲ ಲಿಂಗವಂತರಹುದೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೪)
- ಆರಿಗಾದರು ಪೂರ್ವಕಲ್ಪನೆಯು ತಪ್ಪದು ಬೇರೆ ಬಯಸಿದರೆ ಬರಲರಿಯದಯ್ಯ
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೧೯-)
- ಆಗಮಮಹಾತ್ಮ್ಯವನು ಅರಿಯದಾತನ ಸಂಗ
- ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ-೧೧೯-೫)
- ಜಗವರಿಯಲು ಕುರುವಂಶಕೆ ಕೇಡನು ಬಗೆದು ಕೊಂದವನು ದ್ರೋಣನೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೩)
- ಜಗವರಿಯೆ ಸೋದರನು ಮಮತೆಯುಳ್ಳವ ನೆನಲೆ ಜಗವರಿಯೆ ವಾಲಿಯನು ಅನುಜ ಕೊಲಿಸಿದ ಮೇಲೆ
- ಆರು ಹಿತವರು ಎಂದು ನಂಬಬೇಡ (ಬೆ-೩೩-೨)
- ಜಗವರಿಯೆ ಪೇರುರವಿರಿದ ಪ್ರಹಲ್ಲಾದವರದ ಅಹೋಬಲ ನರಸಿಂಹನೆ
- ಏನು ಕಾರಣ ಬಾಯ ತೆರೆದಿ (ಬೆ-೧೫೫-೧)
- ಆತನೇ ಪರಮಾತ್ಮ ಪರತತ್ತ್ವ ಪ್ರಣವನೆಂದರಿತು ಪೂಜಿಸಬಾರದೆ
- ಆತನೇ ಪರಮಾತ್ಮ ಪರತತ್ತ್ವ (ಬೆ-೭೪-೪)
- ಇಷ್ಟರೊಳಗೆ ಒಂದು ವಿವರವನರಿಯದ ಭ್ರಷ್ಟಗೆ ನನಗೆ ಇನ್ನೇತರ ಕುಲವೊ
- ಏತರವನೆಂದು ಪೇಳಲಿ (ಬೆ-೧೨೨-೧)
- ಇಂದ್ರಿಯಸೂತಕ ದುರ್ಗಂಧದ ಮಲಮೂತ್ರನಿಂದ ಠಾವಲಿ ತನ್ನ ನಿಜವರಿಯದೆ
- ಏತರವನೆಂದು ಪೇಳಲಿ (ಬೆ-೧೨೨-೨)
- ಇರಬಂದುದಿಲ್ಲ ಸಂಸಾರ ಇದನರಿತು ಹರಿಯ ಸ್ಮರಣೆಯನು ಮಾಡು ಮನುಜ
- ಇರಬಂದುದಿಲ್ಲ ಸಂಸಾರ (ಬೆ-೧೧೩-೪)
- ರೂಢಿಗೀಶನ ಸೇವೆ ಮಾಡಿದ ಮುಕ್ತರ ಈಡಿಲ್ಲವೆಂಬುದನು ಇತರರರಿವರೆ ಸ್ವಾಮಿ
- ಕ್ಷಮಿಸುವುದೆನ್ನ ತಪ್ಪುಗಳ (ಬೆ-೬೧-೨)
- ನಾನರಿಯೆನೀ ದಂದುಗವ ನೀ ಬಲ್ಲೆ
- ನೊಂದೆನಾ ಹರಿಯೆನ್ನದೆ (ಬೆ-೧೩-೫)

- ಏನು ಅರಿಯದ ಅಜಾಮಿಳಗೆ ಸಾಯುಜ್ಯ ವನು ನೀನೊಲಿದು ಕೃಪೆ ಮಾಡಿದೆ
- ನೀನುಪೇಕ್ಷೆಯ ಮಾಡೆ (ಬೆ-೪೯-೨)
- ಏನಿದೆತ್ತಣ ಬಯಕೆ ಎಲೊ ಮಂಕುಜೀವ ನೀನು ಅರಿತರೆ ಪೇಳು ನಿಜವನೆನಗೆ
- ಏನಿದೆತ್ತಣ ಬಯಕೆ (ಬೆ-೧೩೬-ಪ)
- ಒಲಿಸುವುದನರಿಯೆ ಮೆಚ್ಚಿಸುವ ಬಗೆಯ ರಿಯೆ ಹೊಗಳುವ ಹೊಲಬನ್ನರಿಯೆನು
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೫)
- ಹರಹರನೆಂಬ ಸಾವಿರ ತೋಳ ಕೊಯ್ದನ ತರೆದು ಒಟ್ಟಿದ ನಮ್ಮ ಹರಿಯೆ ನೀನರಿಯೆ
- ಶಂಕರನಾರಾಯಣ ಬಿಡು (ಬೆ-೧೭೫-೩)
- ಔಚಿತ್ಯ ವಿದ್ಯೆಯನರಿಯದ ದೊರೆ ತಾನು ಮೆಚ್ಚಿದರೇನು ಮೆಚ್ಚದಿದ್ದರೆ ಏನು
- ಮುಟ್ಟ ಬಾರದವರ ಮನೆಯ (ಬೆ-೧೪೭-೧)
- ಕಪಟವರಿಯದ ನೃಪನಕ್ಕೈಯೊಳನೃತವ ನುಡಿಸಿ ಉಪಮೆಯಲಿ ಶಸ್ತ್ರಪಂಡಿತನ ಕೊಲ್ಲಿಸಿದೆ
- ನೀನಾವ ಬಾಂಧವನೊ (ಬೆ-೭೮-೫)
- ಕರಬರಲರಿಯದ ಗಂಡ ಅವ ನಾಚಿಕೆ ಭಂಡ
- ಅಹುದಾದಡಹುದೆನ್ನಿ (ಬೆ-೧೩೨-೪)
- ಗುರು ಲಿಂಗ ಜಂಗಮವ ಅರಿಯಬೇಕಾದರೆ ಶಿವ ಶಿವ ಎನ್ನಿರೊ
- ಶಿವ ಶಿವ ಶಿವ ಎನ್ನಿರೊ (ಬೆ-೩_೬)
- ಗುರುವಿನುಪದೇಶದಲಿ ಪರಮ ರಹಸ್ಯ ವನರಿತು ಮರೆಯದಲೆ ಅಲ್ಲಿ ಅಧಿಕಾರಿಯಾಗೊ
- ನಾರಾಯಣೆನು ಮನವೆ (ಬೆ-೧೪೧-೧)
- ಗುರುಹಿರಿಯರ ಅರಿಯದವನ ಅರಿವದೇತಕೆ
- ಸತ್ಯವಂತರ ಸಂಗವಿರಲು (ಬೆ-೧೨೪-೧)
- ಗರುವದಲ್ಲಿಹೆನೆಂಬುದರಿತೆನ್ನ ನಿನ್ನ ದಾಸರಿಗೆ ಮಾರಿದೆಯೊ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೧)
- ಗೋವಿಂದ ಗೋವಿಂದ ಎನ್ನಲರಿಯದೆ ವೃಥಾ ನೋವಿಂದ ಭಂಗವ ಪಡುವುದುಚಿತವೆ
- ಗೋವಿಂದ ಗೋವಿಂದ ಎನ್ನಲರಿಯದೆ (ಬೆ-೧೬-ಪ)
- ತಾನು ತನ್ನನರಿಯದಂಥ ಪ್ರೌಢನೇತಕೆ
- ಸತ್ಯವಂತರ ಸಂಗವಿರಲು (ಬೆ-೧೨೪-೪)
- ತನ್ನ ಪ್ರಾಪ್ತಿಯ ಫಲವ ತಾನರಿಯದೆ ಅನ್ಯರಿಗೆ ಆಡುವುದು ಅವಗುಣವು ಮರುಳೆ
- ತನ್ನ ಪ್ರಾಪ್ತಿಯ ಫಲವ (ಬೆ-೧೧೨-ಪ)
- ತಮ್ಮ ಹವಣನರಿಯದೆ ಗರ್ವ ಪಿಶಾಚಿಗಳು ಎಮ್ಮ ಮನೆಯೊಡೆವಂತೆ ಕಲ್ಲಲಿಟ್ಟು
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೩)
- ತರಹರಿಸಲು ಸುಂದರಿಗೆ ಪತಿವ್ರತ ಸುರರರಿ ಯದೆ ಕೊಟ್ಟೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೬)
- ತತ್ತ್ವವನರಿತು ಸುತತ್ತ್ವವ ಬೋಧಿಸಿ ಉತ್ತರ ವಿತ್ತವನ
- ತೋರೆ ಬೇಗನೆ ಸಖಿ (ಬೆ-೯೪-೨)
- ಧುರದೊಳಗೆ ರಘುವರನು ಶರದಿಂದ ಈರೈದು ಶರಗಳನೆ ಹೋಗಾಡಿಸಿದ ಪರಿಯ ನರಿತು
- ನೋಡಿ ಮರುಳಾಗದಿರು (ಬೆ-೧೨೭-೪)
- ಮೊರೆಯ ಕೇಳುವರಿಲ್ಲ ಸಿರಿವಂತ ನಾನಲ್ಲ ಪರಮಾತ್ಮ ನಿನ್ನೊಳಗ ನಾನರಿತಿಲ್ಲ
- ಏಕೆ ದಯವಿನಿತಿಲ್ಲ ಲೋಕಪಾವನಮೂರ್ತಿ (ಸ-೫೫-೨)
- ಅರಿತು ನಡೆಯಲಿ ಬೇಕು ನರಕಾಯವೆತ್ತಿದ ಮೇಲೆ
- ಅರಿತು ನಡೆಯಲಿಬೇಕು (ಸ-೭-ಪ)
- ಅರಿತು ಭಜಿಪರ್‍ಯ್ಯಾರಯ್ಯ ರಂಗಯ್ಯ ನಿನ್ನ
- ಅರಿತು ಭಜಿಪರ್‍ಯ್ಯಾರಯ್ಯ ರಂಗಯ್ಯ ನಿನ್ನ (ಸ-೮-ಪ)
- ನಿಜವರಿತು ಲಿಂಗವನು ಪೂಜೆ ಮಾಡುವರಾರು
- ನಿಜವರಿತು ಲಿಂಗವನು ಪೂಜೆ ಮಾಡುವರು (ಸ-೧೪೨-ಪ)
- ಪಂಥ ಪಾಡುಗಳನರಿಯದ ಬಂಟನವ ತುಂಟ
- ಎನ್ನ ನುಡಿ ಪುಸಿಯಲ್ಲ (ಸ-೪೭-೨)

- ಇಷ್ಟರೊಳಗೆ ಒಂದು ವಿವರವರಿಯದಿಂಥ ಭ್ರಷ್ಟಗೆ ನನಗಿನ್ಯಾತರ ಕುಲವಯ್ಯ
- ಯಾತರವನೆಂದುಸುರಲಿ (ಸ-೨೧೮-೧)
- ಆಗಮದ ಅನ್ವಯವನರಿಯದವನ ಸಂಗ
- ಸಜ್ಜನರ ಸಂಗದೊಳಗಿರಿಸೆನ್ನ (ಸ-೨೪೧-೩)
- ಪರಹಿತಾರ್ಥದ ಧರ್ಮವರಿಯದವರ ಸಂಗ
- ಸಜ್ಜನರ ಸಂಗದೊಳಗಿರಿಸೆನ್ನ (ಸ-೨೪೧-೨)
- ಜಲದ ಸುಗಂಧವ ಜಲವರಿಯದು
- ಅರಿತು ಭಜಿಪರ್‍ಯಾರಯ್ಯ ರಂಗಯ್ಯ ನಿನ್ನ (ಸ-೮-೩)
- ಅರಿಯದಿದ್ದರೆ ನರಕವೇ ಪ್ರಾಪ್ತಿ
- ಅರಿತು ನಡೆಯಲಿಬೇಕು (ಸ-೭-೪)
- ಆಯುಷ್ಯವನರಿಯದಿರುವ ಕಾಯ ಸೌಖ್ಯದಿ
- ಎಷ್ಟು ಪ್ರೀತಿಯೊ ಮನಕೆ (ಸ-೫೨-೪)
- ಆ ಮಹಾಸಿರಿಯ ಗರ್ವದಿ ಮುಂದರಿಯದೆ ಭೂಮಿಯನು ಬಲಿ ತಾನಾಳುತಿರೆ
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೫)
- ಇಂದ್ರಿಯ ಸೂತಕ ದುರ್ಗಂಧದ ಮಲ ಮೂತ್ರ ನಿಂದ ಠಾವಲಿ ತನ್ನ ನಿಜವರಿಯದೆ
- ಯಾತರವನೆಂದುಸುರಲಿ (ಸ-೨೧೮-೨)
- ಇಂದಿರಾದೇವಿಯು ಅರಿಯಲಾರಳು ದೇವ ಬೃಂದಾರಕರೆಲ್ಲ ನಿಂದು ಯೋಚಿಪರು
- ಅರಿತು ಭಜಿಪರ್‍ಯಾರಯ್ಯ ರಂಗಯ್ಯ ನಿನ್ನ (ಸ-೮-೧)
- ಸಿರಿದೇವಿಯು ಕಿರಿಬೆರಳಲ್ಲಿರುವ ಸೊಬಗನ್ನು ಅರಿಯಲಾರಳೋ ದೇವ
- ಅರಿತು ಭಜಿಪರ್‍ಯಾರಯ್ಯ ರಂಗಯ್ಯ ನಿನ್ನ (ಸ-೮-ಅ)
- ನುಡಿವ ನುಡಿಯ ತಾತ್ಪರ್ಯವನರಿವ ನಾಡಿ ನರಗಳಂತೊಲಿಹ ಆದಿಕೇಶವರಾಯ
- ಕೊಡಲು ನೀನಾರು (ಸ-೯೨-೨)
- ಪುರ ಅಗ್ರಹಾರ ಕೆಡಿಸಿದವಗೆ ರಾಜರೋಗ ವೆಂದು ಅರಿವುದು ಸಕಲ ಜನರು
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೧)
- ಸ್ಮರನ ಶರತಾಪವನು ಪರಿಹರಿಸಲರಿಯದೆ ದುರುಳ ಕೀಚಕನು ದ್ರೌಪದಿಯ ತುಡುಕಿ
- ನೋಡಿ ಮರುಳಾಗದಿರು (ಬೆ-೧೨೭-೩)
- ಭೂರಿ ಭೂತಗಳೆ ಭೂಪತಿಯಕಾಂತನ ನಾಮಧಾರಿಗಳ ತೊಡರು ನಿಮಗಳವಡದು ನಾನರಿವೆ
- ಬೇಡ ಬೇಡ ಎಲೆಲೆ ದುರಿತಗಳಿರ (ಬೆ-೨೯-೧)
- ಕ್ಷೋಣಿಯೊಳು ಕ್ಷೀಣ ದೈವ ಬ್ರಹ್ಮಾಂಡ ಕೋಟಿಗಳು ದಾನವಾರಿಯ ದಾಸಗಳವಡವು ನಾನರಿವೆ
- ಬೇಡ ಬೇಡ ಎಲೆಲೆ ದುರಿತಗಳಿರ (ಬೆ-೨೯-೨)
- ಸರಸಿಜೋದ್ಭವನು ಪಣೆಯಲಿ ಬರೆದು ನಿರ್ಮಿಸಿದ ತೆರನೊಂದು ಬೇರುಂಟು ತಾನರಿಯದೆ
- ತನ್ನ ಪ್ರಾಪ್ತಿಯ ಫಲವ (ಬೆ-೧೧೨-೧)

೨೩೮. ಅರಿ (ಶತ್ರು) - ಎರಡು ನಂದಿಯ ಹೂಡಿ ಗರುಡವಾಹನನಾಗಿ ಬರುತ ಭೋರಿಡುತಿದೆ ಅರಿಗೆ ಮೀರಿ
- ಬೀಜ ಮೂರನು ಬಿತ್ತಿ (ಬೆ-೧೬೨-೩)
- ಮನಸಿಜನರಿಯ ತಂದೆಯ ಭಕ್ಷಿಪನ ಪೊತ್ತನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರಲ್ಲ (ಬೆ-೮೧-೧)
- ಅನುವರಿತು ಇಕ್ಕಬೇಕು ಅರಿವರ್ಗವೆಂಬ ತುಂಟರಳಿಸಿ
- ಅಡಿಗೆಯನು ಮಾಡಬೇಕಣ್ಣ (ಸ-೧-೧)
- ಅರಿಯಂತೆ ಬಂದೆನ್ನ ನಡವಳಿಯಲಿ ಶ್ವಾನ ದುರಿತಂಗಳೆಲ್ಲ ಕಾಡುತಿವೆ ಪರಿಹರಿಸು ಎಲೆ ದೇವ
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ-೧೪೫-೨)

೨೩೯. ಅರಿಕೆ - ಯಮದೂತರಿನ್ನೇನ ಮಾಡುವರು ಪೇಳೊ ರಮೆಯರಸನೆ ನಿನ್ನ ಅರಿಕೆಯುಳ್ಳವರಿಗೆ
- ಯಮದೂತರಿನ್ನೇನ ಮಾಡುವರು (ಬೆ-೪೪-೪)

- ಮಂಡಲದೊಳಗೊಬ್ಬ ಜಾರಸ್ತ್ರೀಯಳು ತನ್ನ ಗಂಡನರಿಕೆಯಿಂದ ವ್ಯಭಿಚಾರಗೈಯೆ
- ಯಮದೂತರಿನ್ನೇನ ಮಾಡುವರು (ಬೆ-೪೪-೧)

೨೪೦. **ಅರಿವಿಭಾಡ** (ಶತ್ರುಮರ್ದನ) - ಉದ್ಯೋಗಿಸಿದರಖಿಳ ಸಾಧುಗಳು ಅರಿವಿಭಾಡ ನೊಲಿದುಪ್ಪವಡಿಸೊ ಹರಿಯೆ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೧)

೨೪೧. **ಅರಿವು** - ಪರಮಮೂರ್ಖನು ನಿನ್ನ ಅರಿವಿದ್ದ ದಾಸರಿಗೆ ಶರಣೆನದ ರಾಜಸವೊ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೩)
- ಸಂದೇಹವ ಮಾಡದಿರು ಅರಿವು ಎಂಬ ದೀಪ ಹಿಡಿದು ಇಂದು ಕಾಣೊ ದೇಹದಲಿ ಪಿಂಡಾಂಡ ಹಾಗೆ ಬ್ರಹ್ಮಾಂಡ
- ದಾಸನಾಗೋ ಭವಪಾಶ ನೀಗೋ (ಬೆ-೨೦-೪)
- ಗುರುಹಿರಿಯರ ಅರಿಯದವನ ಅರಿವದೇತಕೆ
- ಸತ್ಯವಂತರ ಸಂಗವಿರಲು (ಬೆ-೧೨೪-೧)

೨೪೨. **ಅರಿವೆ** (ಬಟ್ಟೆ) - ಫಣಿರಾಜನಾಸನದಿ ಮಲಗಿದವಗೆ ಅರಿವೆಯಾಸನವೆಂತು ನಾ ಹಾಸಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೧)
- ನಾಯ ಬಾಯ ಅರಿವೆಯಂತೆ ನಾನಾ ಕೋಟಲೆಯಲಿ ಬಿದ್ದು ಬಾಯ ಬಾಯ ಬಿಡುತಲಿ ಸಾವುದೇನೊ ನೀ ನೋವುದೇನೊ
- ದಾಸನಾಗೋ ಭವಪಾಶ ನೀಗೋ (ಬೆ-೨೦-೩)
- ಸುರುಚಿರೋಜ್ಜ್ವಲಪೀತವಾಸನಿಗೆ ಉಡುಗೊರೆಯ ಅರಿವೆ ಏನನು ಪೊದಿಸಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೨)
- ಮೈಮೇಲ್ ಗೇಣರಿವೆಯಿಲ್ಲ
- ನಾರಾಯಣನೆ ಈತ (ಸ-೧೩೮-೨)

೨೪೩. **ಅರಿಷಡ್ವರ್ಗ** - ನೊಂದೆ ನಾನು ಅರಿಷಡ್ವರ್ಗದಾಟಗಳಿಂದ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೮)

೨೪೪. **ಅರುಣ** - ಆಕಾಶಮಾರ್ಗದಲಿ ತೊಳಲಿ ಬಹ ಅರುಣನಿಗೆ ಬೇಕೆಂಬ ಚರಣಗಳ ಕೊಡಲಿಲ್ಲ ಹರಿಯು
- ಪ್ರಾಚೀನ ಕರ್ಮವಿದು (ಬೆ-೧೦೭-೨)

೨೪೫. **ಅರುಪಿಸು** (ಅರ್ಪಿಸು) - ಹರಿ ಚರಣ ಯುಗಳಕ್ಕೆ ಅರುಪಿಸಿದಾ ಬಳಿಕ ಪರಿಮಳವ ನಾಘ್ರಾಣಿಸೆಂದೊಡೊಲ್ಲೆ
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೩)

೨೪೬. **ಅರುವತ್ತು** - ನೊಂದೆ ಮುನ್ನೂರು ಅರುವತ್ತು ವ್ಯಾಧಿಗಳಿಂದ
- ನೊಂದೆನಾ ಹರಿಯೆನ್ನದೆ (ಬೆ-೧೩-೧)

೨೪೭. **ಅರುಹು** (ತಿಳಿವಳಿಕೆ) - ಅಂದಿಗೂ ಇಂದಿಗೂ ಒಮ್ಮೆ ಸಿರಿ ಕಮಲೇಶನನ್ನು ಒಂದು ಬಾರಿ ಅರುಹಿಂದ ನೆನೆಯಲಿಲ್ಲ ಮನ ತಣಿಯಲಿಲ್ಲ
- ದಾಸನಾಗೋ ಭವಪಾಶ ನೀಗೋ (ಬೆ-೨೦-೪)
- ಅರುಹಿನಾ ಮರೆಯಲ್ಲಿ ಕುರಿಯ ಮುರಿವುದ ಕಂಡು
- ನಾವು ಕುರುಬರು (ಬೆ-೧೫೨-೧)
- ಅರುಹೆಂಬ ನರಗುರಿಯು ತೆರೆಯೆಂಬ ಜಾವಲಿಯು
- ನಾವು ಕುರುಬರು (ಬೆ-೧೫೨-೧)

೨೪೮. **ಅರುಹು** (ತಿಳಿಸು) - ಭರದಿಂದ ಬಂದು ಯಶೋದೆಗೆ ಚಾಡಿಯ ಅರುಹಿದರತಿ ವೇಗದಿ
-ನೆರೆದು ಗೋಪಿಯರೆಲ್ಲರು (ಬೆ-೧೦೩-ಪ)

೨೪೯. **ಅರೆ** (ಅರ್ಧ) - ಆನೆ ಮೊಸಳೆಗೆ ಸಿಲುಕಿ ಅರೆಬಾಯ ಬಿಡುತಿರಲು ಮೌನದಲಿ ಬಂದು ಕಾಯ್ದೆ
- ನೀನುಪೇಕ್ಷೆಯ ಮಾಡೆ (ಬೆ-೪೯-೨)
- ಅನುಮಾನವಾಗಿ ಜೀವನ ತೊಲಗಿದಾಕ್ಷಣದಿ ಮನೆಯೊಳೊಂದರೆಗಳಿಗೆ ನಿಲ್ಲಿಸಿಕೊಳ್ಳರೊ
- ಆರು ಸಂಗಡ ಬಾಹೋರಿಲ್ಲ (ಬೆ-೧೫-೨)

೨೫೦. ಅರೆ (ನುರಿಸು) – ಯೋಧಾರ್ಜುನನ ಅರೆದು ಸ್ವಾದು ಅನ್ನವ ತೊರೆದು
– ಸಿಂಗರದ ಸಿರಿಧರನೆ (ಬೆ–೧೬೭–೫)
೨೫೧. ಅರೆಮತಿ (ಅಜ್ಞಾನ)– ಗುರು ಹಿರಿಯರನು ಕಂಡು ಮುರುಕಿಸುವ ಮೋರೆ ಯಲಿ ಅರೆಮತಿಯ ಕೊಂಕು ಮಾತುಗಳನಾಡಿ
– ಏಕೆ ನಡುಗಿದೆ ತಾಯೆ (ಸ–೫೬–೧)
೨೫೨. ಅರ್ಚನೆ – ಗೌರೀಮನೋಹರನ ಘನತರಾರ್ಚನೆಗೈದು ಚಾರುತರ ಚಕ್ರವನು ಪಡೆದನಾ ಶೌರಿ
– ಆರು ಬಲ್ಲರು ಹರಿಹರರ (ಬೆ–೮೨–೧)
೨೫೩. ಅರ್ಜುನ – ಸುಕೃತಿವಂತನು ಯಮನ ತನಯ ಭೀಮಾರ್ಜುನರು
– ಸಿಂಗರದ ಸಿರಿಧರನೆ (ಬೆ–೧೬೭–೨)
– ತ್ಯಾಗಿ ಧರ್ಮಜ ಬಲ್ಲ ರಣದೊಳರ್ಜುನ ಬಲ್ಲ ಕಾಗೆನೆಲೆಯಾದಿಕೇಶವ ಕೈವಲ್ಯನೆಂಬುದನು
– ಬಲ್ಲವರೆನಿಪರು ಬಲ್ಲವರರಿಯರು (ಬೆ–೭೩–೫)
– ಅರ್ಜುನನ ಶಿರವ ಕಾಯಲು ಬಾಣದಿಂದ ರಥವ ಗುಜ್ಜೆಯಲೂರಿ ನೆಲಕೊತ್ತಿದ ಪಾದ
– ಎಂಥ ಕೀರುತಿ ಪೊತ್ತುವೆರಡು ಪಾದ (ಬೆ–೮೩–೧)
– ಯೋಧಾರ್ಜುನನ ಅರೆದು ಸ್ವಾದು ಅನ್ನವ ತೊರೆದು
– ಸಿಂಗರದ ಸಿರಿಧರನೆ (ಬೆ–೧೬೭–೫)
– ಅತಿ ಸ್ನೇಹದಿಂದ ಅರ್ಜುನಗೆ ಸಾರಥಿಯಾಗಿ ರಥವ ನಡೆಸಿದವನಾರು
– ಆತನ ಪಾಡುವೆ ಅನವರತ (ಬೆ–೭೦–)
– ದೇವಿ ಕೇಳೆನ್ನ ಭಾಷೆಯ ಮುಂದೆ ಅರ್ಜುನಗೆ ನಾವೆ ಸಾರಥಿಯಾಗಿ ಸಲಹುವೆವು
– ವಾಸುದೇವಾಯ ನಮೋ (ಬೆ–೯೦–೧೪)
೨೫೪. ಅರ್ಣವ (ಸಮುದ್ರ) – ಬಳಿಕ ಅಳುವ ನಯನಜಲವು ತಿಳಿದು ನೋಡಿದರೆ ಲವಣಾರ್ಣವಕೆ ಮೂರು ಮಡಿ
–, ನೊಂದೆನಾ ಹರಿಯೆನ್ನದೆ (ಬೆ–೧೩–೩)
– ಏಕೋದೇವನದ್ವಿತೀಯ ಬ್ರಹ್ಮ ನೀನೆಂಬುದಕೆ ಏಕಾರ್ಣವದಲಿದ್ದ ವಟಪತ್ರ ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ–೫೦–೩)

೨೫೫. ಅರ್ತಿ (ಪ್ರೀತಿ) – ಅರ್ತಿಯಿಂದ ಪಾತಾಳಕೆ ದೂಡ್ಡಾ
– ನಾರಾಯಣನೆ ಈತ (ಸ–೧೩೮–೧)
– ಮರ್ತ್ಯದೊಳು ಕಾಗೆನೆಲೆಯಾದಿಕೇಶವನಂಘ್ರಿ ಅರ್ತಿಯಿಂದಲಿ ಕೂಡಿದುದಕೆ ಫಲವೇನು
– ಬಲ್ಲವರು ಪೇಳರ್ರೈ (ಬೆ–೧೬೩–೩)
– ಅರ್ತಿಯುಳ್ಳವರೆಲ್ಲ ಕೊಳ್ಳಿ ಬೇಕಾದರೆ ನಿತ್ಯ ಮಾಧವನೆಂಬ ಅಚ್ಚ ಮಾವಿನ ಹಣ್ಣು
– ಹಣ್ಣು ಕೊಂಬುವ ಬನ್ನಿರಿ (ಬೆ–೧೫೭–೧)
– ಕೃತಕಮಯ ಪಣ್ಯಾಂಗನೆಯರರ್ತಿಗೆ ಮನೋರಥ ಸಿದ್ಧಿಯಲಿ ನಿರೀಕ್ಷಿಪೆನೆಂದು ಕುಜನ ಸಮ್ಮತವೆರಸಿ
– ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ–೧೧–೪)
೨೫೬. ಅರ್ಥ (ಅಭಿಪ್ರಾಯ, ಅಭಿದೇಯ) – ಚಿತ್ರದ ಹೂವಿನ ಹವಳ ಕಾಯಾಗುವ ಅರ್ಥವು ತಿಳಿದು ಪೇಳಿ
– ಮುತ್ತುಗಳ ಹಣ್ಣು ಕಾಯಾದ ಬಳಿಕ (ಸ–೨೦೯–೧)
– ಅರ್ಥವಿಷಯಂಗಳ ಫಲವನರಿತು ಪುಣ್ಯ ತೀರ್ಥಯಾತ್ರೆಗಳ ಮಾಡುವುದ ನಾನೊಲ್ಲೆ
– ದೇಶಾಧಿಪತಿ ನರಹರಿಯೆ (ಬೆ–೨೧–೭)
– ಕ್ಷೀಣ ಶಾಸ್ತ್ರಾರ್ಥವ ಪರಿಗ್ರಹಿಸುತೆ ಕುರಿ ಕೋಣಗಳ ತಲೆ ಚೆಂಡನಾಡಿ
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೧)
–ಅಲ್ಲಾ ಖುದಾ ಎಂಬ ಅರ್ಥವನು ಅರಿಯದೆ ಮುಲ್ಲಾಶಾಸ್ತ್ರದ ನೆಲೆಯ ಮುನ್ನರಿಯದೆ
– ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ–೧೩೮–೩)
– ಭಾವದುಭಯಾರ್ಥವಿದು ಎಲ್ಲರಿಗೆ ಸಮ್ಮತ ವಾದುದೀ ನಾಮ
– ಬಲ್ಲವರು ನೀವು ಪೇಳರಯ್ಯ (ಬೆ–೧೫೦–ಪ)
– ಮಗನಿಂದೆ ಗತಿಯುಂಟೆ ಜಗದೊಳು ನಿಗಮಾರ್ಥಸಾರ ವಿಚಾರದಿಂದಲ್ಲದೆ
– ಮಗನಿಂದೆ ಗತಿಯುಂಟೆ (ಬೆ–೧೪೫–ಪ)

- ಮುಟ್ಟಬೇಡಿ ಮುಟ್ಟಬೇಡಿ (ಬೆ-೨೬-೨)
- ಶ್ರೀಲೋಲನ ಕೊಂಡಾಡಿ ಪಾಡುವೆನು
- ಬಂಟನಾಗಿ ಬಾಗಿಲಕಾಯ್ವೆ (ಬೆ-೪೫-೨)
- ಏನೆಂದು ಕೊಂಡಾಡಿ ಸ್ತುತಿಸುವೆನೊ ದೇವ
- ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ-೬೩-ಪ)

೧೨೨೫. **ಕೊಂಡೆ** - ಚಾಡಿ ಕೊಂಡೆಗಳನಾಡಿ ನಡೆವವನೆ ದ್ರೋಹಿ
- ದ್ರೋಹಿಗಳ ವಿವರವನು ನಾ ಪೇಳ್ವೆನಯ್ಯ (ಸ-೧೨೩-೧)

೧೨೨೬. **ಕೊಂಡೆಗಾತಿ** - ಕೊಂಡೆಗಾತಿ ಯರುಂಟು ದುಡುಕದಿರಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೧)

೧೨೨೭. **ಕೊಂಡೆಗಾರಿಕೆ** - ಕೊಂಡೆಗಾರಿಕೆ ಯನ್ನು ಹೇಳಿ ನಡೆದರಿಲ್ಲ ಕಂಡಕಂಡವರಿಗೆ ಕೈಮುಗಿದರಿಲ್ಲ
- ಕಷ್ಟಪಟ್ಟರೂ ಇಲ್ಲ (ಬೆ-೧೧೧-೨)

೧೨೨೮. **ಕೊಂಡೆಯ** - ಕೊಂಡೆಯವ ಪೇಳಿ ಕಾದಿಸುವವನ ಸಂಗ
- ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ-೧೧೯-೧)

೧೨೨೯. **ಕೊಂಡೊಯ್** - ದೊರೆ ನೋಡು ತ್ತಿದ್ದಂತೆ ಬಂಟನನು ಪರರು ಕೊಂಡೊಯ್ಯಲು ಕುಂದು ಅರಸಗಲ್ಲದೆ ಆಳಿಗೇನು
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ-೧೪೫-೨)

೧೨೩೦. **ಕೊಂತಿನಂದನ** - ಕೊಂತಿನಂದನರ ಸತಿ ಉಟ್ಟುದಕ್ಷಯವಾಗಿ ಸಂತೋಷಪಡಲೆಂದು ವರವಿತ್ತ ಶ್ರೀಕೃಷ್ಣ
- ವಾಸುದೇವಾಯ ನಮೋ (ಬೆ-೯೦-೯)

೧೨೩೧. **ಕೊಂಪೆ** (ಗುಡಿಸಲು/ದೇಹ) - ಮಂಡಲಕೆ ಹೊಸಪರಿಯು ಮನ್ಮಥನ ಠಾಣ್ಯ ವಿದು ಮಂಡೆಹೋಗುವುದನ್ನು ಅರಿಯದೀ ಕೊಂಪೆ
- ಎಂದಿದ್ದರೀ ಕೊಂಪೆ ಎನಗೆ ನಂಬಿಕೆ ಯಿರದು (ಬೆ-೧೦_೨)
- ಗಳಗಳನೆ ನುಡಿವ ನಾಲಗೆ ಗಂಟೆಯುಲಿ ಯಂತೆ ಕೆಲಕಾಲಕೀ ಕೊಂಪೆ ಕಡೆಗಾಹುದಂತೆ
- ಎಂದಿದ್ದರೀ ಕೊಂಪೆ ಎನಗೆ ನಂಬಿಕೆ ಯಿರದು (ಬೆ-೧೦_೧)
- ಕೊಂಪೆಯಲಿ ಶೃಂಗಾರ ಕೊಂಡಾಡಲಳವಲ್ಲ ಕೆಂಪುಬಣ್ಣಗಳಿಂದ ಚೆನ್ನಾಯಿತು
- ಎಂದಿದ್ದರೀ ಕೊಂಪೆ ಎನಗೆ ನಂಬಿಕೆ ಯಿರದು (ಬೆ-೧೦_೩)

೧೨೩೨. **ಕೊಂಬು** - ಕೊಂಬುಹೋತು ಕುರಿ ಕೋಣನ ಬಲಿಗೊಂಬ ಡೊಂಬೆ ದೈವಗಳನು ಭಜಿಸದಿರು ಮನವೆ
- ದಾನ ಧರ್ಮವ ಮಾಡಿ ಸುಖಿಯಾಗು (ಬೆ-೧೩೯-೨)
- ಪೆಗಲೊಳು ಕೊಂಬು ಕೋಲನೆ ಪಿಡಿದು ಗೊಲ್ಲರೊಡಗೂಡಿ ನಮ್ಮೆಲ್ಲರ ಗೋವುಗಳ ಕಾಯ್ದ
- ಮಗುವು ಕಾಣೀರಯ್ಯ (ಸ-೧೯೯-೪)
- ಒಂಟಿಕೊಂಬಿನ ಪಕ್ಷಿ ಒಡಲೊಳಗೆ ಕರುಳಿಲ್ಲ
- ಮರ ನುಂಗುವ ಪಕ್ಷಿ (ಬೆ-೧೬೧-೧)

೧೧೩೩. **ಕೊಂಬೆ** - ಹಲವು ಕೊಂಬೆಗೆ ನೀನು ಹರಿದಾಡದೆ
- ನಾರಾಯಣೆನು ಮನವೆ (ಬೆ-೧೪೧-೨)

೧೨೩೪. **ಕೊಡಲಿ** - ಪೊಡವಿಪಾಲಕರ ವಂಶವನು ಒಬ್ಬನೆ ಕಡಿದು ಕೊಡಲಿಯನು ಬಿಸುಟಿ ಮಲಗಿದ ಭಾವವೊ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೨)
- ಸವಿದು ಬೇರನು ಬಾಲಗೊಲಿದನ ಅವನಿ ಕುಬ್ಜನ ಕೊಡಲಿ ಪಿಡಿದನ
- ಇಂದು ನೀ ಕರೆದುತಾರೆ (ಬೆ-೯೨-೨)
- ಇವನ ಕೊಡಲಿಬಾಯಿಗಿದಿರಿಲ್ಲ
- ನಾರಾಯಣನೆ ಈತ (ಸ-೧೩೮-೨)
- ಬಾಳೆಹಣ್ಣಿಗೆ ಕೊಡಲಿ ಬೇಕೆ ದಮ್ಮಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೨)
- ಪೊಡವಿಯ ಕೊಟ್ಟರೆ ಅಳೆಯುತಿದೆ ತನ್ನ ಕೊಡಲಿಯೊಳು ಭೂಪರ ಕಡಿಯುತಿದೆ
- ಮಗುವಿನ ಮರುಳಿದು ಬಿಡದಲ್ಲ (ಸ-೧೯೮-೨)

೧೨೩೫. **ಕೊಡಹು** - ಕೊಟ್ಟ ವರಗಳನೆಲ್ಲ ಕೊಡಹಿ ಬಹು ದನುಜರನು ಕುಟ್ಟಿ ಹಾಕಿದನಾವನು
- ಆತನೇ ಪರಮಾತ್ಮ ಪರತತ್ತ್ವ (ಬೆ-೭೪-೨)

೧೨೩೬. **ಕೊಪ್ಪ** (ಪ್ಪು) - ಕೊಪ್ಪಾನೆ ಕೇಳಿದರಲ್ಲಿ ಕೊಪ್ಪ? ಊರಮುಂದಿನ ತಿಪ್ಪ?
- ಎಂಥ ಟವಳಗಾರನಮ್ಮ (ಸ-೪೩-೨)

೧೨೩೭. **ಕೊಪ್ಪರಿಗೆ** - ಎಣ್ಣೆಗೊಪ್ಪರಿಗೆಯೊಳು ಬಿದ್ದು ಸ್ತುತಿಸಿದನಲ್ಲ ಚಿಣ್ಣ ಪಿತನಾ ಬಾಧೆ ಗೊದರಿದವನಲ್ಲ
- ಕಾಯೊ ಕರುಣಾಕರನೆ (ಬೆ-೫೯-೧)

೧೨೩೮. **ಕೊಪ್ಪಾನೆ** - ಕೊಪ್ಪಾನೆ ಕೊಟ್ಟೇನೆಂದು ಒಪ್ಪಿಸಿ ಎನ್ನ ತಂದ
- ಎಂಥ ಟವಳಗಾರನಮ್ಮ (ಸ-೪೩-೨)

೧೨೩೯. **ಕೊಯ್** - ಆರು ಹತ್ತರ ಮೊಳದ ಕಾಯಿ ಕೊಯ್ಯುವ ಕುಡುಗೋಲಣ್ಣ
- ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ-೭೧-೪)
- ತೊಟ್ಟು ಇಲ್ಲದ ಹಣ್ಣು ಮುಟ್ಟಿ ಕೊಯ್ವನು ಒಬ್ಬ ಹುಟ್ಟು ಬಂಜೆಯ ಮಗನು
- ಮುತ್ತುಗಳ ಹಣ್ಣು ಕಾಯಾದ ಬಳಿಕ (ಸ-೨೯೯-೨)
- ಊರ ಮುಂದೆ ಹಿರಣ್ಯಕನ ಕೊರಳ ಕೊಯ್ವುದ ಕಂಡೆ
- ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ-೭೧-೫)
- ಖಂಡ ಕೊಯ್ದು ಕೊಡಬೇಡ ದಳ್ಳುರಿಯಗ್ನಿಕುಂಡವನು ಹೊಕ್ಕು ಹೊರಡುವುದು ಚಿತವೆ
- ಗೋವಿಂದ ಗೋವಿಂದ ಎನ್ನಲರಿಯದೆ (ಬೆ-೧೬-೨)
- ಪಣ್ಣ ಕೊಯ್ದನನುಜಗೆ ಸಹಾಯನಾದನ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ (ಬೆ-೮೦-೧)
- ಹರಹರನೆಂಬ ಸಾವಿರ ತೋಳ ಕೊಯ್ದನ ತರೆದು ಒಟ್ಟಿದ ನಮ್ಮ ಹರಿಯೆ ನೀನರಿಯೆ
- ಶಂಕರನಾರಾಯಣ ಬಿಡು (ಬೆ-೧೭೫-೩)
- ಮೆರೆವ ಜಲಜನ ಕೂರ್ಮವರಹನ ನರಹರಿ ದ್ವಿಜ ಕೊರಳ ಕೊಯ್ದನ
- ಇಂದು ನೀ ಕರೆದುತಾರೆ (ಬೆ-೯೨-೩)

೧೨೪೦. **ಕೊಯ್ಸು** - ಬಾಳುತಿಪ್ಪ ಕುರಿಯ ಕೋಣವ ಬೀಳುಬೀಳು ಕೊರಳ ಕೊಯ್ಸಿ
- ಕಣಿಯ ಹೇಳಬಂದೆ ನಾನು (ಬೆ-೭೨-೩)

೧೨೪೧. **ಕೊರಗ** (ಒಂದು ಜಾತಿ) - ಒಕ್ಕಲಿಗಾಗದ ಗವುಡ ರೊಕ್ಕವ ಪಡೆವಾ ಕೊರಗ
- ಅಹುದಾದಡಹುದೆನ್ನಿ (ಬೆ-೧೩೨-೨)

೧೨೪೨. **ಕೊರವ** (ಒಂದು ಜಾತಿಯ ಮೀನು)
- ಕೋಡಗ ಕೊರವನಿಗೆ ಸಿಲ್ಕಿ ಆಡಿದ ತೆರನಾಡಿದೆವೆ
- ಸೈಯೆೇ ಇದು ಸೈಯೇ ಗೋಪಿ (ಬೆ-೧೦೪-೧೦)

೧೨೪೩. **ಕೊರಳು** - ಎತ್ತಿಕೊಂಡು ಮುತ್ತು ಕೊಟ್ಟರೆ ಮುತ್ತಿನ್ಹಾರ ಕೊರಳಿಗ್ಹಾಕಿ
- ಬಾಲಕನೆಂದೆತ್ತಿಕೊಂಡೆನೆ (ಸ-೧೮೩-೧)
- ಕೊರಳ ಘಾತಕರಲ್ಲಿ ಸೆರಗೊಡ್ಡಬಹುದು
- ಮಾವನ ಮನೆಯೊಳಗೆ (ಬೆ-೧೪೬-೨)
- ನಿರ್ಗಲಿತ ಶೋಣಿತ ಸುರಿಯೆ ಹರಿಹರಿದು ಕರುಳ ಕೊರಳೊಳಗೆ ಇಟ್ಟವನ
- ಕಂಡೆ ನಾ ತಂಡತಂಡದ ಹಿಂಡು ದೈವ (ಬೆ-೮೪-೨)
- ಬಾಳುತಿಪ್ಪ ಕುರಿಯ ಕೋಣವ ಬೀಳುಬೀಳು ಕೊರಳ ಕೊಯ್ಸಿ
- ಕಣಿಯ ಹೇಳಬಂದೆ ನಾನು (ಬೆ-೭೨-೩)
- ಮೆರೆವ ಜಲಜನ ಕೂರ್ಮವರಹನ ನರಹರಿ ದ್ವಿಜ ಕೊರಳ ಕೊಯ್ದನ
- ಇಂದು ನೀ ಕರೆದುತಾರೆ (ಬೆ-೯೨-೩)
- ಸಾವಿಗಂಜದೆ ಕೊರಳನುತ್ತರಿಸಿಕೊಳಬಹುದು
- ವಾಸುದೇವಾಯ ನಮೋ (ಬೆ-೯೦-೨)
- ತೊಗಲ ಬಿಲ್ಲೆ ಕೊರಳಲಿ ಕಟ್ಟಿಕೊಂಡು ಹಗಲು ಇರುಳು ಅನ್ನಪಾನಕೆ ಹೋಗದೆ
- ಗೋವಿಂದ ಗೋವಿಂದ ಎನ್ನಲರಿಯದೆ

(ಬೆ–೧೬–೪)
– ಊರ ಮುಂದೆ ಹಿರಣ್ಯಕನ ಕೊರಳ ಕೊಯ್ವುದ ಕಂಡೆ
– ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ–೭೧–೫)
– ಶೇಷನ ಹಾಸಿಗೆ ಗರುಡ ತುರಗವು ಪೀತವಾಸದುಡುಗೆಯು ಕೊರಳಲಿ ವೈಜಯಂತಿ
– ಸಿರಿಯ ಮದವೆ ಮುಕುಂದ (ಬೆ–೬೯–೨)
– ವರಕೌಸ್ತುಭವು ಕೊರಳಿನೊಳಗೆ ಇಪ್ಪವಗೆ ಆಭರಣವಾವುದ ತೊಡಿಸಲಿ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೨)
– ತಿರುಮಣ್ಣು ಶ್ರೀಚೂರ್ಣ ಪೂರ್ಣ ದ್ವಾದಶ ನಾಮ ಸಿರಿತುಳಸಿ ವನಮಾಲೆ ಕೊರಳಿನೊಳಗಿಪ್ಪವರ
– ಮುಟ್ಟಬೇಡಿ ಮುಟ್ಟಬೇಡಿ (ಬೆ–೨೬–೧)
– ಗಂಡುಗತ್ತರಿಯನ್ನು ಕೊರಳಿಗಿಟ್ಟರು ಇಲ್ಲ ಪ್ರಚಂಡನಾದರೂ ಇಲ್ಲ ಪರಿಹಾಸ್ಯವಲ್ಲ
– ಕಷ್ಟಪಟ್ಟರೂ ಇಲ್ಲ (ಬೆ–೧೧೧–೨)
– ವೇಣು ಕೊರಳಿಗೆ ಇಕ್ಕಿ ಎವೆಯು ಅಡ್ಡಾದಾಗ ತ್ರಾಣ ನಿತ್ರಾಣ ಸತ್ರಾಣದಲಿ ಜಯ ಜಯ
– ಸಾಲದೆ ನಿನದೊಂದು ದಿವ್ಯನಾಮ (ಬೆ–೧೭೪–೪)

೧೨೪೪. ಕೊರೆ (ತೂತುಮಾಡು) – ಕಳವಿನ ಒಡವೆಯಲಿ ಒಡೆಯಗೆ ಪಾಲೀವ ಕಳಬಂಟ ಕನ್ನ ಕೊರೆಯುತಿರೆ
– ಯಮದೂತರಿನ್ನೇನ ಮಾಡುವರು (ಬೆ–೪೪–೨)

೧೨೪೫. ಕೊಲಿಸು/ಕೊಲ್ಲಿಸು – ಅಂದು ಸಾಧಿಸಲು ಕಂಬದ ಬಳಿಯೆ ತನ್ನ ತಂದೆಯ ಕೊಲಿಸಿದನೆಂಬರು ಜನರು
– ನಡತೆ ಹೀನನಾದರೇನಯ್ಯ (ಸ–೧೨೭–೨)
– ಕೊಲಿಸಿ ಕೌರವರ ಕಾಳೆಗದಿ ಕೆಡಹಿದ ಪಾದ
– ಭಜಿಸಿ ಬದುಕೆಲೊ ಮನುಜ (ಬೆ–೩೫–೨)
– ಜಗವರಿಯೆ ಸೋದರನು ಮಮತೆಯುಳ್ಳವನೆನಲೆ ಜಗವರಿಯೆ ವಾಲಿಯನು ಅನುಜ ಕೊಲಿಸಿದ ಮೇಲೆ
– ಆರು ಹಿತವರು ಎಂದು ನಂಬಬೇಡ (ಬೆ–೩೩–೨)
– ವಾಲಿಯನುಪಾಯದಿಂದಲಿ ಕೊಲ್ಲಿಸಿ ರವಿಜಗೆ ಸಹಾಯ ಮಾಡಿದೆ ವಾಯುತನಯ
– ಎಷ್ಟು ಪೊಗಳಲಿ ನಾನು (ಸ–೫೩–೧)
– ಪಿರಿದು ರವಿಮಂಡಲವ ಮರೆಯ ಚಕ್ರವ ಮಾಡಿ ನರನ ಕೈಯಿಂದ ಸೈಂಧವನ ಕೊಲ್ಲಿಸಿದೆ
– ನೀನಾವ ಬಾಂಧವನೊ (ಬೆ–೭೮–೪)
– ಸಾಧಿಸುವಸಮ ಚಕ್ರವ್ಯೂಹವನೆ ಬಲಿದು ರಿಪು ಸಾಧಕರ ಷಡುರಥರ ಕೈಲಿ ಕೊಲ್ಲಿಸಿದೆ
– ನೀನಾವ ಬಾಂಧವನೊ (ಬೆ–೭೮–೩)
– ಸಮರದಲಿ ರವಿಸುತನ ರಥಕೆ ಸೂತನ ಮಾಡಿ ಯಮಸುತನ ಕೈಲಿ ಮಾವನನು ಕೊಲ್ಲಿಸಿದೆ
– ನೀನಾವ ಬಾಂಧವನೊ (ಬೆ–೭೮–೭)
– ವರ ವೃಕೋದರ ಧರ್ಮನಂದನರ ನಗಲಿಸಿಯೆ ಗುರುಸುತನ ಕೈಲಿ ಬಾಲಕರ ಕೊಲ್ಲಿಸಿದೆ
– ನೀನಾವ ಬಾಂಧವನೊ (ಬೆ–೭೮–೯)
– ಅನುವರದೊಳಾಯವನು ತೊಡೆಯ ಸನ್ನೆಯ ಮಾಡಿ ಅನಿಲಜನ ಕೈಲಿ ಕೌರವನ ಕೊಲ್ಲಿಸಿದೆ
– ನೀನಾವ ಬಾಂಧವನೊ (ಬೆ–೭೮–೮)
– ಕಪಟವರಿಯದ ನೃಪನಕೈಯೊಳನೃತವ ನುಡಿಸಿ ಉಪಮೆಯಲಿ ಶಸ್ತ್ರಪಂಡಿತನ ಕೊಲ್ಲಿಸಿದೆ
– ನೀನಾವ ಬಾಂಧವನೊ (ಬೆ–೭೮–೫)
– ಧರಣಿಕೀಲಿಸಿದ ರಥವನು ನೆಗಹುತಿರೆ ಸಹೋದರನ ಕೈಯಿಂದೆ ನಿರ್ದಯದಿ ಕೊಲ್ಲಿಸಿದೆ
– ನೀನಾವ ಬಾಂಧವನೊ (ಬೆ–೭೮–೬)

೧೨೪೬. ಕೊಲು /ಕೊಲ್ಲು – ನಿಗಮಚೋರಕನ ಕೊಲಲು ತೆರೆದೆಯೊ ಬಾಯ
– ಏನು ಕಾರಣ ಬಾಯ ತೆರೆದಿ (ಬೆ–೧೫೫–೧)
– ಛಲದಿಂದ ಕ್ಷತ್ರಿಯರ ಕೊಲಲು ತೆರೆದೆಯೊ ಬಾಯ
– ಏನು ಕಾರಣ ಬಾಯ ತೆರೆದಿ (ಬೆ–೧೫೫–೨)
– ಕಾಲ ತೂಗಿ ನೋಡುತ್ತ ಗಜ ಉನ್ಮತ್ತ

ಕಾಲಿನಿಂದಲಿ ಕೊಲುವ ರೂಪದಿ
- ಇಂದು ನೀ ಕರೆದುತಾರೆ (ಬೆ-೯೨-೧)
- ಬೆಂಬಿಡದೆ ದೈತ್ಯರನು ಕೊಂದ ಗುಣ ಸಂಪನ್ನ ಸುಂದರ ಕೃಷ್ಣನೆಂಬ ಮದ ಸೊಕ್ಕಿದಾನೆ
- ಆನೆ ಬರುತಾದೆ ನೋಡಮ್ಮ (ಸ-೧೫-೩)
- ಜಲನಿಧಿ ಸುತನ ಮೊಮ್ಮಗನ ಕೊಂದ ಶೂರ ನಕುಲ ಸಹದೇವ ಪಾಂಡವರೈವರು
- ನಮಗೆಲ್ಲ ಮನೆಗಳಯ್ಯ (ಸ-೧೩೨-೪)
- ಮಚ್ಛ್ಯ ರೂಪದಿಂದ ಪೋಗಿ ಅವನ ಕೊಂದ ಅಚ್ಯುತರಾಯನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೧
- ಉರೆ ಪೂತನಿಯ ಹೀರಿ ಮಾವ ಕಂಸನ ಕೊಂದ ಸಿರಿಯಾದಿಕೇಶವನವೆಂಬ ಮದ ಸೊಕ್ಕಿದಾನೆ
- ಆನೆ ಬರುತಾದೆ ನೋಡಮ್ಮ (ಸ-೧೫-೫)
- ಆನೆ ಬರುತಾದೆ ಎಲ್ಲರು ನೋಡಿರಿ ಒಂದಾನೆಯ ಕೊಂದ ಮದ್ದಾನೆ
- ಆನೆ ಬರುತಾದೆ ನೋಡಮ್ಮ (ಸ-೧೫-೬)
- ಗರಳಕಂಧರ ಸಖನನುಜನ ಕೊಂದನ ಗೋವಿಂದ ಎನ್ನಿರೋ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೧)
- ಮಡದಿಯ ಮನೆಯ ಅರ್ಭಕನಾಗಿ ಬಲುಗಡಿಯ ದಾನವನ ಕೊಂದನ ಸೂನು
- ಚೆಲ್ವ ಕಂಗಳ ಚೆಲ್ವಕಾರ (ಸ-೯೯-೨)
- ಅಂದು ಕೊಂದವರಾರು ಇಂದು ಕಾಯ್ವರ ದಾರು
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೫)
- ಕರೆತರಿಸಿದ ಮಾವನ ಕೊಂದಾತನ ಗೋವಿಂದ ಎನ್ನಿರೊ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೩)
- ನಾಸದೊಳೊರ್ವನ ಪೊತ್ತು ಮುರಿದು ಮುನೀಶರ ಶಾಪವ ಪಿಡಿದು ಕೊಂದಾತನು
- ಈತನೇನೆ ನಿನ್ನ ಮಗನು (ಸ-೩೮-೧)
- ದಶಕಂಠನ ಕೊಂದು ಅನುಜಗೆ ಪಟ್ಟಗಟ್ಟಿದ ದಶರಥಸುತನೆಂಬ ಮದ ಸೊಕ್ಕಿದಾನೆ
- ಆನೆ ಬರುತಾದೆ ನೋಡಮ್ಮ (ಸ-೧೫-೨)
- ಮಾವನ ಕೊಂದು ಮತ್ತೈವರ ಸಲಹಿದ ದೇವ ಕೃಷ್ಣನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೮)
- ಕಾನನವಾಸದಿ ನಿಂದಳಿಗೊಡೆಯ ನಿಧಾನ ಶರಧಿಯಲಿ ವಾಸಮಾಡಿದನು
- ಸೀತಾಪತಿ ರಘುನಾಥ (ಬೆ-೧೦೦-೨)
- ಸಲೆ ದೈತ್ಯನ ಕೊಂದು ಸೀತೆಯ ತಂದನಿಗೆ ಗಿರಿ ತಲೆಯಮೇಲೆ ಇಹ ಪ್ರಾಪ್ತಿಯಾಯಿತು
- ನಮಗೆಲ್ಲ ಮನೆಗಳಯ್ಯ (ಸ-೧೩೨-೧)
- ಖಳ ಸೋಮಕನ ಕೊಂದು ನೀರ ಮುಳುಗಿ ಬಂದೆ
- ಯಾದವಗಿರಿವಾಸನಹುದೋ (ಸ-೨೧೯-೧)
- ನೀರ ಮುಳುಗಿ ಖಳನ ಕೊಂದು ವೇದ ತಂದು ಬರಮದೇವಗಿತ್ತ ಮದ್ದಾನೆ
- ಆನೆ ಬರುತಾದೆ ನೋಡಮ್ಮ (ಸ-೧೫-೧)
- ಕಣ್ಣಬಿಟ್ಟು ವೈರಿ ನೋಡಿ ಕೊಂದದ
- ನಾರಾಯಣನೆ ಈತ (ಸ-೧೩೮-೩)
- ಚಂದಿರನ ನೆರೆಪೋಲ್ವ ಉನ್ನತೋನ್ನತನಾಗಿ ಕೊಂದು ತ್ರಿಪುರಾಸುರರ ಅವರ ಸತಿಯರ ಕೆಡಿಸಿ
- ಯಾದವಗಿರಿವಾಸನಹುದೋ (ಸ-೨೧೯-೩)
- ಇಲ್ಲದ ಬಯಲ ನಿಂದೆಯ ಪೊತ್ತು ಶುಕಾಮಲ್ಲರೊಡನೆ ಕಾದಿ ಮಲೆತ ಸಾಲ್ವರ ಕೊಂದು ಮಡದಿಗೆ ರತ್ನ ತಂದುದರಿಂದ
- ಚೆಲ್ವ ಕಂಗಳ ಚೆಲ್ವಕಾರ (ಸ-೯೯-೧)
- ಮದಗಜ ಹರಿಯೆಂದು ಕರೆಯಲು ಒದಗಿ ಆ ಕ್ಷಣ ಬಂದು ಮುದದಿ ನಕ್ರನ ಕೊಂದು ಸಲಹಿದ
- ಮರೆಯದಿರು ಹರಿಯ (ಸ-೨೦೩-೧)
- ಭಾಗಿರಥಿಯ ತಂದೆ ಬಹು ದೈತ್ಯರ ಕೊಂದೆ
- ನಾ ನಿಮ್ಮ ದಾಸರ ದಾಸ (ಸ-೧೩೪-೫)

- ಅಂದು ಕೌಸಲ್ಯಗರ್ಭ ಚಂದ್ರಮನಾಗಿ ಬೆಳಗಿ ಕೊಂದೆ ರಾವಣ ಕುಂಭಕರ್ಣಾದಿಗಳನೆಲ್ಲ
- ಯಾದವಗಿರಿವಾಸನಹುದೋ (ಸ-೨೧೯-೩)
- ವಿಷ್ಣುವೆ ಪರಮದೈವವೆಂದು ದುಷ್ಟ ರಾಕ್ಷಸರ ಕೊಂದೆ
- ಎಷ್ಟು ಪೊಗಳಲಿ ನಾನು (ಸ-೫೩-೮)
- ಕಂದನಾಗಿ ಜನಿಸಿ ವಸುದೇವ ದೇವಕಿಯರಿಗೆ ನಂದಗೋಕುಲದೊಳು ನಿಂದೆ ಕಂಸನ ಕೊಂದೆ
- ಯಾದವಗಿರಿವಾಸನಹುದೋ (ಸ-೨೧೯-೩)
- ಕೊಲ್ಲಬಾರದೆನುತ ಹೇಳಿ ಮನೆಯ ಬಿಟ್ಟು ಹೊರಗಟ್ಟಿದ
- ಒಡವೆ ಹೋಯಿತು ಮನ ಧೃಡವಾಯಿತು (ಸ-೬೯-೪)
- ಖುಲ್ಲ ಮನುಜರನು ಕೊಲ್ಲಬೇಕೆನುತಲಿ ಭಲ್ಲೆ ಹಿಡಿದು ತುರಗವನೇರಿ
- ತಾಳಲ್ಲಲ್ಲಲ್ಲಲ್ಯೊ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೧೦)
- ಸೀತೆಯನು ಕದ್ದು ಒಯ್ದವನ ಕೊಲ್ಲುವ ಭರದಿ ಭೂತಳದ ಕಪಿಗಳನು ಕೂಡಿಕೊಂಡು
- ನೋಡಯ್ಯ ನಿನ್ನ ದಾಸರ (ಬೆ-೮೫-೭)
- ಹಿಂದೆ ಕಾಯ್ವವರಾರು ಮುಂದೆ ಕೊಲ್ಲುವರಾರು
- ನೊಂದೆನಾ ಹರಿಯೆನ್ನದೆ (ಬೆ-೧೩-೫)
- ಕುರುಪತಿಯ ಮೈದುನನ ಕೊಲ್ಲ ಬಗೆದವನ ಸಂಗರದಲೇರಿಸಿದ ನುಡಿಯನ್ನೆ ಕೇಳ್ದು
- ನೀನಾವ ಬಾಂಧವನೊ (ಬೆ-೭೮-೪)
- ಚಿತ್ತಜಾರಿ ಕೊಲ್ಲಲಂಬರೀಷ ಭೂಪೋತ್ತಮನ ಕಾಯ್ದೆ ಶ್ರೀ ನಾರಾಯಣಾ
- ನಾರಾಯಣಾ ನಮೋ (ಬೆ-೫೧-೧)
- ತೊಟ್ಟ ಬಾಣವ ತೊಡಲೊಲ್ಲದೆ ತಾಯಿಗೆ ಕೊಟ್ಟ ಭಾಷೆಗೆ ಐವರ ಕೊಲ್ಲದೆ
- ಬಂದಿದೆ ದೂರು ಬರಿದೆ (ಬೆ-೮೬-೪)
- ಬೇಸರದೆ ಕೌರವನ ಕೊಂದ ಪಾಂಡವರ ಸಂತೋಷದಲಿ ಪಕ್ಷಿಕರ ಮಾಡಿಕೊಂಡಿರ್ಪ
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೪)
- ಕಾಕು ಶಕಟನ ತುಳಿದು ಕೊಂದ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-೧)
- ಅಣ್ಣನ ವೈರಿಯ ಮಗನ ಕೊಂದಾತನ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ (ಬೆ-೮೦-೧)
- ಕೇಸರಿಯೆಂಬ ರಕ್ಕಸರನೆಲ್ಲರ ಕೊಂದ ವೇಷಧಾರಿ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೩)
- ಹರಿಯ ರೂಪವ ತಾಳಿ ಇರುಳು ದೈತ್ಯನ ಕೊಂದ ಸಿರಿಧರನು ಕಾಗೆನೆಲೆ ಆದಿಕೇಶವ ರಾಯ
- ಮೂವರೇರಿದ ಬಂಡಿ (ಬೆ-೧೬೦-೩)
- ಮಗಳ ಮಗಗೆ ಮೈದುನನಾಗಿ ಮಾವನ ಜಗವರಿಯಲು ಕೊಂದ ಕುಲಗೇಡಿ ಗೋವಳ
- ಏನೆ ಮನವಿತ್ತೆ ಲಲಿತಾಂಗಿ (ಬೆ-೧೫೪-೨)
- ದುರುಳತನದಿ ಸೆಳೆದುಕೊಂಡನ ಕೊಂದನ ತರಳೆ ನೀ ತಂದು ತೋರೆ
- ಹರಿಮುಖಿ ಹರಿವಾಣಿ (ಬೆ-೯೮-೧)
- ಅಂಧಕನನುಜನ ಕಂದನ ತಂದೆಯ ಕೊಂದನ ಶಿರದಲಿ ನಿಂದವನ
- ಮಂಗಲಂ ಜಯ ಮಂಗಲಂ (ಬೆ-೧೭೨-೧)
- ಲೀಲೆಯಿಂದಲಿ ಕಿತ್ತೆತ್ತಿದ ಧೀರನ ಕಾಳೆಗದಲಿ ಕೊಂದನ
- ರಮಣಿ ಕೇಳೆಲೆ ಮೋಹನ (ಬೆ-೯೬-೨)
- ಧುರದೊಳು ಧ್ವಜವ ಕೀಲಿಸಿದಾತನ ಕುವರರೆಲ್ಲರನು ಕೊಂದನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೪)
- ಭಂಗನೆ ಲಂಕೆಗೆ ಪೋಗಿ ನಮ್ಮ ರಂಗ ಹೆಂಗಸುಗಳ್ಳನ ಕೊಂದಾನ್ನಾಜಿ
- ದೇವಿ ನಮ್ಮ ದೇವರು ಬಂದರು (ಬೆ-೭೭-೭)
- ಕೆಂಗಣ್ಣ ಮೀನನಾಗಿ ನಮ್ಮ ರಂಗ ಗುಂಗಾಡಿ ಸೋಮನ ಕೊಂದಾನ್ನಾಜಿ
- ದೇವಿ ನಮ್ಮ ದೇವರು ಬಂದರು (ಬೆ-೭೭-೧)

- ತಾಯ ಮಾತನು ಕೇಳಿ ಸಾವಿರ ತೋಳಿನ ಆವಿನ ಕಳ್ಳನ ಕೊಂದಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೬)
- ಚೆನ್ನಕಾಡಿನ ಹಂದಿಯಾಗಿ ನಮ್ಮ ರಂಗ ಚಿನ್ನದ ಕಣ್ಣನ ಕೊಂದಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೩)
- ಭೂಮಿಗಳ್ಳನ ಕೊಂದು ಬಳಲಿ ತೆರೆದೆಯೊ ಬಾಯ
- ಏನು ಕಾರಣ ಬಾಯ ತೆರೆದಿ (ಬೆ-೧೫೫-೧)
- ಗುಂಗಾಡಿ ಸೋಮನ ಕೊಂದು ವೇದವನು ಬಂಗಾರದೊಡಲನಿಗಿತ್ತಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೧)
- ಚಿನ್ನದ ಕಣ್ಣನ ಕೊಂದು ಭೂಮಿಯ ವನ್ನಜಸಂಭವನಿಗಿತ್ತಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೩)
- ಆವಿನ ಕಳ್ಳನ ಕೊಂದು ಭೂಮಿಯ ಅವನಿಯ ಸುರರಿಗಿತ್ತಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೬)
- ಮಾವ ಕಂಸನ ಕೊಂದು ಮನುಜ ವೇಷದಲಿ ಗಾಂಡೀವಿಯಾ ರಥದ ಬಂಡಿಯ ಬೋವ ನಾದೆ
- ನೀನಾವ ಬಾಂಧವನೊ (ಬೆ-೭೮-೧)
- ಮಲೆತು ಮಾವನ ಕೊಂದು ನಿಂದೆ ಇಂಥ ಇಳಿಯಬಾರದ ಭೂಮಿಗಿಳಿದ ನಾರಸಿಂಹ
- ಏನು ಕಾರಣ ಬಾಯ ತೆರೆದಿ (ಬೆ-೧೫೫-೨)
- ಕುಲವೈರಿಗಳ ಕೊಂದು ನಲಿದಾಡುತಿಹುದು
- ಬಲ್ಲವರು ಪೇಳಿರಿ (ಬೆ-೧೬೪-೨)
- ಅಂಧನೃಪಾಲನ ಕಂದಗಳೆಲ್ಲರ ಕೊಂದ್ಯೆವರ ಭಾವನ
- ಫುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೨)
- ಬೇರೊಂದು ರೂಪದಿ ಜನಿಸಿ ಖಳನ ಕೊಂದು ಧಾರಿಣಿಸುರರಿಗಿತ್ತನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೫)
- ಪೋದನೆಲ್ಲೆನುತ ಶರನಿಧಿಯೊಳಗೆ ಪೊಕ್ಕು ಮತ್ತಾದಿತ್ಯನಂ ಕೊಂದು ತಿಕ್ಕಿಮುಕ್ಕೆ
- ನೋಡಯ್ಯ ನಿನ್ನ ದಾಸರ (ಬೆ-೮೫-೧)
- ಸರಳಮಂಚದ ಮೇಲೆ ಮಲಗಿ ಪ್ರಾಣವ ಬಿಟ್ಟು ಕುರುಪನ ಕೊಂದವ ಭೀಷ್ಮನೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೨)
- ಬಗೆಯಿಂದ ಜೂಜಲಿ ಸೋಲಿಸಿ ರಾಯನ ಬಗೆದು ಕೊಂದವನು ಶಕುನಿಯೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೧)
- ಜಗವರಿಯಲು ಕುರುವಂಶಕೆ ಕೇಡನು ಬಗೆದು ಕೊಂದವನು ದ್ರೋಣನೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೩)
- ನೆಟ್ಟನೆ ರಣದೊಳು ಕಾದದೆ ಪ್ರಾಣವ ಬಿಟ್ಟು ಕೊಂದವನು ಕರ್ಣನೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೪)
- ವನದೇಶದಿ ಧುರಕೆ ನಿಂದವನೆಂದೆನೆ ಪೂತನಿ ಮೊಲೆಯ ಹರಿದು ಕೊಂದವನೆಂದು ಸ್ತುತಿಸಿದೆ ನಲ್ಲದೆ
- ನಿನ್ನ ನಾನೇನೆಂದೆನೊ ರಂಗಯ್ಯ (ಬೆ-೯೧-೨)
- ಕಲಿ ಭೀಮಸೇನನ ನುಡಿಕೇಳಿ ಪೊರಮಟ್ಟು ಕುಲವ ಕೊಂದವನು ಕೌರವನೋ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೬)
- ಬಂದಿದೆ ದೂರು ಬರಿದೆ ಪಾಂಡವರಿಗೆ ಕಾದಿಕೊಂದರು ಕೌರವರನೆಂಬಪಕೀರ್ತಿ
- ಬಂದಿದೆ ದೂರು ಬರಿದೆ (ಬೆ-೮೬-ಪ)
- ಸಂದೇಹವಿಲ್ಲ ಕೊಂದರೆ ಒಳಿತು ಕಾಯ್ದು ರೊಳಿತೆಂದೆನುತ ಕಂಗಳನು ಮುಚ್ಚೆ
- ವಾಸುದೇವಾಯ ನಮೋ (ಬೆ-೯೦-೮)
- ನಾಸಿಕದೊಳೊರ್ವಳ ಪೊತ್ತು ಮೆರೆದನು ಮುನೀಶರ ಶಾಪವಡೆಯೆ ಕೊಂದಾತನ
- ಸೀತಾಪತಿ ರಘುನಾಥ (ಬೆ-೧೦೦-೧)

- ಸಮರದಲ್ಲಖಿಳ ರಾಜರ ಕೊಂದೆ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೧)
- ಕರೆಯೆ ಕಂಬದಿ ಬಂದು ಹಿರಣ್ಯಕಶಿಪುವ ಕೊಂದೆ
- ಆ ವೇಳೆಯಲ್ಲಿ ಆರಾರ ಕಾಯ್ದೆಯೊ (ಬೆ-೬೬-೧)
- ಮೇದಿನಿಗೋಸುಗ ಕಾದಿ ಕಲಹದಿ ವಿರೋಧಿ ಕಳ್ಳರ ಕೊಂದೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೧೧)
- ಹರಿಯ ಸುತನಿಗೆ ಅಭಯವನಿತ್ತೆ ಹರಿಯ ಮಗನಾ ಕೊಂದೆ
- ಭವಭಯವಿನಾಶ ಭೋ (ಬೆ-೪೧-೧)

೧೨೪೭. ಕೊಲೆ - ಕಾರುಣ್ಯನಿಧಿ ಕಾಗೆನೆಲೆ ಯಾದಿಕೇಶವನ ಸೇರಿ ಭಜಿಸಿದವರಿಗೆ ಯಮನ ಕೊಲೆಯುಂಟೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೬)

೧೨೪೮. ಕೊಳ್ - ಹಣ್ಣು ಕೊಂಬುವ ಬನ್ನಿರಿ ಹರಿದಾಸರು ಹಣ್ಣು ಕೊಂಬುವ ಬನ್ನಿರಿ
- ಹಣ್ಣು ಕೊಂಬುವ ಬನ್ನಿರಿ (ಬೆ-೧೫೭-ಪ)
- ಹೊದ್ದಿ ಮೊಲೆಯನುಂಡವಳಸುವನೆ ಕೊಂಡ ಮುದ್ದುಗಾರ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೧)
- ಸುರಗಿರಿಯನು ಸುತ್ತಿಬಾಹನ ಕೈಯಲಿ ಹರಸಿ ದಾನವ ಕೊಂಡನ
- ರಾಜವದನೆ ಸುರರಾಜನ (ಬೆ-೯೭-೨)
- ಕೊಂಡು ದೂತರೆಳೆದು ಒಯ್ದು ಹಿಂಡಿಹಿಪ್ಪೆ ಮಾಡುವಾಗ
- ಏನು ಬರುವುದೋ ಸಂಗಡ (ಬೆ-೧೩೭-೧)
- ಮಂಡೆಯಲಿ ಕೊಂಡಾಂತು ಮೈ ಜುಮ್ಮು ತಾಳಲು
- ಸಿಂಗರದ ಸಿರಿಧರನೆ (ಬೆ-೧೬೭-೩)

೧೨೪೯. ಕೊಳ - ಅರವಿಂದವಿಲ್ಲದಿಹ ಕೊಳವು ತಾ ಕಂಗಳವು
- ಎನ್ನ ನುಡಿ ಪುಸಿಯಲ್ಲ (ಸ-೪೭-೧)
- ದಾರಿಹಿಡಿದು ಬರತಲೊಂದು ಕೊಳವ ಕಂಡೆವೆ ನೋಡು
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೪)

೧೨೫೦. ಕೊಳಲು - ಕೊಂಕಲಿ ಕೊಳಲನೂದಿ ಗೊಲ್ಲ
- ನಾರಾಯಣನೆ ಈತ (ಸ-೧೩೮-೨)
- ಕರದಲ್ಲಿ ಕೊಳಲನೂದುತ ಪಾಡುತ ಸರಿಗಮಪದನಿ ಸ್ವರಗಳ ನುಡಿಸುತ
- ಯಾದವರಾಯ ಬೃಂದಾವನದೊಳು (ಸ-೨೨೦-೧)

೧೨೫೧. ಕೊಳೆ - ಮಕ್ಕಳಿಲ್ಲದ ನಾರಿ ಕೊಳೆತ ತೆಂಗಿನಕಾಯಿ
- ಅಹುದಾದರಹುದೆನ್ನಿ (ಬೆ-೧೩೧-೩)

೧೨೫೨. ಕೊಳ್ಳಿದೆವ್ವ - ಕೊಳ್ಳಿ ದೆವ್ವಗಳಂತೆ ಅಲೆದಾಡುತಿರುವಂಥ ಸುಳ್ಳು ಮನುಜರ ಹೊರಲಾರೆನೆಂದು ನಡುಗಿದೆಯ
- ಏಕೆ ನಡುಗಿದೆ ತಾಯೆ (ಸ-೫೬-೩)

೧೨೫೩. ಕೋ - ಭೂಕಾಂತೆಯ ಸೊಸೆ ಯರನೆತ್ತಿ ಬಲುಹಿಂದೆ ನೂಕಿ ತಂದ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೪)
- ಸಾಸಿರ ನಾಮಕೆ ಹೆಸರಾದ ಚಪ್ಪನ್ನ ದೇಶದಾರಿಗಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೩)

೧೨೫೪. ಕೋಗಿಲೆ - ಗಿಳಿ ನವಿಲು ಕೋಗಿಲೆ ವಸಂತ ಭ್ರಮರಂಗಳ ಬಲದೊಡನೆ ಮದನ ಮಾರ್ಗವ ಕಟ್ಟಲು
- ಪಥ ನಡೆಯದಯ್ಯ (ಬೆ-೯-೧)
- ಮೂಡುಗಡೆ ಮುಗಿಲು ಕೆಂಪಾದುದಡವಿಯ ತಾಮ್ರಚೂಡ ಕಾಳೋದರವು ಕೋಗಿಲೆಗಳುಲಿ ಯುತಿರೆ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೧)

೧೨೫೫. **ಕೋಟಲೆ** – ನೊಂದೆ ನಾನು ಸತ್ತು ಹುಟ್ಟುವ ಕೋಟಲೆಗಳಿಂದ
– ಮುಂದೆ ದಯವಿರಲಿ ಶ್ರೀಹರಿಯೆ (ಸ–೨೧೪–೮)
– ನಾಯ ಬಾಯ ಅರಿವೆಯಂತೆ ನಾನಾ ಕೋಟಲೆಯಲಿ ಬಿದ್ದು ಬಾಯ ಬಾಯ ಬಿಡುತಲಿ ಸಾವುದೇನೊ ನೀ ನೋವುದೇನೊ
– ದಾಸನಾಗೋ ಭವಪಾಶ ನೀಗೋ (ಬೆ–೨೦–೩)
– ನೊಂದೆನಾ ಸತ್ತು ಹುಟ್ಟುವ ಕೋಟಲೆಗಳಿಂದ
– ನೊಂದೆನಾ ಹರಿಯೆನ್ನದೆ (ಬೆ–೧೩–೮)

೧೨೫೬. **ಕೋಟಿ** – ಪ್ರಳಯ ಕೋಟಿ ಪ್ರಾಣಿಗಳಿಗೆ ಹೊಳವುಗಾಣಲೀಸದಂತೆ ಬೆಳೆದು ಹೋಗುವ ಗತಿಯೆಂಬುದಿತ್ತಲರಸುತ
– ಎರಡು ಸಾವಿರದ ಜಿಹ್ವೆಯುರಗ (ಸ–೪೮–೭)
– ಬ್ರಹ್ಮಾಂಡ ಕೋಟಿ ತಿಮಿರವ ಗೆಲುವವನ ಒಮ್ಮೆ ನೆನೆಯಲು ಪ್ರಸನ್ನನಾದವನ
– ನೆನೆಯಬಾರದೆ ಮನವೆ ಪರಮಪಾವನನ (ಸ–೧೫೨–೨)
– ಕಮಲ ಬ್ರಹ್ಮಾಂಡ ಕೋಟಿ ಒಡಲೊಳು ತಾಳ್ದಂಥ ರಮಾಧವ ನಿಮಗೆ ನೀರೊಳಗೆ ವಾಸವಾಯಿತು
– ನಮಗೆಲ್ಲ ಮನೆಗಳಯ್ಯ (ಸ–೧೩೨–೮)
– ನೆಲೆಯ ಸರ್ವರಿಗನುಭವವ ಕೋಟಿ ಮನೋಹರುಷವನ್ನು ನಮಗಿತ್ತ ವೈಭವವ
– ಕೈಯ ತೋರಿದ ಬಗೆಯ (ಸ–೯೧–೪)
– ಸಾಸಿರಕೋಟಿ ಸುರರ ಪೊರೆವ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೩)
– ಸೋಮನ ಜನಕನ ಸತಿಯ ಧರಿಸಿದನ ರೋಮಕೋಟಿಯೊಳಿಟ್ಟಿಹನ
– ಹರಿಮುಖಿ ಹರಿವಾಣಿ (ಬೆ–೯೮–೨)
– ಪ್ರಣವ ಒಂದು ಕೋಟಿ ನುಂಗಿ ಉಗುಳಿ ತಿಪ್ಪುದೋಂ ಎಂದು
– ಎರಡು ಸಾವಿರದ ಜಿಹ್ವೆಯುರಗ (ಸ–೪೮–೩)
– ಸಂಕೆಕಾರ ಶತ್ರುಮಿತ್ರರಿಬ್ಬರಿಗಾಧಾರವೆಂದು ಕುಂಕರದಿಪ್ಪತ್ತೊಂದು ಕೋಟಿ ಪಾಶವು
– ಎರಡು ಸಾವಿರದ ಜಿಹ್ವೆಯುರಗ (ಸ–೪೮–೫)
– ಪೊಸರನ ಜನಕನೇ ಶತಕೋಟಿತರಣಿಪ್ರಕಾಶ ಅಗಣಿತಕೋಟಿಬ್ರಹ್ಮಾಂಡನಾಯಕನೆ
– ಪೊಸರನ ಜನಕನೇ (ಬೆ–೧೬೮–೫)
– ಬೀಜಾಕ್ಷರದ ಕೀರ್ತನೆಗೈಯ್ದು ಇನಕೋಟಿ ತೇಜನೊಲಿದುಪ್ಪವಡಿಸಯ್ಯ ಹರಿಯೆ
– ತಂಗದಿರನನಿಮಿಷ ತಾರಕೆಗಳು (ಬೆ–೧೬೯–೬)
– ಸಿದ್ಧರೊಳು ನವಕೋಟಿಯೊಳಗೊಬ್ಬನೋ ನೀನು
– ಮೆರೆಯದಿರು ಮೆರೆಯದಿರು (ಬೆ–೧೪೮–೫)
– ವನಜಜಾಂಡದ ಕೋಟಿಯುದರಂಗೆ ಆವುದನು ಉಣಿಸಿ ತೃಪ್ತಿಯ ಮಾಡಲಿ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೩)
– ಮರೆದಿರಲಾರೆನೆನ್ನ ಪ್ರಾಣವಲ್ಲಭ ದಿನಕರ ಕೋಟಿಕಿರಣ ಪ್ರಕಾಶವುಳ್ಳವನ
– ಕರೆತಾರೆ ಕಾಮಿನಿಕಮಲಜಪಿತನ (ಬೆ–೯೩–೮)
– ಮೇಣದಹಿಕೋಟಿ ದಳ್ಳುರಿಯ ಗರುಡನ ಕೂಡ ತ್ರಾಣದಿಂ ಕಾದಿ ಜಯಿಸುವುದೆ ಹೇಳಾ
– ಬೇಡ ಬೇಡ ಎಲೆಲೆ ದುರಿತಗಳಿರ (ಬೆ–೨೯–೨)
– ಚಿತ್ತಜಕೋಟಿ ಲಾವಣ್ಯಮುಪ್ಪುರದೊಳು ಉತ್ತಮ ಸ್ತ್ರೀಯರ ವ್ರತವಳಿದೆ
– ನಿನ್ನ ನಾನೇನೆಂದೆನೊ ರಂಗಯ್ಯ (ಬೆ–೯೧–೩)
– ಅಪರಾಧದ ಕೋಟಿ ತ್ಯಜಿಸಬೇಕಾದರೆ ಶಿವ ಶಿವ ಎನ್ನಿರೊ
– ಶಿವ ಶಿವ ಶಿವ ಎನ್ನಿರೊ (ಬೆ–೩_೩)
– ರವಿ ಕೋಟಿ ತೇಜ ಪ್ರಕಾಶೆ ಮಹಾ ಕವಿಜನರ ಹೃತ್ಕಮಲವಾಸೆ
– ವರವ ಕೊಡು ಎನಗೆ ವಾಗ್ದೇವಿ (ಬೆ–೨_೩)
– ರಮಣಿ ಕೇಳೆಲೆ ಮೋಹನ ಶುಭಕಾಯನ ಅಮರವಂದಿತ ರವಿಶತಕೋಟಿತೇಜನ
– ರಮಣಿ ಕೇಳೆಲೆ ಮೋಹನ (ಬೆ–೯೬–೫)

- ರೋಮರೋಮಕೆ ಕೋಟಿ ಲಿಂಗವೆನಿಸಿದ ಹನುಮ ಗ್ರಾಮಗಳ ಕಾಯ್ದುಕೊಂಡಿಹುದೆ ಗತಿಯಾಯ್ತು
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೧೯-೧)
- ಹರಿಯನಗ್ರಜಕೋಟಿ ತೇಜನ ಹರಿಯ ವದನನೆಂಬ
- ಭವಭಯವಿನಾಶ ಭೋ (ಬೆ-೪೧-೧)
- ಕಮಲನಾಭನ ಕಮಲಸಖ ಕೋಟಿತೇಜನ
- ಕಾವನಯ್ಯನ ಕಳುಹು (ಬೆ-೧೫೩-೨)
- ಕಡಹಾಯಿಸೊ ಕಮಲಲೋಚನನೆ ಎನ್ನ ತಡಿಯ ಸೇರಿಸೊ ತರಣಿಶತಕೋಟಿತೇಜ
- ಕಡಹಾಯಿಸೊ ಕಮಲಲಲೋಚನನೆ (ಬೆ-೬೨-ಪ)
- ಕ್ಷೋಣಿಯೊಳು ಕ್ಷೀಣ ದೈವ ಬ್ರಹ್ಮಾಂಡ ಕೋಟಿಗಳು ದಾನವಾರಿಯ ದಾಸಗಳವಡವು ನಾನರಿವೆ
- ಬೇಡ ಬೇಡ ಎಲೆಲೆ ದುರಿತಗಳಿರ (ಬೆ-೨೯-೨)
- ತೆತ್ತೀಸ ಕೋಟಿ ದೇವರ್ಕಳು ತಾವಿರಲು ಒತ್ತಿನಲಿ ಇಂದ್ರ ಉಪೇಂದ್ರರಿರಲು
- ಆರು ಸಮಯಕ್ಕೊದಗಲಿಲ್ಲ (ಬೆ-೩೨-೪)

೧೨೫೭. **ಕೋಡಗ** - ಕೋಡಗಗಳ ಕೂಡಿ ವನಕ್ಕೆ ಕೇಡು ತಂದ
- ನಾರಾಯಣನೆ ಈತ (ಸ-೧೩೮-೩)
- ಕೋಡಗ ಕೊರವನಿಗೆ ಸಿಲ್ಕಿ ಆಡಿದ ತೆರನಾಡಿದೆವೆ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೧೦)
- ಇರಿತಕೆ ಬೆದರುವ ಮದಕರಿ ಮರಿಯೆಂಬ ಕೋಡಗಮರಿ
- ಅಹುದಾದಡಹುದೆನ್ನಿ (ಬೆ-೧೩೨-೪)

೧೨೫೮. **ಕೋಡು** - ಘನ ಕೋಡುಕೊನೆಯಿಂದ ಧರಣಿ ತಂದಾತನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೧)
- ಉಂಡರೂ ದಣಿಯದು ಊರ ಸೇರದ ಪಕ್ಷಿ ಮಂಡೆಯ ಮೇಲೆರಡು ಕೋಡದಕೆ
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೩)

೧೨೫೯. **ಕೋಡುಗಲ್ಲು** - ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ ವನಿತೆಯನು ಬಿಟ್ಟು ತಪವಿರಲು ಬೇಡ
- ಸಂಸಾರವೆಂಬ ಸಾಗರವನು (ಬೆ-೧೮-೨)

೧೨೬೦. **ಕೋಣ** - ಕುರಿಕೋಣ ನೈವೇದ್ಯ ಧೂಪ ದೀಪಗಳಿಂದ ಪರಮ ಭಕ್ತಿಯ ಮಾಡಿ ಪೂಜಿಸುವರಯ್ಯ
- ಕಲಿಯೇರಿ ಬಂತು (ಬೆ-೧೩೦-೧೦)
- ಕೊಂಬುಹೋತು ಕುರಿ ಕೋಣನ ಬಲಿಗೊಂಬ ಡೊಂಬೆ ದೈವಗಳನು ಭಜಿಸದಿರು ಮನವೆ
- ದಾನ ಧರ್ಮವ ಮಾಡಿ ಸುಖಿಯಾಗು (ಬೆ-೧೯-೨)
- ಬಾಳುತಿಪ್ಪ ಕುರಿಯ ಕೋಣವ ಬೀಳುಬೀಳು ಕೊರಳ ಕೊಯ್ಸಿ
- ಕಣಿಯ ಹೇಳಬಂದೆ ನಾನು (ಬೆ-೭೨-೩)
- ಕ್ರೂರ ಶಾಸ್ತ್ರವನೋದಿ ಕುರಿ ಕೋಣವನೆ ಕಡಿದು ಘೋರ ನರಕದಿ ಬೀಳುವುದನು ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೫)
- ಕ್ಷೀಣ ಶಾಸ್ತ್ರಾರ್ಥವ ಪರಿಗ್ರಹಿಸುತೆ ಕುರಿ ಕೋಣಗಳ ತಲೆ ಚೆಂಡನಾಡಿ
- ಗೋವಿಂದ ಗೋವಿಂದ ಎನ್ನಲರಿಯದೆ (ಬೆ-೧೬-೧)

೧೨೬೧. **ಕೋಣ** - ಜ್ಞಾನಶೂನ್ಯ ಮದವೇರಿದ ಸೊಕ್ಕಿದ ಕೋಣಕೆ ಹುಟ್ಟಿದ್ದೆ
- ಛೀ ನಿನ್ನ ಮೋರೆ ಮೇಲೆ (ಸ-೧೦೦-೩)

೧೨೬೨. **ಕೋತಿ** - ಅಡವಿ ಕೋತಿಗಳ ಕೂಡುತಿದೆ ಚೆಲ್ವ ಮಡದಿಯರನು ಹಿಡಿದೆಳೆಯುತಿದೆ
- ಮಗುವಿನ ಮರುಳಿದು ಬಿಡದಲ್ಲ (ಸ-೧೯೮-೨)

೧೨೬೩. **ಕೋನೇರಿ** - ಜಗದಂತರ್ಯಾಮಿ

ಎಂತೆಂದು ನಿನ್ನ ನಿಗಮ ಸಾರುವ ಮಾತು ಮುಸಿಯೆ ಕೋನೇರಿ ತಿಮ್ಮ
- ಜಗದಂತರ್ಯಾಮಿ ಎಂತೆಂದು (ಬೆ-೫೮-೪)

೧೨೬೪. **ಕೋಪ** - ಚಂಚಲತ್ವ ಬಲವು ಫಲವು ಜಾಲ ಕೋಪ ತಾಪದಿಂದ ವಂಚನಾರ್ಥ ಹಲವು ಕೆಲವು ಮಿಂಚಿನಂತೆ ಸುಳಿಸುತ
- ಅಹಹ ಮೋಸಹೋದೆನಯ್ಯ (ಸ-೯-೨)
- ಘನ ಕೋಪದಿ ದಶಶಿರನ ಕತ್ತರಿಸಿದ ಇನಕುಲ ರಾಮನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಯ್ಯೋ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೭)
- ಕೋಪವನ್ನೆ ಮಾಡದಿರು ಪಾಪಕ್ಕೆ ಗುರಿಯಾಗದಿರು
- ಸಾರಿ ದೂರಿ ಹೇಳುತೇನೆ (ಸ-೨೪೮-೧)
- ಕೋಪಾವೇಶದಲಿ ದುಃಶಾಸನನನು ಸೀಳಿ ಭೂಪರ ಬಲದೊಳಗೆ ಜರಜರೆದು ಕರೆದವನ
- ಪರಮ ಪದವಿಯನೀವ ಗುರು ಮುಖ್ಯ ಪ್ರಾಣನ (ಬೆ-೭-೨)
- ಕಡುಕೋಪದಿಂ ಖಳನು ಖಡುಗವನು ಪಿಡಿದು ನಿನ್ನೊಡೆಯನೆಲ್ಲಿಹನೆಂದು ನುಡಿಯೆ
- ಬಾಗಿಲನು ತೆರೆದು ಸೇವೆಯನು (ಬೆ-೪೬-೨)
- ದಶಕಂಠನನುಜನು ಜಾನಕಿಯ ಬಿಡಹೇಳೆ ಅಸುರ ಕೋಪವ ತಾಳಿ ಅಟ್ಟಲಾಗ
- ಬ್ರಹ್ಮ ಆಚಿತವ ಮೀರಿ ಬಾಳ್ವರು (ಬೆ-೨೫-೪)
- ಜಡಿವ ಕೋಪಕೆ ಶಾಪವಡೆದುಕೊಂಡಾಕ್ಷಣ ನುಡಿದ ದಿನವು ದಾಟಲು
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೩)
- ಕೋಪದಲಿ ದುರ್ವಾಸ ಋಷಿಯೊ ನೀನು
- ಬೆರೆಯದಿರು ಬೆರೆಯದಿರು (ಬೆ-೧೪೩-೧)
- ಸಾಲದವರೊತ್ತಿದಾಗ ಚಾಡಿಮಾತಿಗೆ ಮೋಹಿಸಿ ಗೋಳುಗೊಳಿಸುತ ಕೋಪದಲಿ ಇರುವಾಗ
- ಆರಿಗೆ ಆರಿಲ್ಲವಯ್ಯ (ಬೆ-೩೧-೨)

೧೨೬೫. **ಕೋಪಿ** - ಬಹು ಕೋಪಿಗಳಿದ್ದಲ್ಲಿ ಅನುಭವಗೋಷ್ಠಿಯ ಮಾಡಬಾರದು
- ವರಕವಿಗಳ ಮುಂದೆ ನರಕವಿಗಳ ವಿದ್ಯೆ (ಸ-೨೩೨-೧)

೧೨೬೬. **ಕೋಪಿಸು** - ಭರದಿಂದ ಭೃಗುಮುನಿ ಬಂದು ಕೋಪಿಸೆ ಬೇಗ ಚರಣವನೊತ್ತಿದನ
- ತೋರೆ ಬೇಗನೆ ಸಖಿ (ಬೆ-೯೪-೩)

೧೨೬೭. **ಕೋಮಲಕಾಯ** - ಕೋಮಲ ಕಾಯಂ ನಾಮಸುದೇವಂ ಭಜ ಸಖಿಸಿಂಹಂ ಭೂಸುರ ಶ್ರೇಷ್ಠಂ
- ಭಜರೇ ಹನುಮಂತಂ ಮಾನಸ (ಸ-೧೯೦-೧)

೧೨೬೮. **ಕೋಮಲೆ** - ಸಲಯ ಕಾಳಿಂಗನ ತಲೆಪಿಡಿದ ಕಂಗೊಲೆಯ ಮೊರೆ ಕೇಳಿ ಬಲಿಯ ಅವನ ಕೋಮಲೆಯ ಕಿವಿಗೆ ಪೂಮಾಲೆಯಾದ ನೀಟುಗಾಯ ನೆಲೆಯಾದಿಕೇಶವನ
- ನೆನೆಯೋ ಎಲೆ ಮನವೆ (ಸ-೧೫೩-೩)

೧೨೬೯. **ಕೋರಕ** (ಮೊಗ್ಗು) - ಕಮಲ ಕೋರಕದಿ ಜನಿಸಿದನಯ್ಯನ
- ಕಾವನಯ್ಯನ ಕಳುಹು (ಬೆ-೧೫೩-೨)

೧೨೭೦. **ಕೋರಿ/ ಕೋರೆ/ಕೋರೆದಾಡೆ** - ಕೋರಿಯಲಿ ತಿವಿದು ಹತ ಮಾಡ್ದಾ
- ನಾರಾಯಣನೆ ಈತ (ಸ-೧೩೮-೧)
- ತನ್ನ ಮುಂಗೋರೆಗಳ ಮಸೆದೊಡನೆ ರಕ್ಕಸನ ಬೆನ್ನಟ್ಟಿ ಬರಸೆಳೆದು ಸದೆದೊರಗಿಸಿ
- ನೋಡಯ್ಯ ನಿನ್ನ ದಾಸರ (ಬೆ-೮೫-೩)
- ರೂಢಿಯ ಕದ್ದುಕೊಂಡೋಡುವ ದೈತ್ಯ ನೀಡಿ ತಿವಿದು ಕೋರೆದಾಡೆಯಿಂದ
- ತಾಳಲ್ಲಲ್ಲಲ್ಲಯ್ಯೋ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೩)
- ಮೋರೆ ಕಪ್ಪಿನ ಭಾವ ಮೊರದಗಲದ ಕಿವಿ ಕೋರೆದಾಡೆಯನಾರಮ್ಮ
- ನಮ್ಮಮ್ಮ ಶಾರದೆ (ಬೆ-೧-೧)

೧೨೭೧. **ಕೋಲು** - ಪೆಗಲೊಳು ಕೊಂಬು ಕೋಲನೆ ಪಿಡಿದು ಗೊಲ್ಲರೊಡಗೂಡಿ ನಮ್ಮೆಲ್ಲರ ಗೋವುಗಳ ಕಾಯ್ದ
- ಮಗುವು ಕಾಣೇರಯ್ಯ (ಸ-೧೯೯-೪)
- ವೇಲಾಪುರದ ಚೆನ್ನಕೇಶವನ ಸೇವೆಗೆ ಆಲಸ್ಯ

ವನು ಮಾಡದೆ ಕೋಲಹಿಡಿದು ದ್ವಾರಪಾಲಕ ನಾಗುವೆ ನೀಲಕುಂತಳೆ ಕಲ್ಲ ಬಿಟ್ಟು ಆ ಕಡೆ ಸಾರೆ
- ನನ್ನವ್ವ ಕಲ್ಲಬಿಡೆ (ಸ-೧೩೦-೩)
- ಅಂಧನ ಕೈಯಲಿ ಕೋಲಿತ್ತು ಕರೆದೊಯ್ವ ಮುಂದಾಡಿ ತಪ್ಪಿ ಗುಂಡಿಗೆ ಕೆಡಹಲು
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೨)
- ಕಟ್ಟಿ ದೃಢಗೋಲಿಂದ ಕಾವ ನಮ್ಮಜ್ಜ
- ನಾವು ಕುರುಬರು (ಬೆ-೧೫೨-೨)

೧೨೭೨. **ಕೋವಿದ** - ಕುಂಜರದಗಮನೆ ಕೋವಿದನರಸಿ
- ಬೀಜ ಮೂರನು ಬಿತ್ತಿ (ಬೆ-೧೬೨-೧)
- ಮಾವನ ಮನೆಯೊಳಗೆ ಕೋವಿದರಿರ ಬಹುದೆ
- ಮಾವನ ಮನೆಯೊಳಗೆ (ಬೆ-೧೪೬-ಪ)
- ಕಾವನಯ್ಯನ ಕಳುಹು ರಮಣಿ ಕೋವಿದರು ಪಡೆವ ಬಾಡದಾದಿಕೇಶವನ
- ಕಾವನಯ್ಯನ ಕಳುಹು (ಬೆ-೧೫೩-ಪ)

೧೨೭೩. **ಕೋಳಿ** - ನಾ ಸಮಯದಿ ಮೂರು ರಾಯರ ಕಂಡೆ ಕುಪ್ಪುಸ ತೊಟ್ಟ ಕೋಳಿಯ ಕಂಡೆ
- ಲಟಪಟ ನಾ ಸಟೆಯಾಡುವನಲ್ಲ (ಬೆ-೧೫೯-೨)
- ಅರವಿಂದನಾಭ ಸಿರಿವಿಧಿಭವಾದಿಗಳೊಡೆಯ ಹಿರಿದಾಗಿ ಕೋಳಿ ಕೂಗಿತೇಳಯ್ಯ ಹರಿಯೇ
- ಏಳು ನಾರಾಯಣ (ಸ-೫೯-೨)

೧೨೭೪. **ಕೌಮುದಿ** - ಸಾರಿದವರ್ಗಿತ್ತೆ ಸುಧೆ ವಾರಿಜಾರಿ ಕೌಮುದಿ ವಾರಿಜಧರ ಮುದದಿ
- ಬಾರೊ ಭಾಗ್ಯದ ನಿಧಿಯೆ (ಸ-೧೮೭-ಅ)

೧೨೭೫. **ಕೌರವ/ಕೌರವೇಂದ್ರ/ಕೌರವೇಶ** - ಕುಶಲತನದಲಿ ಕೌರವಾದಿಗಳ ಸಂಹರಿಸಿದ ಸಹಾಯ ವೀರ ಶ್ರೀ ಭೀಮಸೇನನನಿಗೆ
- ಜಯಮಂಗಲಂ ನಿತ್ಯ (ಬೆ-೧೭೧-೨)
- ಬೇಸರದೆ ಕೌರವನ ಕೊಂದ ಪಾಂಡವರ ಸಂತೋಷದಲಿ ಪಕ್ಷಿಕರ ಮಾಡಿಕೊಂಡಿರ್ಪೆ
-ಆವುದೊಳ್ಳೆಯದೊ ನಿನ್ನಂಗ (ಬೆ-೬೮-೪)
- ಅನುವರದೊಳಾಯವನು ತೊಡೆಯ ಸನ್ನೆಯ ಮಾಡಿ ಅನಿಲಜನ ಕೈಲಿ ಕೌರವನ ಕೊಲ್ಲಿಸಿದೆ
- ನೀನಾವ ಬಾಂಧವನೊ (ಬೆ-೭೮-೮)
- ಪಡೆಯೊಳಗೆ ಕೌರವನು ನುಡಿಯೊಳಗೆ ಗಾಂಗೇಯನೊ
- ಬೆರೆಯದಿರು ಬೆರೆಯದಿರು (ಬೆ-೧೪೩-೨)
- ಹನುವೊಂದಕ್ಷೋಹಿಣಿ ಬಲವುಳ್ಳ ಕೌರವನು ರಣದೊಳಗೆ ತೊಡೆಮುರಿದು ಬಿದ್ದಿರ್ಪನಂತೆ
- ಆರಿಗಾದರು ಪೂರ್ವಕರ್ಮಬಿಡದು (ಬೆ-೧೦೮-೩)
- ಕಲಿ ಭೀಮಸೇನನ ನುಡಿಕೇಳಿ ಪೊರಮಟ್ಟು ಕುಲವ ಕೊಂದವನು ಕೌರವನೋ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೬)
- ಸಿರಿಯುಳ್ಳ ಪಾಂಡವರು ಕೌರವರು ತಾವೆಲ್ಲಿ ನೆರೆಗಲಿದ ವಾಲಿ ತಾನೆಲ್ಲಿ
- ಇರಬಂದುದಿಲ್ಲ ಸಂಸಾರ (ಬೆ-೧೧೩-೧)
- ಪುರಜನರು ಕೇಡು ಕೌರವಂಗೆಂದು ಮಾತಾಡಿ ನಿಶ್ಚೈಸಿ ಓಡಿ ಮನೆಗಳ ಪೊಕ್ಕರು
- ವಾಸುದೇವಾಯ ನಮೋ (ಬೆ-೯೦-೧೨)
- ಕೊಲಿಸಿ ಕೌರವರ ಕಾಳೆಗದಿ ಕೆಡಹಿದ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-೨)
- ಬಂದಿದೆ ದೂರು ಬರಿದೆ ಪಾಂಡವರಿಗೆ ಕಾದಿಕೊಂದರು ಕೌರವರನೆಂಬಪಕೀರ್ತಿ
- ಬಂದಿದೆ ದೂರು ಬರಿದೆ (ಬೆ-೮೬-ಪ)
- ಇಭಪುರಿಯನಾಳಿದ ನೃಪತಿ ಕೌರವೇಂದ್ರ ನರಸುತನವು ತೊಡೆಯದೆ
- ನಂಬಬೇಡಿ ಸಿರಿಯು ತನ್ನದೆ (ಬೆ-೧೧೫-೨)
- ಕೌರವೇಶನ ಅನುಜೆಯನಾಳಿದನ ಶಿರವನ್ನು ಭೇದಿಸಿ
- ಈತನೀಗ ವಾಸುದೇವನು (ಬೆ-೭೫-೧)

೧೨೭೬. **ಕೌಶಿಕ** - ಶುಕ ವ್ಯಾಸ ದುರ್ವಾಸ ಕುಂಭಸಂಭವರು ಕೌಶಿಕ ಪರಾಶರ ಅಂಬರೀಷ ಗೌತಮರು
- ಪೂಸರನ ಜನಕನೇ (ಬೆ-೧೬೮-೪)
- ಭೋಜ ವರಭೃಗು ಕಪಿಲ ಮಾರಹರ

ಗೌತಮಜಾನುಜ ಋಷಿ ಕೌಶಿಕ ವಸಿಷ್ಠ
- ತಂಗದಿರನನಿಮಿಷ ತಾರಕೆಗಳು
(ಬೆ-೧೬೯-೬)
- ವರಮುನಿಗಳು ಕೂಡಿ ಸರುವೋತ್ತಮ ನಾರೋ
- ಸಿಂಗರದ ಸಿರಿಧರನೆ (ಬೆ-೧೬೭-೪)

೧೨೭೭. **ಕೌಸಲ್ಯೆ** - ಅಂದು ಕೌಸಲ್ಯಗರ್ಭ ಚಂದ್ರಮನಾಗಿ ಬೆಳಗಿ ಕೊಂದೆ ರಾವಣ ಕುಂಭಕರ್ಣಾದಿಗಳನೆಲ್ಲ
- ಯಾದವಗಿರಿವಾಸನಹುದೋ
(ಸ-೨೧೯-೩)

೧೨೭೮. **ಕೌಸ್ತುಭ** - ಹರಿಯು ನೀನೆಂಬುದಕೆ ಸರಿಯು ಕೌಸ್ತುಭರತ್ನ ವರಪೀತವಸನ ಕ್ಷೀರಾಬ್ಧಿ ಹೊಣೆಯೊ
- ನಿನ್ನ ಮಹ ಮಹಿಮೆಗೆ (ಬೆ-೫೦-೧)
- ವರಕೌಸ್ತುಭವು ಕೊರಳಿನೊಳಗೆ ಇಪ್ಪವಗೆ ಆಭರಣವಾವುದ ತೊಡಿಸಲಿ
- ಆವ ಪರಿಯಲಿ ನಿನ್ನನೊಲಿಸಿ
(ಬೆ-೩೭-೨)

೧೨೭೯. **ಕೌಸ್ತುಭಭೂಷ** - ಪಕ್ಷಿವಾಹನ ವಿಷ್ಣು ಪಾಹಿ ಪರಮೇಶ ರಕ್ಷ ಕೌಸ್ತುಭಭೂಷ ವೈಕುಂಠ ವಾಸ
- ಲಾಲಿ ಪಾವನಚರಣ ಲಾಲಿ ಅಘಹರಣ
(ಸ-೨೨೯-೪)

೧೨೮೦. **ಕ್ರತು** - ಮಾರಣ ಕ್ರತು ಸಂಪೂರಣ ಕಂಸ ಸಂಹಾರಣ ಭುಜಬಲ ಗೋವಿಂದ
- ಪರಮಪುರುಷ ಹರಿ ಗೋವಿಂದ
(ಬೆ-೩೯-೮)

೧೨೮೧. **ಕ್ರಮ** - ಪೊಸ ಶಾಸ್ತ್ರಕ್ರಮ ಕೂಗೆ ಜಾರ ತಸ್ಕರ ತತಿಯು ಬಸವಳಿದು ಭಯದಿ ಪೋಗೆ
- ಸಿಂಗರದ ಸಿರಿಧರನೆ (ಬೆ-೧೬೭-೧)
- ಅಮರ ದೈತ್ಯರು ಕೂಡಿ ಅಂಬುಧಿಯ ಕಡೆಯಲಿಕೆ ಕ್ರಮದಿ ಮಂದರಕೆ ಕಟ್ಟಿದ ಶೇಷನ
- ನೋಡಯ್ಯ ನಿನ್ನ ದಾಸರ (ಬೆ-೮೫-೨)

೧೨೮೨. **ಕ್ರಮುಕ** (ಅಡಿಕೆ) - ಬಿರಿದ ಕೆಂಜಾಜಿಯ ನಾಗಸಂಪಿಗೆ ಕಸ್ತುರಿ ಕ್ರಮುಕ ದೆಸಳು ಮುಡಿವಾಳವನು
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ
(ಬೆ-೧೧-೩)

೧೨೮೩. **ಕ್ರಿಯೆ** - ನೀರ ಸಂಗವ ಬಿಟ್ಟು ಅಣಿಮುತ್ತಾದ ಕ್ರಿಯೆ ಸೇರಿದೆನೊ ನಿನ ಪಾದ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೫)

೧೨೮೪. **ಕ್ರೀಡೆ** - ನಾಡದೇವತೆಗಳ ಸೆರೆಗಳ ಬಿಡಿಸಿ ಕ್ರೀಡೆಯಾಯಿತು ನಿಮ್ಮ ದಯದಿಂದಲಿ
- ನಮಗೆಲ್ಲಿ ಮನೆಗಳಯ್ಯ (ಸ-೧೩೨-೩)

೧೨೮೫. **ಕ್ರೂರ** - ಕ್ರೂರ ಚಿತ್ರಗುಪ್ತನೊಡನೆ ಕಾರುಬಾರಿಗಿಳಿದ ಜಾರ ಕೃಷ್ಣನೆಂಬ ಸೊಕ್ಕಿದಾನೆ
- ಆನೆ ಬರುತಾದೆ ನೋಡಮ್ಮ (ಸ-೧೫-೧)
- ಕ್ರೂರ ಖಳನ ತರಿದು ಆ ಪಾಂಡವರ ಅರಣ್ಯದಿ ಪೊರೆದ
- ಮರೆಯದಿರು ಹರಿಯ (ಸ-೨೦೩-೨)
- ಮುನ್ನ ಕ್ರೂರಫಣಿಯ ಕೂಪದಂತೆ ಕೆಡಲು ಬೇಡ ಮನುಜ
- ಏನು ಬರುವುದೋ ಸಂಗಡ
(ಬೆ-೧೩೭-೨)
- ಸೊಕ್ಕಿನಡೆಯುವ ಭೃತ್ಯ ಅವ ಕ್ರೂರ ಕೃತ್ಯ
- ಅಹುದಾದರಹುದೆನ್ನಿ (ಬೆ-೧೩೧-೩)
- ಕ್ರೂರವಾದ ಫಣಿಪಬಾಣ ಭೋರ್ಗುಡಿಸು ತಿರಲು ಜಗಕೆ
- ಈತನೀಗ ವಾಸುದೇವನು (ಬೆ-೭೫-೨)
- ಕ್ರೂರ ಶಾಸ್ತ್ರವನೋದಿ ಕುರಿ ಕೋಣವನೆ ಕಡಿದು ಘೋರ ನರಕದಿ ಬೀಳುವುದನು ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೫)
- ಗನ್ನಗತಕವ ಮಾಳ್ಪ ಗ್ರಾಮಣ್ಯಗಳ ಕಲಿತ ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ
- ಕಲಿಯೇರಿ ಬಂತು (ಬೆ-೧೩೦-೭)

೧೨೮೬. **ಕ್ರೂರ** (ಕ್ರೂರನಾದ ವ್ಯಕ್ತಿ) - ಮುರುಡ ಕ್ರೂರನ ಉರವ ಸೀಳಿದ ವಿಪ್ರ ನೃಪಹರ ಧರಣಿಜಯವರ ಕೃಷ್ಣ
- ಇಂದು ನೀ ಕರೆದುತಾರೆ (ಬೆ-೯೨-೩)

೧೨೮೭. **ಕ್ರೋಡದಂಷ್ಟ್ರಜೆ** (ತುಂಗಭದ್ರೆ) - ಕ್ರೋಡದಂಷ್ಟ್ರಜೆ ಕೃಷ್ಣವೇಣಿಯು ವರುಣೆ ಕೂಡಿ ಗಂಗಾಸ್ನಾನಗಳ ಮಾಡಲು

– ತಂಗದಿರನನಿಮಿಷ ತಾರಕೆಗಳು (ಬೆ–೧೬೯–೧)

೧೨೮೮. ಕ್ರೋಧ – ಕಾಮ ಕ್ರೋಧ ಬಿಡಿಸಿ ನಿನ್ನ ನಾಮ ಜಿಹ್ವೆಯೊಳಗೆ ನುಡಿಸು ಶ್ರೀಮಹಾನುಭಾವನಾದ ದಾಮೋದರಾ
– ಈಶ ನಿನ್ನ ಚರಣ ಭಜನೆ (ಬೆ–೬೫–೧೧)
– ಸಾದರಣೆಯಿಂದ ತಿಳಿದು ನಿಶ್ಚಯವಾಗಿ ಕ್ರೋಧಕರ್ಮಗಳೆಲ್ಲ ಬಿಟ್ಟು ಹೋಗುವ ಹಾಗೆ
– ನನ್ನವ್ವ ಕಲ್ಲಬಿಡೆ (ಸ–೧೩೦–೨)
– ಬಿನ್ನಣ ಮಾತುಗಳು ಮತ್ತು ಘನ್ನ ಮತ್ಸರ ಕ್ರೋಧಗಳು ಅನ್ಯಾಯದಿಂದಲಿ ಅರ್ಥವ ಗಳಿಸುವರು
– ಕಲಿ ಹೆಚ್ಚಿ ಬಂದಿತಲ್ಲ (ಸ–೭೮–೩)

೧೨೮೯. ಕ್ರೋಧಿ – ಘೋರದಿಂದಿಹ ಕಾಮಿ ಕ್ರೋಧಿ ನಾನು
– ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ–೬೩–೪)
– ಕ್ರೋಧಿಯಸುವೀಂಟಿ ತ್ರಿಪುರವ ಮುರಿದು ಹಯವೇರು
– ಸಿಂಗರದ ಸಿರಿಧರನೆ (ಬೆ–೧೬೭–೫)

೧೨೯೦. ಕ್ಲೇಶ – ಬೆಂದವು ಭವ ಪಾಶಾ ಅವಗೆಂದಿಗಿಲ್ಲ ಕ್ಲೇಶಾ
– ಮರೆಯದಿರು ಹರಿಯ (ಸ–೨೦೩–೩)
– ಆಶಾಕ್ಲೇಶ ದೋಷವೆಂಬ ಅಬ್ಧಿಯೊಳು ಮುಳುಗಿ ಯಮನ
– ದಾಸನಾಗೋ ಭವಪಾಶ ನೀಗೋ (ಬೆ–೨೦–ಅ)

೧೨೯೧. ಕ್ಲೇಶಗೊಳಿಸು – ಭಾಷೆಯ ಕೊಟ್ಟು ನಿರಾಶೆಯ ಮಾಡಿದ ಫಲ ಕ್ಲೇಶಗೊಳಿಸದೆ ಬಿಟ್ಟೀತೆ
– ಕೇಶವನೊಲುಮೆಯು ಆಗುವ ತನಕ (ಸ–೮೯–೧)

೧೨೯೨. ಕ್ಲೇಶಗೊಳು/ಕ್ಲೇಶಬಡು – ಅತಿಕ್ಲೇಶ ಗೊಳುತಿಹರು ವಿದುರ ಭೀಷ್ಮಾದಿಗಳು
– ವಾಸುದೇವಾಯ ನಮೋ (ಬೆ–೯೦–೩)
– ವಿಷಯದೊಳಗೆ ಕ್ಲೇಶಬಟ್ಟು ವಿಷಯದಿಚ್ಛೆ ಬಿಡದ ಮನಕೆ
– ಎಷ್ಟು ಪ್ರೀತಿಯೊ ಮನಕೆ (ಸ–೫೨–೧)

೧೨೯೩. ಕ್ಷತ್ರಿಯ – ಕ್ಷತ್ರಿಯರ ಚಟುಲ ಛಲದಿ ಒಗೆದು ಕರುಳ ಬಗೆದು ತುಳಿದದಟರನು ಸಂಹರಿಸಿದ ಚೆಲವರಾಯ
– ಯಾದವಗಿರಿವಾಸನಹುದೋ (ಸ–೨೧೯–೨)
– ತಾಮಸವಿಲ್ಲದೆ ಕ್ಷತ್ರಿಯರ ಸಂಹರಿಸಿದ ರಾಮ ಭಾರ್ಗವನೆಂಬ ಮಾಸಾಳಮ್ಮ
– ತಾಳಲ್ಲಲ್ಲಲ್ಲೋ ಮಾಸಾಳಲ್ಲಲ್ಲಲ್ಲೋ (ಸ–೧೧೦–೬)
– ಮುನಿಯ ಮಗನಾಗಿ ಕ್ಷತ್ರಿಯರ ಕಾಡ್ದಾ
– ನಾರಾಯಣನೆ ಈತ (ಸ–೧೩೮–೧)
– ಛಲದಿಂದ ಕ್ಷತ್ರಿಯರ ಕೊಲಲು ತೆರೆದೆಯೊ ಬಾಯ
– ಏನು ಕಾರಣ ಬಾಯ ತೆರೆದಿ (ಬೆ–೧೫೫–೨)
– ಮನ್ನಿಸಲ್ಯೆದಿ ಅರ್ಭಕನ ಅಡಿಯಿಟ್ಟಳೆಯೆ ಭೂಮಿಯನು ಕ್ಷತ್ರಿಯರ ಶಿರವ ತಡೆಗಡೆಯೆ
– ಪೂಸರನ ಜನಕನೇ (ಬೆ–೧೬೮–೫)
– ಧರೆಯ ದಾನವ ಬೇಡಿ ನೆಲವ ಮೂರಡಿ ಮಾಡಿ ಪರಶುವಿಡಿದು ಕ್ಷತ್ರಿಯರ ಸವರಿ
– ನಿನ್ನ ನಾನೇನೆಂದೆನೊ ರಂಗಯ್ಯ (ಬೆ–೯೧–೨)

೧೨೯೪. ಕ್ಷಮಿಸು – ಕ್ಷಮಿಸುವುದೆನ್ನ ತಪ್ಪುಗಳ ಸ್ವಾಮಿ ಕ್ಷಮಿಸುವುದು ದಾಸೋಹಂ ಬಿರುದಿನೊಳು
– ಕ್ಷಮಿಸುವುದೆನ್ನ ತಪ್ಪುಗಳ (ಬೆ–೬೧–ಪ)

೧೨೯೫. ಕ್ಷಮೆ (ಭೂಮಿ) – ಕ್ಷಮೆಯನಳೆಯೆ ಬ್ರಹ್ಮಚಾರಿಯಾದೆ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೧)
– ಅಮರವೈರಿಯ ಕರುಳ ಕಿತ್ತಿ ಕಡಿದಾ ಹತಿಯೊ ಕ್ಷಮೆಯನಳೆದಾ ಪಾದಕಮಲ ನೊಂದುವೊ ರಂಗ
– ಏಕೆ ನೀನಿಲ್ಲಿ ಪವಡಿಸಿದೆ (ಬೆ–೬೪–೧)

೧೨೯೬. ಕ್ಷಯ – ಎರವಿನ ಮಾತಾಪಿತರನುಜರೆಂಬ ಉರಿಕಾವು ಕ್ಷಯವೆಂಬ ಸರಿಗಳನು ವಂದಿಸುವೆನು
– ಎಂತಹುದೊ ನಿನ್ನಯ ಭಕುತಿ (ಸ–೪೧–೪)

- ಮತಿಗೇಡಿ ಮೂರ್ಖನಿಗೆ ಕ್ಷಯರೋಗ ಇದು ಕ್ಷಿತಿಯೊಳಗೆ ಸಿದ್ಧಾಂತ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೨)

೧೨೯೭. ಕ್ಷಾತ್ರ (ಕ್ಷತ್ರಿಯ) - ಬಲಿಯೊಳು ದಾನವ ಬೇಡಿದನೆ ಕ್ಷಾತ್ರಕುಲವ ಬಿಡದೆ ಕ್ಷಯ ಮಾಡಿದನೆ
- ರಾಮ ಗೋವಿಂದ ಹರೆ (ಬೆ-೪೦-೨)
- ಕುಂಭಿನಿ ದಾನವ ಬೇಡಿದನೆ ಕ್ಷಾತ್ರ ರೆಂಬವರನು ಹತಮಾಡಿದನೆ
- ಗೋವಿಂದ ಹರಿ ಗೋವಿಂದ (ಬೆ-೫೬-೨)

೧೨೯೮. ಕ್ಷಿತಿ - ಮತಿಗೇಡಿ ಮೂರ್ಖನಿಗೆ ಕ್ಷಯರೋಗ ಇದು ಕ್ಷಿತಿಯೊಳಗೆ ಸಿದ್ಧಾಂತ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೨)
- ಕ್ಷಿತಿಯೊಳಗೆ ಕಾಗಿನೆಲೆಯಾದಿಕೇಶವನಾದ ಪತಿತಪಾವನ ಪರಮ ಪುರುಷೋತ್ತಮನನು
- ನಂಬು ನಾರಾಯಣನ (ಬೆ-೫೩-೩)
- ಕ್ಷಿತಿಯೊಳು ರಾವುತನಾದ ಬಾಡದಾದಿ ಕೇಶವನ ತಂದು ತೋರೆ
- ಹರಿಮುಖ ಹರಿವಾಣಿ (ಬೆ-೯೮-೩)
- ಕ್ಷಿತಿಯೊಳು ಬಾಡದ ಆದಿಕೇಶವ ಜಗತ್ಪತಿಯ ಧ್ಯಾನಿಪಗೆ ಸದ್ಗತಿಯಿರದೆ ಹೋಹುದೆ
- ಮಗನಿಂದೆ ಗತಿಯುಂಟೆ (ಬೆ-೧೪೫-೫)
- ಜತೆ ಅಳಿಯರು ಬ್ರಹ್ಮ ಮನ್ಮಥರಿವರಿರಲು ಕ್ಷಿತಿಯೊಳಗೆ ಶಶಿ ತಾನು ಹತವಹ ಸಮಯದಲಿ
- ಆರು ಸಮಯಕ್ಕೊದಗಲಿಲ್ಲ (ಬೆ-೩೨-೩)
- ಶೇಷಾದ್ಯಾರಾಧ್ಯನು ಕ್ಷಿತಿಗಧಿಕ ವೇಲಾ ಪುರದ ಪತಿ ವೈಕುಂಠ ಕೇಶವನು
- ಮಗುವು ಕಾಣೀರಯ್ಯ (ಸ-೧೯-೫)

೧೨೯೯. ಕ್ಷೀಣ - ಕ್ಷೀಣ ಶಾಸ್ತ್ರಾರ್ಥವ ಪರಿಗ್ರಹಿಸುತೆ ಕುರಿ ಕೋಣಗಳ ತಲೆ ಚೆಂಡನಾಡಿ
- ಗೋವಿಂದ ಗೋವಿಂದ ಎನ್ನಲರಿಯದೆ (ಬೆ-೧೬-೧)
- ಕ್ಷೋಣಿಯೊಳು ಕ್ಷೀಣ ದೈವ ಬ್ರಹ್ಮಾಂಡ ಕೋಟಿಗಳು ದಾನವಾರಿಯ ದಾಸಗಳವಡವು ನಾನರಿವೆ
- ಬೇಡ ಬೇಡ ಎಲೆಲೆ ದುರಿತಗಳಿರ (ಬೆ-೨೯-೨)
- ಕ್ಷೀಣದೇಹವ ಬಿಡುವೆನೆಂದು ಪಾಡಂಪಟ್ಟು ತ್ರಾಣದಲಿ ಗರಳತೈಲವ ಸೇವಿಸೆ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೪)

೧೩೦೦. ಕ್ಷೀರ - ಕಾರಣಾತ್ಮಕ ಕಾಗಿನೆಲೆ ಯಾದಿಕೇಶವ ಕ್ಷೀರ ಬೆಣ್ಣೆಯ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೫)
- ನೂರೆಂಟು ಕೆಳದಿಯರು ನಾವು ಕ್ಷೀರ ಮಾರಿಕೊಂಡು ಬರುತ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೪)
- ಪಶುವಿನ ಮಾಂಸದೊಳುತ್ಪತ್ತಿ ಕ್ಷೀರವ ವಸುಧೆಯೊಳಗೆ ಭೂಸುರರುಣ್ಣರೇನಯ್ಯ
- ಕುಲ ಕುಲ ಕುಲವೆನ್ನುತಿಹರೊ (ಬೆ-೧೨೦-೧)
- ಕ್ಷೀರದೊಳದ್ದು ನೀರೊಳಗದ್ದು ಗೋವಿಂದ ಹೇರನೊಪ್ಪಿಸಿದ ಮೇಲ್ ಸುಂಕವೇತಕೆ ದೇವ
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೪)
- ಕ್ಷೀರದೊಳಗದ್ದು ನೀರೊಳಗದ್ದು ನೀನೆ ಗತಿ ನಾರಾಯಣನೆ ರಕ್ಷಿಸೈ
- ವಾಸುದೇವಾಯ ನಮೋ (ಬೆ-೯೦-೫)

೧೩೦೧. ಕ್ಷೀರವಾರಿಧಿ/ಕ್ಷೀರಾಂಬುಧಿ/ಕ್ಷೀರಾಬ್ಧಿ
- ಕ್ಷೀರವಾರಿಧಿ ವೈಕುಂಠ ನಗರಿಯನು ಸೇರಿಸಿದ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೫)
- ಪರಮಪದದೊಳಗೆ ವಿಷಧರನ ತಲ್ಪದಲಿ ನೀ ಸಿರಿಸಹಿತ ಕ್ಷೀರವಾರಿಧಿಯೊಳಿರಲು
- ಬಾಗಿಲನು ತೆರೆದು ಸೇವೆಯನು (ಬೆ-೪೬-೧)
- ಅಳೆದು ನೋಡಿದರೆ ಕ್ಷೀರಾಂಬುಧಿಗೆ ಇಮ್ಮಿಗಿಲು
- ನೊಂದೆನಾ ಹರಿಯೆನ್ನದೆ (ಬೆ-೧೩-೩)
- ಹರಿಯು ನೀನೆಂಬುದಕೆ ಸರಿಯು ಕೌಸ್ತುಭ

ರತ್ನ ವರಪೀತವಸನ ಕ್ಷೀರಾಬ್ಧಿ ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ–೫೦–೧)
– ಹನಿ ನೆಲಕೆ ಬಿದ್ದುದು ಕೂಡಿ ಅಳೆಯೆ ಕ್ಷೀರಾಂಬುಧಿಗೆ ಇಮ್ಮಿಗಿಲೊ
– ಮುಂದೆ ದಯವಿರಲಿ ಶ್ರೀಹರಿಯೆ (ಸ–೨೧೪–೪)

೧೩೦೨. ಕ್ಷುದ್ರ – ಕ್ಷುದ್ರ ಮಾನವ ನಿನ್ನ ಸಿರಿಯ ಹವಣೇನು
– ಮೆರೆಯದಿರು ಮೆರೆಯದಿರು (ಬೆ–೧೪೮–೫)
– ಭೇದವೆಣಿಸಿ ಬಲು ಕ್ಷುದ್ರವ ಕಲಿತರೆ ಮೋದ ವೆಂದಿಗೂ ಆದೀತೆ
– ಕೇಶವನೊಲುಮೆಯು ಆಗುವ ತನಕ (ಸ–೮೯–೫)

೧೩೦೩. ಕ್ಷೇತ್ರ – ಪಡೆದ ದ್ರವ್ಯವೆಲ್ಲ ವಸ್ತು ಕ್ಷೇತ್ರಂಗಳ ಕಾಣದೆ ನಿತ್ಯ ನಡೆದುದ ವಿಸ್ತರಿಸಲಾರೆ ನೀಲಮೇಘಶ್ಯಾಮ ನಿನ್ನ
– ದಾಸಾರ್ಯರ ದಾಸರ ದಾಸ (ಸ–೧೯೯–೨)

೧೩೦೪. ಕ್ಷೂಣ (ಕೊರತೆ) – ಕ್ಷೂಣವಿಲ್ಲದೆ ತಾಯ ಶಿರವರಿದು ತಂದೆಯನು ಪ್ರಾಣಹತ್ಯವ ಮಾಡಿದರ ಕುಲವನು
– ನೋಡಯ್ಯ ನಿನ್ನ ದಾಸರ (ಬೆ–೮೫–೬)

೧೩೦೫. ಕ್ಷೋಣಿ – ಕ್ಷೋಣಿಯೊಳು ಕನಕದಾಸನ ನೆರಳು ಅನಕ ಏನು ಬಲಿಸಿದೆಯೊ ಔಷಧಿಯ ಕುಣುಕ
– ಕದರಮಂಡಲಗಿಯ ಕರುಣಿ ಹನುಮ ರಾಯ (ಸ–೭೫–೩)
– ಹದಿನೆಂಟು ಕ್ಷೋಣಿ ವ್ಯಾರ್ಬಲವ ಹದಿನೆಂಟು ದಿನ ಕದನ ನಾಟ್ಯದ ಕೇಳಿಕೆ ಯನಾಡಿಸಿ
– ಬೊಂಬೆಯಾಟವನಾಡಿಸಿದ (ಬೆ–೭೯–೩)
– ಅಖಿಳ ಸುವ್ರತ ಕ್ಷೋಣಿಯಿಂದಲಿ ಹಿರಿಯ ಪ್ರಕೃತಿರಹಿತಾಂಬರೀಷ
– ಸಿಂಗರದ ಸಿರಿಧರನೆ (ಬೆ–೧೬೭–೨)
– ಕ್ಷೋಣಿಯೊಳು ಕ್ಷೀಣ ದೈವ ಬ್ರಹ್ಮಾಂಡ ಕೋಟಿಗಳು ದಾನವಾರಿಯ ದಾಸಗಳವಡವು ನಾನರಿವೆ
– ಬೇಡ ಬೇಡ ಎಲೆಲೆ ದುರಿತಗಳಿರ (ಬೆ–೨೯–೨)
– ಕ್ಷೋಣಿಗೆರಗಿಸಿ ಕಾರ್ತವೀರ್ಯಾರ್ಜುನನ ಮಡುಹಿ ಜಾಣತನದಲ್ಲಿ ಭೂದಾನಗಳ ಭೂಸುರರ
– ನೋಡಯ್ಯ ನಿನ್ನ ದಾಸರ (ಬೆ–೮೫–೬)

೧೩೦೬. ಕ್ಷೇಮ – ಶ್ರೀಪತಿ ರಾಘವ ಕ್ಷೇಮ ದಲ್ಲೈದಾರೆ
– ಎನ್ನ ಕಂದ ಹಳ್ಳಿಯ ಹನುಮಾ (ಬೆ–೬–೧)
– ಸನಕಾದಿಗಳೋಲೈಪ ಆದಿಕೇಶವ ನಮ್ಮ ಹನುಮೇಶ ರಾಘವ ಕ್ಷೇಮದಲ್ಲೈದಾರೆ
– ಎನ್ನ ಕಂದ ಹಳ್ಳಿಯ ಹನುಮಾ (ಬೆ–೬–೩)

೧೩೦೭. ಕ್ಲೇಶ – ದಾಸನಾಗಬೇಕು ಕ್ಲೇಶಪಂಚಕ ವಳಿದು ಆಸೆಯಲ್ಲಿ ಮನ ಸೂಸೆ ಸರ್ವದಾ
– ದಾಸನಾಗಬೇಕು ಸದಾಶಿವನ (ಬೆ–೨೪–೮)
– ಮೀಸಲೂಳಿಗವನು ಮಾಡದೆ ಈ ಪರಿಕ್ಲೇಶ ದಿಂದಲಿ ಬಲು ಗಾಸಿಯಾದೆನಯ್ಯ
– ಕಾಡುವ ದುರಿತಗಳ ನೀ ಬಿಡಿಸೆಂದು (ಬೆ–೬೦–೨)

## ಖ

೧೩೦೮. ಖಂಡ – ಕರುಳು ಖಂಡ ನಾರುವ ಚರ್ಮ ರೋಹಿತ ನರಪಂಜರದೀ ಹುರುಳಿಲ್ಲದ
– ಯಾತರವನೆಂದುಸುರಲಿ (ಸ–೨೧೮–೪)
– ಖಂಡ ಕೊಯ್ದು ಕೊಡಬೇಡ ದಳ್ಳುರಿಯಗ್ನಿ ಕುಂಡವನು ಹೊಕ್ಕು ಹೊರಡುವುದುಚಿತವೆ
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೨)
– ಎಲುವು ಖಂಡ ರೋಹಿತ ನರಪಂಜರ ಪಳುವಿನೊಳಗೆ ನಮ್ಮ ಕುಲವ ಕೇಳುವರೆ
– ಏತರವನೆಂದು ಪೇಳಲಿ (ಬೆ–೧೨೨–೪)
– ರಣದೊಳಗೆ ದೇಹವ ಖಂಡತುಂಡವ ಮಾಡಿ ರಣವನುತ್ತರಿಸಿ ಮರಣವ ತೋರಿದೆ

- ಸಾಲದೆ ನಿನದೊಂದು ದಿವ್ಯನಾಮ
(ಬೆ-೧೭೪-೧)
- ಕಾದುವಾ ವೀರರಿಗೆ ಕಾಸುಕೊಡುವವರಿಲ್ಲ ಮೇದಿನಿಗೆ ಬೀಳ್ವ ಮಳೆ ಖಂಡಮಂಡಳವು
- ಕಲಿಯೇರಿ ಬಂತು (ಬೆ-೧೩೦-೯)
- ಚಂಡಭಟರೆಲ್ಲ ಮುಂದೆ ಕತ್ತಿ ಹರಿಗೆಯ ಪಿಡಿದು ಖಂಡತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
- ಎಲ್ಲರೂ ಮಾಡುವುದು ಹೊಟ್ಟೆಗಾಗಿ
(ಬೆ-೧೩೪-೪)

೧೩೦೯. ಖಂಡಿಸು - ಖಂಡಿಸಿದರು ರಣದೊಳು ಗುರುಹಿರಿಯರ ಪುಂಡರೀಕಾಕ್ಷನ ಒಲುಮೆಯೊಂದಲ್ಲದೆ
- ನಡತೆ ಹೀನನಾದರೇನಯ್ಯ
(ಸ-೧೨೭-೧)
- ಮುಂಗೈಯ ಶಕ್ತಿ ಸಾವಿರ ತೋಳ ಬಾಣನ ತುಂಗವಿಕ್ರಮ ಕೃಷ್ಣ ತೋಳ ಖಂಡಿಸುವಾಗ
- ಆವ ಬಲವಿದ್ದರೇನು (ಬೆ-೧೩೩-೪)
- ಕಚ್ಚುವ ಕೆಟ್ಟ ತನುವ ಖಂಡಿಸೊ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೨)
- ಶಿವನ ಧನುವನು ಖಂಡಿಸಿ ಮತ್ತೆ ಶಿವನ ಜಿತವೇರಿ ನಿಂದೆ
- ಭವಭಯವಿನಾಶ ಭೋ (ಬೆ-೪೧-೨)

೧೩೧೦. ಖಗ - ಪಾರ್ವ ಖಗ ಉಲಿಯುತಿರೆ ಸಕಲ ಜನ ನಲಿಯುತಿರೆ
- ಪೂಸರನ ಜನಕನೇ (ಬೆ-೧೬೮-೧)

೧೩೧೧. ಖಗರಾಜವಾಹನ (ವಿಷ್ಣು) - ಮಗಳು ಮಹಾಲಕುಮಿ ಮೊಮ್ಮಗನು ಸರಸಿಜಭವನು ಖಗರಾಜವಾಹನನು ತನ್ನಳಿಯನು
- ಆರು ಸಮಯಕ್ಕೊದಗಲಿಲ್ಲ (ಬೆ-೩೨-೧)
- ಜಗದೇಕನಾಯಕ ಜಲಜದಳನೇತ್ರ ಖಗರಾಜವಾಹನ ಕಲ್ಯಾಣ ಚರಿತ
- ಲಾಲಿ ಪಾವನ ಚರಣ ಲಾಲಿ ಅಘಹರಣ
(ಸ-೨೯೯-೨)

೧೩೧೨. ಖಗವೈರಿ (ಹಾವು) - ಖಗವೈರಿಯಂತೆ ಕಿಸುಕಿಲೆವುದಾವಾಟ ಜಗದಧಿಪತಿ ನಾಮ ಸ್ಮರಿಸು ಮರುಳೆ
- ಗೋವಿಂದ ಗೋವಿಂದ ಎನ್ನಲರಿಯದೆ
(ಬೆ-೧೬-೪)

೧೩೧೩. ಖಚಿತ (ಕುಂದಣಿಸಿದ) - ಸ್ವರ್ಣ ಖಚಿತವಾದ ರಥದೊಳು ಪೊಕ್ಕನ ನಾರಾಯಣ ಎನ್ನಿರೊ
- ನಾರಾಯಣ ಎನ್ನಿ ನಾರದ ವರದನ
(ಬೆ-೭೬-೩)

೧೩೧೪. ಖಡುಗ (ಖಡ್ಗ) - ಕಡುಕೋಪದಿಂ ಖಳನು ಖಡುಗವನು ಪಿಡಿದು ನಿನ್ನೊಡೆಯನೆಲ್ಲಿಹನೆಂದು ನುಡಿಯೆ
- ಬಾಗಿಲನು ತೆರೆದು ಸೇವೆಯನು
(ಬೆ-೪೬-೨)

೧೩೧೫. ಖಣಿ - ಸೇವೆಯರಿಯದ ಧಣಿಯು ಕಲ್ಲಿನಾ ಖಣಿಯು
- ಅಹುದಾದರಹುದೆನ್ನಿ (ಬೆ-೧೩೧-೧)

೧೩೧೬. ಖತಿ - ಖತಿಯನು ತಡೆದನ ಸತಿಯ ಜನನಿ ಸುತ ಸತಿಯರನಾಳಿದ ಚತುರನಿಗೆ
- ಮಂಗಲಂ ಜಯ ಮಂಗಲಂ
(ಬೆ-೧೭೨-೨)

೧೩೧೭. ಖತಿಗೊಳಿಸು - ಜನವರಿಯದಂತೆ ಜೀವನದೊಳಡಗಿದ್ದವನ ಮನವ ಖತಿಗೊಳಿಸಿ ಕಾತರಿಸೆ ನುಡಿಸಿ
- ನೀನಾವ ಬಾಂಧವನೊ (ಬೆ-೭೮-೮)

೧೩೧೮. ಖಳ - ಖಳ ಸೋಮಕನ ಕೊಂದು ನೀರ ಮುಳುಗಿ ಬಂದೆ
- ಯಾದವಗಿರಿವಾಸನಹುದೋ
(ಸ-೨೯೯-೧)
- ಖಳ ಹಿರಣ್ಯಕ ಬಂದು ಎದುರಾರು ತನಗೆಂದು ಇಳೆಯ ಕದ್ದೊಯ್ದು ಪೋಗುತಿರೆ
- ಯಾದವಗಿರಿವಾಸನಹುದೋ
(ಸ-೨೯೯-೧)
- ನೀರ ಮುಳುಗಿ ಖಳನ ಕೊಂದು ವೇದ ತಂದು ಬರಮದೇವಗಿತ್ತ ಮದ್ದಾನೆ
- ಆನೆ ಬರುತಾದೆ ನೋಡಮ್ಮ
(ಸ-೧೫೫-೧)
- ತಾಮಸದ ಖಳ ತನ್ನ ತನುಜನನು ಮಥಿಸುತಿರೆ ರಾಮನನು ತೋರೆಂದು ಬಾಧಿಸುತಿರೆ
- ನೋಡಯ್ಯ ನಿನ್ನ ದಾಸರ (ಬೆ-೮೫-೪)

- ಚಿನ್ನಗಣ್ಣವನೆಂಬನೊರ್ವ ಖಳ ಭೂದೇವಿ ಕನ್ನಿಕೆಯನೊಯ್ಯುತಿರೆ ಕನಲಿ ಮನದಿ
- ನೋಡಯ್ಯ ನಿನ್ನ ದಾಸರ (ಬೆ-೮೫-೩)
- ಖಳನ ಬಲವ ನಂಬಲಾತು ತಲೆಯ ತವಿಸಿದವನ ಸಿರಿಯು
- ನಂಬಬೇಡಿ ಸಿರಿಯು ತನ್ನದೆ (ಬೆ-೧೧೫-೧)
- ಬಾಲಕನ ನುಡಿ ಕೇಳಿ ಖಳನ ಸೀಳಿದಾನೆ
- ಆನೆಯ ನೋಡಿರಯ್ಯ (ಬೆ-೧೫೬-೨)
- ಬೇರೊಂದು ರೂಪದಿ ಜನಿಸಿ ಖಳನ ಕೊಂದು ಧಾರಿಣಿಸುರರಿಗಿತ್ತನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೫)
- ಉರಿಯೊಳು ಜನಿಸಿದವನ ನಿಜ ತಂಗೆಯ ಸೆರಗಪಿಡಿದ ಖಳನಣ್ಣನ ತಂಗೆಯ
- ರಮಣಿ ಕೇಳೆಲೆ ಮೋಹನ (ಬೆ-೯೬-೩)
- ಕಡುಕೋಪದಿಂ ಖಳನು ಖಡುಗವನು ಪಿಡಿದು ನಿನ್ನೊಡೆಯನೆಲ್ಲಿಹನೆಂದು ನುಡಿಯೆ
- ಬಾಗಿಲನು ತೆರೆದು ಸೇವೆಯನು (ಬೆ-೪೬-೨)
- ಸೆಳೆಯುತಿದ್ದನು ಖಳನು ಬೆಳೆಯುತಿದ್ದುವು ಸೀರೆ
- ವಾಸುದೇವಾಯ ನಮೋ (ಬೆ-೯೦-೧೦)
- ಮನ್ಮಥನೆಂಬ ಖಳನು ಮಾರ್ಗವ ಕಟ್ಟಿ ಸುಲಿಯುತಿರೆ
- ಪಥ ನಡೆಯದಯ್ಯ (ಬೆ-೯_ಪ)
- ಇಳೆಯ ಮೊರೆಯ ಕೇಳಿ ಖಳರುತ್ತಮಾಂಗವ ನಿಳುಹಿದಾತನ ತೋರೆಲೆ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೧)
- ಮೂಲಗುರುವು ಕುಂತೀಬಾಲನೆನ್ನದೆ ವೃಥಾ ಶೀಲಗೆಟ್ಟಂಥ ಖಳರಿಗಲ್ಲದೆ ಮತ್ತೆ
- ಅಂಥಂತ ಮಸು ಇನ್ನಾರಿಗೆ (ಬೆ-೮೯-೨)
- ದಶಮತಿವಂದಿತ ದಶಶಿರ ಸಂಹರ ದಶರೂಪ ದಲಿ ಖಳ ದಶನ ಮೂರುತಿಯೆಂದು ಹೆಸರು ಹೇಳುವರು
- ಬಾರೊ ಭಾಗ್ಯದ ನಿಧಿಯೆ (ಸ-೧೮೨-೨)
- ಕ್ರೂರ ಖಳನ ತರಿದು ಆ ಪಾಂಡವರ ಅರಣ್ಯದಿ ಪೊರೆದ
- ಮರೆಯದಿರು ಹರಿಯ (ಸ-೨೦೩-೨)
- ಕಾಗಿನೆಲೆಯಾದಿಕೇಶವ ಖಳನ ಗರ್ಭವಿಚ್ಛೆನ ಪ್ರಹ್ಲಾದಗೆ ಪ್ರಸನ್ನವಾದುದರಿಂದ
- ಚೆಲ್ವ ಕಂಗಳ ಚೆಲ್ವಕಾರ (ಸ-೯೯-೩)

೧೩೮೯. ಖಿಲವಾಗು - ಖಿಲವಾದ ಮಧ್ವ ಮತವನೆ ನಿಲಿಸಿ ಕಾಗಿನೆಲೆಯಾದಿಕೇಶವ ಪರ ದೈವನೆಂದೆನಿಸುವನ
- ಪರಮ ಪದವಿಯನೀವ ಗುರು ಮುಖ್ಯ ಪ್ರಾಣನ (ಬೆ-೭_೩)

೧೩೭೦. ಖುದಾ (ಮುಸಲ್ಮಾನರ ದೇವರು)
- ಅಲ್ಲಾ ಖುದಾ ಎಂಬ ಅರ್ಥವನು ಅರಿಯದೆ ಮುಲ್ಲಾಶಾಸ್ತ್ರದ ನೆಲೆಯ ಮುನ್ನರಿಯದೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೩)

೧೩೭೧. ಖುಲ್ಲ - ಖುಲ್ಲ ಮನುಜರನು ಕೊಲ್ಲಬೇಕೆನುತಲಿ ಭಲ್ಲೆ ಹಿಡಿದು ತುರಗವನೇರಿ
- ತಾಳಲ್ಲಲ್ಲಲ್ಲೋ ಮಾಸಾಳಲ್ಲಲ್ಲಲ್ಲೋ (ಸ-೧೧೦-೧೦)

೧೩೭೨. ಖೂಳ - ಖೂಳ ಶಿಶುಪಾಲನ ಸೀಳಿದಾನೆ
- ಆನೆಯ ನೋಡಿರಯ್ಯ (ಬೆ-೧೫೬-೨)

೧೩೭೩. ಖೋಡಿ - ಖೋಡಿಮಾತುಗಳನ್ನು ಹೇಳಿ ಮಂದಿಯ ಕುಂಡೆ ಚಿವುಟುತಿದ್ದೆ
- ಥೀ ನಿನ್ನ ಮೋರೆ ಮೇಲೆ (ಸ-೧೦೦-೨)

೧೩೭೪. ಖ್ಯಾತನಾಗು - ಶಿವಖ್ಯಾತನಾದರೆ ಕೈಲಾಸವಿರಬೇಕು ಭವಿ ತಂದ ಧರೆಯೊಳು ಇರಬಹುದೆ
- ಶಂಕರನಾರಾಯಣ ಬಿಡು (ಬೆ-೧೭೫-೧)

೧೩೭೫. ಖ್ಯಾತಿ - ಶರದಿಷುಖ್ಯಾತಿ ಪೌರುಷ ಲೋಭ ಬಹುಜನರ ಉರುವೀಶರನ್ನು ಕೈಪಿಡಿದೆ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೩)
- ವಾತಜಾತನು ಆಗಿ ಖ್ಯಾತಿಯಲಿ ಮೆರೆದಗೆ ಸೇತುವೆಯ ಭರದಿಂದ ಲಂಘಿಸಿದಗೆ

- ಜಯಮಂಗಲಂ ನಿತ್ಯ (ಬೆ-೧೭೧-೧)
- ಸೇತುವೆ ದಾಟಿ ಲಂಕೆಗೆ ಪೋಗಿ ಹನುಮಂತ ಖ್ಯಾತಿಯಲಿ ರಾವಣನ ಪುರವನಳಿಸಿ
- ಪ್ರಾಚೀನ ಕರ್ಮವಿದು (ಬೆ-೧೦೭-೧)

## ಗ

೧೩೨೬. **ಗಂಗಾದೇವಿ/ಗಂಗೆ** - ಚೆಲುವ ರಾಯನ ರಥೋತ್ಸವದೀ ತೀರ್ಥಕೊಲಿದು ಗಂಗಾದೇವಿ ಬರುವ ಸಂಭ್ರಮವ
- ಕೈಯ ತೋರಿದ ಬಗೆಯ (ಸ-೯೧-೪)
- ಲೋಕ ಪಾವನೆ ಗಂಗೆ ಜನಿಸಿದಾ ಪಾದ
-ಭಜಿಸಿ ಬದುಕೆಲೊ ಮನುಜ (ಬೆ-೩೫-೧)
- ದೋಷನಾಶೆ ಕೃಷ್ಣವೇಣಿ ಗಂಗೆ ಗೋದಾವರಿ ಭವನಾಶಿ ತುಂಗಭದ್ರೆ ಯಮುನೆ ವಾಸದಲ್ಲಿ ಉಪವಾಸದಲ್ಲಿ
- ದಾಸನಾಗೋ ಭವಪಾಶ ನೀಗೋ (ಬೆ-೨೦-೧)
- ಹಿಂಗದೆ ಜಗವ ಪಾವನವ ಮಾಡುವ ಪುಣ್ಯ ಗಂಗೆಯೆಂಬವಳೀಗ ನಿನ್ನ ಮಗಳು ದೇವ
- ಜಗದಂತರ್ಯಾಮಿ ಎಂತೆಂದು (ಬೆ-೫೮-೪)
- ಕ್ರೋಡದಂಷ್ಟ್ರಜೆ ಕೃಷ್ಣವೇಣಿಯು ವರುಣೆ ಕೂಡಿ ಗಂಗಾಸ್ನಾನಗಳ ಮಾಡಲು
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೧)
- ಗಂಗೆಯು ಪಡೆದ ಚರಣ ನಿರ್ಗುಣ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೩)
- ಕಾಲಿನಿಂದಲಿ ಪಡೆದು ಗಂಗೆಯ ಕಾಲಿನಿಂದಲಿ ನಡೆದ ಭಾರ್ಗವ
- ಇಂದು ನೀ ಕರೆದುತಾರೆ (ಬೆ-೯೨-೧)
- ಗಂಗೆಯನು ಪಡೆದಾದಿಕೇಶವನ ದಿವ್ಯ ಕಮಲಾಂಘ್ರಿಯನು ಭಜಿಸಿ ಪಾವನನಾಗು ಮರುಳೆ
- ಬೆರೆಯದಿರು ಬೆರೆಯದಿರು (ಬೆ-೧೪೩-೯)
- ಗಂಗೆಯನು ಉಂಗುಟದಿ ಪೆತ್ತ ಮೂರುತಿಯೆ
- ಸಿಂಗರದ ಸಿರಿಧರನೆ (ಬೆ-೧೬೭-ಪ)
- ಘನವಾದ ಗಂಗೆಯನು ಪಡೆದವಗೆ ಕಲಶನೀರನದೆಂತು ಮೈಗೆರೆಯಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೧)

೧೩೨೭. **ಗಂಜಿ** - ಗಂಜಿಯ ಸೆಲ್ಯವ ಎನಗೆ ಮುಸುಕನಿಟ್ಟು ಮುದ್ದನಾಡಿ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೧)

೧೩೨೮. **ಗಂಟಲಗಾಣ/ಗಂಟಲಗಾಳ** - ಸಾಲದೆ ನಿನದೊಂದು ದಿವ್ಯನಾಮ ಅಕಾಲ ಮೃತ್ಯುವಿನ ಗಂಟಲಗಾಣ ಹರಿಯೆ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-)
- ಧಾರಿಣಿಯೊಳು ದುರ್ವಾದಿ ದೈತ್ಯರ ಗಂಟಲಗಾಳವಾದಗೆ
- ಶರಣು ಶರಣು ದಶರಥ ರಾಮದೂತಗೆ (ಸ-೨೩೬-೩)

೧೩೨೯. **ಗಂಟಲು** - ಗಂಟಲು ಮೂರುಂಟು ಮೂಗಿಲ್ಲವು
- ಮರ ನುಂಗುವ ಪಕ್ಷಿ (ಬೆ-೧೬೧-೧)

೧೩೩೦. **ಗಂಟಾಕರ್ಣ** - ನಿನ್ನ ನಾಮ ಗಂಟಾಕರ್ಣನ ಸಲಹಿದೆ ದೇವ
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ-೧೪೫-ಪ)

೧೩೩೧. **ಗಂಟು** - ಕಂಜಲೋಚನೆ ಕುಚದ ಗಂಟು ಕಡೆಗೆ ಬಿಚ್ಚೆಂದ ನೋಡು
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೧)
- ಕರಣಿಕರೊಳಗಣ ನಂಟು ಕಟ್ಟಿದ ಹಣವಿನ ಗಂಟು
- ಅಹುದಾದಡಹುದೆನ್ನಿ (ಬೆ-೧೩೨-೧)
- ಹೂವಿನ ಗಂಟು ಅಂದು ಜಡೆಗಳಿಂದು
- ಎನ್ನ ಕಂದ ಹಳ್ಳಿಯ ಹನುಮಾ (ಬೆ-೬_೨)

೧೩೩೨. **ಗಂಟೆ** - ಧಿಮಿಧಿಮಿ ಗಣಗಣವೆಂಬ ಗಂಟೆಯ ರವಕೆ ಬೆಮೆಗೊಳುತಿರುವಾ ಹರಿಣ ನಂದದಲಿ

- ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-೪)

೧೩೩೩. ಗಂಡ - ಉರಗನ ಮಗಳ ಗಂಡಗೆ ಪ್ರಾಣವಿತ್ತವನ ಗೋವಿಂದ ಎನ್ನಿರೋ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೧)
- ಗಂಡನುಳ್ಳವಳ ಜೊತೆ ಭಂಡಾಟವ್ಯಾಕಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೧)
- ಗಂಡನಂತೆ ಮನೆಗೆ ಬಂದನೆ ಯಶೋದೆ ಕೇಳೆ ಮಿಂಡನಂತೆ ಕಣ್ಣು ಹೊಡೆದನೆ
- ಬಾಲಕನೆಂದೆತ್ತಿಕೊಂಡೆನೆ (ಸ-೧೮೩-೨)
- ಮಿಂಡಿ ಪೆಣ್ಣನು ಸಭೆಯುಲ್ಲಿ ಸೀರೆ ಸುಲಿಯಲು ಗಂಡರೈವರು ನೋಡಿ ಏನು ಮಾಡುತಿರ್ದರಯ್ಯ
- ಬಂಧುಗಳದಾರಿಗಾರಿದ್ದರೇನು (ಸ-೧೭೩-೨)
- ಮಗಳ ಗಂಡ ಶಿರವ ಭೇದಿಸಿದಾತನ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ (ಬೆ-೮೦-೩)
- ಸಿಂಧುಮಥನದೊಳು ಜನಿಸಿದಳ ಗಂಡ ಮುಕುಂದನ ತೋರೆನಗೆ
- ಘುಲ್ಲವದನೆ ಕೇಳೆ ನಿಲ್ಲಲಾರೆ ಬೆ-೯೫-೨)
- ಕರೆಬರಲರಿಯದ ಗಂಡ ಅವ ನಾಚಿಕೆ ಭಂಡ
- ಅಹುದಾದಡಹುದೆನ್ನಿ (ಬೆ-೧೩೨-೪)
- ಮಾವನ ಮಡದಿಯ ಸೊಸೆಯ ಮಗಳ ಗಂಡ
- ಬಾರೊ ನಮ್ಮ ಮನೆತನಕ (ಬೆ-೧೦೬-೨)
- ಅತ್ತಿಗೆಯ ಮೈದುನ ಬಾರೋ ಹೆತ್ತ ಮಗಳ ಗಂಡ
- ಬಾರೊ ನಮ್ಮ ಮನೆತನಕ (ಬೆ-೧೦೬-೧)
- ಬಾಯೊಳಗಿಹಳ ಗಂಡನ ನಿಜ ತಮ್ಮನ ತಾಯ ಪಿತನ ಮಡದಿಯ ಧರಿಸಿದನ
- ರಮಣಿ ಕೇಳೆಲೆ ಮೋಹನ (ಬೆ-೯೬-೧)
- ಮೂರು ಬಟ್ಟೆಯೊಳಿಪ್ಪ ನಾರಿಯ ಗಂಡನ ವೈರಿಯ ಹಿರಿಯಣ್ಣನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೫)
- ಗುಂಡಿಗೆಯಲಿ ಮೂಲಗಳುಂಟು ಧರೆಯೊಳು ಗಂಡನ ನುಂಗುವುದು ಗಜಮುಖದ ಪಕ್ಷಿ
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೩)
- ಮಂಡಲದೊಳಗೊಬ್ಬ ಜಾರಸ್ತ್ರೀಯಳು ತನ್ನ ಗಂಡನರಿಕೆಯಿಂದ ವ್ಯಭಿಚಾರಗೈಯೆ
- ಯಮದೂತರಿನ್ನೇನ ಮಾಡುವರು (ಬೆ-೪೪-೧)
- ರಮೆಯ ಗಂಡನೊಲಿದುಪ್ಪವಡಿಸಯ್ಯ ಹರಿಯೆ
- ಸಿಂಗರದ ಸಿರಿಧರನೆ (ಬೆ-೧೬೭-೩)
- ಮತ್ತೆ ಗಂಡನಿಗೆ ಹೆಂಡತಿಯೆ ಗಂಡನು ಆಗಿ ವರ್ತಿಸುವರಯ್ಯ ತಮಗೆದುರಿಲ್ಲವೆಂದು
- ಕಲಿಯೇರಿ ಬಂತು (ಬೆ-೧೩೦-೧)
- ಗಂಡರೈವರ ಮುಂದೆ ದ್ರುಪದನಂದಿನಿ ಸೆರಗ ಲಂಡ ದುಶ್ಶಾಸ ಪಿಡಿದು
- ವಾಸುದೇವಾಯ ನಮೋ (ಬೆ-೯೦-೧)
- ಗಂಡಗಂಜದ ನಾರಿಯವಳೆ ಹೆಮ್ಮಾರಿ
- ಅಹುದಾದರಹುದೆನ್ನಿ (ಬೆ-೧೩೧-೪)
- ಕುಂದು ಗಂಡಗಲ್ಲದೆ ಹೆಂಡತಿಗುಂಟೆ ನಿಂದನೆ ಎಲೆ ದೇವ
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ-೧೪೫-೧)

೧೩೩೪. ಗಂಡಾಮಾಲೆ - ಪಿತ ಮಾತೆಯರ ಸಲಹದವಗೆ ಗಂಡಾಮಾಲೆ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೨)

೧೩೩೫. ಗಂಡು - ಗಂಡುವೆಣ್ಣಿನ ರೂಪುವೆತ್ತು ರಾಜಿಸುವವನು
- ಸಿಂಗರದ ಸಿರಿಧರನೆ (ಬೆ-೧೬೭-೩)
- ಶರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು
- ಅಹುದಾದರಹುದೆನ್ನಿ (ಬೆ-೧೩೧-೨)

೧೩೩೬. ಗಂಡುಗತ್ತರಿ - ಗಂಡುಗತ್ತರಿಯನ್ನು ಕೊರಳಿಗಿಟ್ಟರು ಇಲ್ಲ ಪ್ರಚಂಡನಾದರೂ ಇಲ್ಲ ಪರಿಹಾಸ್ಯವಲ್ಲ

- ಕಷ್ಟಪಟ್ಟರೂ ಇಲ್ಲ (ಬೆ-೧೧೧-೨)
೧೩೩೭. ಗಂಡುಗಲಿ - ಗಂಡುಗಲಿ ಮಾಗಧನ ಒರಸಿದಾನೆ
- ಆನೆಯ ನೋಡಿರಯ್ಯ (ಬೆ-೧೫೬-೧)
೧೩೩೮. ಗಂಧ - ಗಂಧ ಕಸ್ತೂರಿ ಬೊಟ್ಟು ಗಮಕದಿಂದಲಿ ಇಟ್ಟು ಗೊಂದಲ ಗಡಿಬಿಡಿ ಸುರಲೋಕ ಅಮ್ಮಮ್ಮ
- ಆನೆ ಬರುತಾದೆ ನೋಡಮ್ಮ (ಸ-೧೫-೩)
- ಒಡಗೂಡಿ ಗಂಧ ಕಸ್ತೂರಿ ಪರಿಮಳಗಳ ಬಿಡದೆ ಲೇಪಿಸಿಕೊಂಬುದು ನಿನ್ನದು
- ತನು ನಿನ್ನದು ಜೀವನ ನಿನ್ನದು (ಬೆ-೫೭-೨)
- ಸಿಂಧುರಗಮನೆಯರ ಸಿರಿಮುಡಿಯೊಳಿಪ್ಪ ಪೂಗಂಧವಾಸಿಸುವ ನಾಸಿಕದಿಂದ್ರಿಯಕೆ
- ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-೨)
- ಸೋರೆಯೊಳು ಸುರೆ ತುಂಬಿ ಮೇಲೆ ಹೂವಿನ ಹಾರಹಾಕಿ ಗೀರು ಗಂಧ ಅಕ್ಷತೆಯ ಧರಿಸಿದಂತೆ ನೀ ಮೆರಸಿದಂತೆ
- ದಾಸನಾಗೋ ಭವಪಾಶ ನೀಗೋ (ಬೆ-೨೦-೫)
- ಕುಸುಮದೊಳು ಗಂಧವೊ ಗಂಧದೊಳು ಕುಸುಮವೋ
- ನೀ ಮಾಯೆಯೊಳಗೋ (ಬೆ-೪೭-೩)
- ಕುಸುಮ ಗಂಧಗಳೆರಡು ಘ್ರಾಣದೊಳಗೋ
- ನೀ ಮಾಯೆಯೊಳಗೋ (ಬೆ-೪೭-೩)
೧೩೩೯. ಗಂಧಮಾಲೆ - ರಕ್ತಕುಸುಮ ಗಂಧಮಾಲೆ ಕಸ್ತೂರಿಯನು ಪೂಸಿಕೊಂಡು
- ಎಷ್ಟು ಪ್ರೀತಿಯೊ ಮನಕೆ (ಸ-೫೨-೩)
೧೩೪೦. ಗಂಧರ್ವ - ಗರುಡಗಂಧರ್ವ ನಗರಿಯ ಮೆರೆದಾತನ ನಾರಾಯಣ ಎನ್ನಿರೊ
- ನಾರಾಯಣ ಎನ್ನಿ ನಾರದವರದನ (ಬೆ-೭೬-೨)
- ಯಕ್ಷ ಗಂಧರ್ವ ಅಮರೇಂದ್ರ ಮುನಿ ವಂದಿತನೆ
- ವಾಸುದೇವಾಯ ನಮೋ (ಬೆ-೯೦-೭)
೧೩೪೧. ಗಂಧಶಾಲ್ಯನ್ನ (ಸುವಾಸನೆಯ ಅಕ್ಕಿಯ ಅನ್ನ) - ಗಂಧಶಾಲ್ಯನ್ನ ಸದ್ಘೃತ ತೋಯೆ ಪಳಿದ್ಯವ ಮಂದವಾದ ಅಳೆಯ ಸ್ವಾದು ಸೀಕರಣೆಗಳನು
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೨)
೧೩೪೨. ಗಕ್ಕನೆ - ಗಕ್ಕನೆ ಯಮನ ದೂತರು ಎಳೆದೊಯ್ವಾಗ ಶಕ್ತಿಯರು ಬಿಡಿಸಿ ಕೊಂಬ ರೇನೊ ಮರುಳೆ
- ದಾನ ಧರ್ಮವ ಮಾಡಿ ಸುಖಿಯಾಗು (ಬೆ-೧೩೯-೧)
೧೩೪೩. ಗಗನ - ಗಗನದ ಪುರವ ಪೊಕ್ಕನ ತೇಜಿರೂಢನ
- ಇಂದು ನೀ ಕರೆದುತಾರೆ (ಬೆ-೯೨-೩)
- ಇಳೆಯಲ್ಲಿ ಒಂದು ಪದ ಗಗನದಲಿ ಒಂದು ಪದ
- ಬಲ್ಲವರು ಪೇಳಿರಿ (ಬೆ-೧೬೪-೨)
- ಮೂಡಿದುವು ಪ್ರತಿಸೂರ್ಯ ಧೂಮಕೇತು ಗಳು ಓಡಾಡಿದುವು ಗಗನದಲಿ
- ವಾಸುದೇವಾಯ ನಮೋ (ಬೆ-೯೦-೧೨)
೧೩೪೪. ಗಜ - ಕಾಲ ತೂಗಿ ನೋಡುತ್ತ ಗಜ ಉನ್ಮತ್ತ ಕಾಲಿನಿಂದಲಿ ಕೊಲುವ ರೂಪದಿ
- ಇಂದು ನೀ ಕರೆದುತಾರೆ (ಬೆ-೯೨-೧)
- ಅಜಜ್ಞಾನಾಧಿಕ ಬಲ್ಲ ಅನಲಸ್ನೇಹಿತ ಬಲ್ಲ ಗಜ ಚರ್ಮಾಂಬರ ಬಲ್ಲ ಗರುಡ ಬಲ್ಲ
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-೧)
- ಅಜನ ಪಡೆದ ಹಣ್ಣು ಗಜವ ಕಾಯ್ದ ಹಣ್ಣು
- ಹಣ್ಣು ಕೊಂಬುವ ಬನ್ನಿರಿ (ಬೆ-೧೫೭-೨)
- ನಕ್ರಂಗೆ ಸಿಲ್ಕಿ ನಡುನೀರೊಳೊದರುವ ಗಜವ ಚಕ್ರದಿಂ ಕಾಯ್ದೆ ಶ್ರೀ ನಾರಾಯಣಾ
- ನಾರಾಯಣಾ ನಮೋ (ಬೆ-೫೧-೨)
- ಗಜವನೇರಿದನ ತಂದೆಯ ತಾಯನಳೆದನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೨)
- ಮಲೆವ ದುಷ್ಕೃತವೆಂಬ ಗಜಕೆ ಕೇಸರಿಯೆಂಬ ಛಲ ಬಿರುದು ತಾಳ್ದ ದೇವರ ದೇವ ನೀನೆನ್ನ
- ಕಡಹಾಯಿಸೊ ಕಮಲಲಲೋಚನನೆ (ಬೆ-೬೨-೨)

- ತನುರೋಮ ಗಿಡ ವೃಕ್ಷ ತಳಿರು ಭುಜಲತೆ ಮೆರೆವ ಘನ ಸಿಂಹ ಮೃಗ ಗಜಗಳಿಂದೊಪ್ಪುವ
- ಪಥ ನಡೆಯದಯ್ಯ (ಬೆ-೯-೨)
- ಎಂಟು ಗಜವ ನುಂಗಿ ಉಂಟಾದ ಗಿರಿಯನು... ತಲೆಯ ನುಂಗಿತು
- ಹಲವು ಜೀವನವ ಒಂದೆಲೆ ನುಂಗಿತು (ಬೆ-೧೫೮-೨)
- ಹುತ್ತದೊಳಾಡುವ ಸರ್ಪ ಮತ್ತಗಜವ ನುಂಗಿತು
- ಎಂದೆಂದು ಇಂಥ ಚೋದ್ಯ (ಬೆ-೧೬೬-೨)
- ಗರುಡವಾಹನನಾಗಿ ಗಜವನು ಸಲಹಿದ ನಾರಾಯಣ ಎನ್ನಿರೊ
- ನಾರಾಯಣ ಎನ್ನಿ ನಾರದವರದನ (ಬೆ-೭೬-೨)

೧೩೪೫. ಗಜಗಮನೆ - ಗಜರಾಜವರದ ನೀನಾದರೆ ಆಕೆ ಗಜಗಮನೆಯು ತಾನಾದಳಯ್ಯ
- ನಿನಗಿಂತ ಕುಂದೇನೊ (ಬೆ-೮೭-೪)

೧೩೪೬. ಗಜಬಜಿಸು - ಗಜಬಜಿಸುವ ಪಂಚ ಭೂತಗಳ ರಜನಿಗೆ ಸಿಲುಕದೆ
- ಆರಿಗಳವಲ್ಲಾತ್ಮ ಯೋಗಸಿದ್ಧಿ (ಬೆ-೧೨೬-೧)

೧೩೪೭. ಗಜಮುಖ - ಗುಂಡಿಗೆಯಲಿ ಮೂಲ ಗಳುಂಟು ಧರೆಯೊಳು ಗಂಡನ ನುಂಗುವುದು ಗಜಮುಖದ ಪಕ್ಷಿ
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೩)

೧೩೪೮. ಗಜರಾಜ - ಗಜರಾಜವರದ ನೀನಾದರೆ ಆಕೆ ಗಜಗಮನೆಯು ತಾನಾದಳಯ್ಯ
- ನಿನಗಿಂತ ಕುಂದೇನೊ (ಬೆ-೮೭-೪)

೧೩೪೯. ಗಜುಗು (ಕಣ್ಣಿನಲ್ಲಿ ಬೆಳೆಯುವ ದುರ್ಗ್ರಂಥಿ) - ಹೇವವಿಲ್ಲದ ಹೆಣ್ಣು ಗಜುಗು ಬೆಳೆದಾ ಕಣ್ಣು
- ಅಹುದಾದರಹುದೆನ್ನಿ (ಬೆ-೧೩೧-೧)

೧೩೫೦. ಗಜೇಂದ್ರ - ಆಪತ್ಕಾಲದಿ ಗಜೇಂದ್ರನ ಸಲಹಿದರಾರು
- ಆತನ ಪಾಡುವೆ ಅನವರತ (ಬೆ-೭೦-೩)

೧೩೫೧. ಗಟ್ಟಿ - ಅದರ ಮೇಲೆ ಗಟ್ಟಿಯಾಗಿ ನೆಲೆಗೆ ನಿಂತವೈದು ಬಣ್ಣವು
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೧)
- ಇಷ್ಟ ಓಲೈಸುವ ಗಾಯನದಲಿ ನಿಂತು ಗಟ್ಟಿ ಪಾಡುವ ತುಂಬುರ ನಾರದರ ಸಂಭ್ರಮದಿ
- ಸಿರಿಯ ಮದವೆ ಮುಕುಂದ (ಬೆ-೬೯-೩)
- ಕಟ್ಟಿ ಕೈ ಪರರಲಿ ಹೊಟ್ಟೆಗೋಸುಗ ಕಂಗೆಟ್ಟು ಕಿಟ್ಟಗಟ್ಟಿದ ಗಟ್ಟಿ ಕಬ್ಬಿಣದಂತೆ
- ಹೇಗೆ ನೀ ದಾಸನಾದೆ (ಬೆ-೨೨-೧೦)
- ಗಟ್ಟಿಯಾಗಿ ಕಾಗಿನೆಲೆಯಾದಿಕೇಶವ ರಂಗ ಬಿಟ್ಟು ಹೋದರೆ ನಿನಗೆ ಹರಿದಾಸರಾಣೆ
- ಹೂವ ತರುವರ ಮನೆಗೆ (ಬೆ-೪೩-೩)
- ಗಟ್ಟಿಯಾಗಿ ಮುನಿಪೆಣ್ಣೆ ಕೊಟ್ಟಿದ್ದ ಶಾಪವನು ಬಿಟ್ಟೋಡಿಸಿದನಾವನು
- ಆತನೇ ಪರಮಾತ್ಮ ಪರತತ್ತ್ವ (ಬೆ-೭೪-೨)

೧೩೫೨. ಗಡಗಡ/ಗಡಗಡನೆ - ಹದ್ದುಕಾಗೆಗಳು ಕಾದಾಡಿದುವು ಮೃಗಜಾತಿ ಚಲಿಸಿದುವು ಶಿಲೆಪ್ರತಿಮೆ ರೂಢಿ ಗಡಗಡ ನಡುಗಿತು
- ವಾಸುದೇವಾಯ ನಮೋ (ಬೆ-೯೦-೧೨)
- ಗಡಗಡನೆ ನಡುನಡುಗೆ ಬುಡುಬುಡಿಸಿ ಸಭೆ ಬೆದರೆ
- ಕಂಡೆ ನಾ ತಂಡತಂಡದ ಹಿಂಡು ದೈವ (ಬೆ-೮೪-೧)
- ಕುಳ್ಳಿನಿಂದ ಕುದಿಸಿ ತಿಂದು ಕಳ್ಳ ಗಡಿಗೆ ಬರಿದು ಮಾಡೆ
- ಕಣಿಯ ಹೇಳಬಂದೆ ನಾನು (ಬೆ-೭೨-೨)

೧೩೫೩. ಗಡಿಬಿಡಿ - ಗಂಧ ಕಸ್ತೂರಿ ಬೊಟ್ಟು ಗಮಕದಿಂದಲಿ ಇಟ್ಟು ಗೊಂದಲ ಗಡಿಬಿಡಿ ಸುರಲೋಕ ಅಮ್ಮಮ್ಮ
- ಆನೆ ಬರುತಾದೆ ನೋಡಮ್ಮ (ಸ-೧೫-೩)

೧೩೫೪. ಗಡ್ಡೆ - ತುಪ್ಪ ಪಂಚಾಮೃತವಂದು ಅಡವಿ ಗಡ್ಡೆಗಳಿಂದು
- ಎನ್ನ ಕಂದ ಹಳ್ಳಿಯ ಹನುಮಾ (ಬೆ-೬-೧)

೧೩೫೫. ಗಣಗಣ - ಧಿಮಿಧಿಮಿ ಗಣಗಣ ವೆಂಬ ಗಂಟೆಯ ರವಕೆ ಬೆಮೆಗೊಳುತಿರುವಾ

ಹರಿಣನಂದದಲಿ
- ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-೪)
೧೩೫೬. **ಗಣನಾಥ** - ಪಟ್ಟದ ರಾಣಿ ಪಾರ್ವತಿಯ ಕುಮಾರನು ಹೊಟ್ಟೆಯ ಗಣನಾಥನೆ
- ನಮ್ಮಮ್ಮ ಶಾರದೆ (ಬೆ-೧_೨)
- ಕಮ್ಮಗೋಲನ ವೈರಿಸುತನಾದ ಸೊಂಡಿಲ ಹೆಮ್ಮೈಯ ಗಣನಾಥನೆ
- ನಮ್ಮಮ್ಮ ಶಾರದೆ (ಬೆ-೧_೮)
- ಮೂರುಕಣ್ಣನ ಸುತ ಮುರಿದಿಟ್ಟ ಚಂದ್ರನ ಧೀರ ತಾ ಗಣನಾಥನೆ
- ನಮ್ಮಮ್ಮ ಶಾರದೆ (ಬೆ-೧_೧)
೧೩೫೭. **ಗತಲೋಚನ** (ಕುರುಡ) - ಸುತನ ಮೇಲಣ ಮೋಹಕಂಜಿ ಹೇಳದಲೆ ಇಹ ಗತಲೋಚನದ ಮಾವನು
- ವಾಸುದೇವಾಯ ನಮೋ (ಬೆ-೯೦-೩)
೧೩೫೮. **ಗತಿ** - ಪ್ರಳಯ ಕೋಟಿ ಪ್ರಾಣಿಗಳಿಗೆ ಹೊಳವುಗಾಣಲೀಸದಂತೆ ಬೆಳೆದು ಹೋಗುವ ಗತಿಯೆಂಬುದಿತ್ತಲರಸುತ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೭)
- ಗತಿಯಿಲ್ಲದರಿಗೆ ಸದ್ಗತಿಯು ನೀನೆ ದೇವ ರತಿಪತಿಯ ಪಿತನೆ ಕಾಯೊ
- ವಾಸುದೇವಾಯ ನಮೋ (ಬೆ-೯೦-೩)
- ಲಿಂಗವೆ ಗತಿಯೆಂದು ಹೆಚ್ಚು ಕುಂದಾಡುವ ಸಂಗನ ಶಿವಶರಣರು ಕೇಳಿರೊ
- ಶಂಕರನಾರಾಯಣ ಬಿಡು (ಬೆ-೧೭೫-೫)
- ಅತಿ ಭಕುತರಿಗೆ ಮೆಚ್ಚಿ ಗತಿಮೋಕ್ಷವಿತ್ತನು ಮತಿಭ್ರಷ್ಟ ಅಜಮಿಳನ ಉದ್ಧಾರಮಾಡಿದ
- ನಂಬು ನಾರಾಯಣನ (ಬೆ-೫೩-೩)
- ನೀನುಪೇಕ್ಷೆಯ ಮಾಡೆ ಬೇರೆ ಗತಿಯಾರೆನಗೆ ನಿಗಮಗೋಚರ ಮುಕುಂದ
- ನೀನುಪೇಕ್ಷೆಯ ಮಾಡೆ (ಬೆ-೪೯-ಪ)
- ಕಲಿಯುಗದ ಜನರಿಗೆ ಆರ ನಾಮವೆ ಗತಿ
- ಆತನ ಪಾಡುವೆ ಅನವರತ (ಬೆ-೭೦-೨)
- ಜನನ ಮರಣವದೆಲ್ಲರಿಗೆ ಗತಿಬಾಹುದು ಏಕೆ
- ಬೆರೆಯದಿರು ಬೆರೆಯದಿರು (ಬೆ-೧೪೪-೩)
- ಕ್ಷೀರದೊಳಗದ್ದು ನೀರೊಳಗದ್ದು ನೀನೆ ಗತಿ ನಾರಾಯಣನೆ ರಕ್ಷಿಸೈ
- ವಾಸುದೇವಾಯ ನಮೋ (ಬೆ-೯೦-೫)
- ಇಕ್ಕುಳವ ಕೈಯಲ್ಲಿ ಪಿಡಿದು ಕಾದ ಕಬ್ಬಿಣವನ್ನು ತೆಗಿಸಿ ಹೊಕ್ಕು ಮುಂದಕೆ ಎಳಸಿ ಹೊಮ್ಮುವ ಗತಿ ಕಾಣೊ
- ಎಳ್ಳು ಕಾಳನಷ್ಟು ಭಕ್ತಿ (ಬೆ-೧೨-೩)
- ತನುವು ತನ್ನದು ಎಂದು ತನಯ ಮಾನಿನಿಯರ ಇನಿತು ಎನಗೆ ಗತಿಯೆಂಬುವ ಮೂಢನೆ
- ಹೇಗೆ ನೀ ದಾಸನಾದೆ (ಬೆ-೨೨-೨)
- ಗುಂಡುಮುಣುಗಿನ ಹಕ್ಕಿಯಂತೆ ಕಂಡ ಕಂಡ ನೀರ ಮುಳುಗಿ ಮಂಡೆ ಶೂಲೆಬಾಹುದ್ಯೆಸೆ ಗತಿಯ ಕಾಣೆನೊ
- ಎಳ್ಳು ಕಾಳನಷ್ಟು ಭಕ್ತಿ (ಬೆ-೧೨-೧)
- ಸಾಕಿನ್ನು ಎನಗೊಂದು ಗತಿಯ ತೋರಿಸಿ ಸದ್ವಿವೇಕಿಯನೆ ಮಾಡಯ್ಯ ಕೃಷ್ಣ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮_೩)
- ಕುದುರೆಯ ಹವಣುಗತಿಯಲಿ ಏರಿದಾತನ
- ಇಂದು ನೀ ಕರೆದುತಾರೆ (ಬೆ-೯೨-೨)
- ಸುತರಿಲ್ಲದವರಿಗೆ ಗತಿಯಿಲ್ಲವೆಂಬುದು ಕೃತಕಶಾಸ್ತ್ರ ಲೌಕಿಕ ಭಾವಕೆ
- ಮಗನಿಂದೆ ಗತಿಯುಂಟೆ (ಬೆ-೧೪೫-೫)
- ರೋಮರೋಮಕೆ ಕೋಟಿ ಲಿಂಗವೆನಿಸಿದ ಹನುಮ ಗ್ರಾಮಗಳ ಕಾಯ್ದುಕೊಂಡಿಹುದೆ ಗತಿಯಾಯ್ತು
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೧೯-೧)
- ಮಗನಿಂದೆ ಗತಿಯುಂಟೆ ಜಗದೊಳು ನಿಗಮಾರ್ಥಸಾರ ವಿಚಾರದಿಂದಲ್ಲದೆ
- ಮಗನಿಂದೆ ಗತಿಯುಂಟೆ (ಬೆ-೧೪೫-ಪ)
೧೩೫೯. **ಗತಿಗೆಡು** - ಅತಿಬೇಗ ಚಲಿಸೆಂದು ಬೆಸಸಲಾ ಮುನಿಯಿಂದ ಗತಿಗೆಟ್ಟು ಉರಗ ನಾಗಿರ್ದ ಪರಿಯರಿತು
- ನೋಡಿ ಮರುಳಾಗದಿರು (ಬೆ-೧೨೭-೧)

೧೩೬೦. ಗದೆ - ಶಂಖ ಚಕ್ರ ಗದಾ ಪದುಮ ಧಾರಕನ ಪಂಕಜಮಿತ್ರ ಶತಕೋಟಿ ತೇಜನ
- ಮಗನೆಂದಾಡಿಸುವಳು ಮೊಗ ನೋಡಿ ನಗುವಳು (ಸ-೧೯೫-೫)
- ಕಟ್ಟಾಳು ಭೀಮಸೇನನು ರಣದಿ ಗದೆಯಿಂದೆ ಕುಟ್ಟಿ ಬಿಸುಟಲಿ ನಿನ್ನ ತೊಡೆಗಳೆರಡನು
- ವಾಸುದೇವಾಯ ನಮೋ (ಬೆ-೯೦-೧೧)

೧೩೬೧. ಗನ್ನಗತಕ (ಮೋಸ) - ಗನ್ನಗತಕವ ಮಾಳ್ಪ ಗ್ರಾಮಣ್ಯಗಳ ಕಲಿತ ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ
- ಕಲಿಯೇರಿ ಬಂತು (ಬೆ-೧೩೦-೭)

೧೩೬೨. ಗಮಕ - ಗಂಧ ಕಸ್ತೂರಿ ಬೊಟ್ಟು ಗಮಕದಿಂದಲಿ ಇಟ್ಟು ಗೊಂದಲ ಗಡಿಬಿಡಿ ಸುರಲೋಕ ಅಮ್ಮಮ್ಮ
- ಆನೆ ಬರುತಾದೆ ನೋಡಮ್ಮ (ಸ-೧೫-೩)

೧೩೬೩. ಗರತಿ - ಉರಗಗಿರಿಯ ಕಾಗಿನೆಲೆ ಯಾದಿಕೇಶವನ ಗರತಿ ನೀ ಕರೆದು ತಾರೆ
- ರಮಣಿ ಕೇಳೆಲೆ ಮೋಹನ (ಬೆ-೯೬-೩)
- ಉತ್ತಮ ಗರತಿಗೆ ಅಪವಾದ ಅವಿವೇಕಿಗಳು ಎತ್ತ ನೋಡಲು ಹೆಚ್ಚಿ ಹೆದರಿಸಿತು ಉನ್ಮತ್ತ ತನದಲಿ
- ಕಲಿ ಹೆಚ್ಚಿ ಬಂದಿತಲ್ಲ (ಸ-೭೮-೧)

೧೩೬೪. ಗರಳ - ಕ್ಷೀಣದೇಹವ ಬಿಡುವೆನೆಂದು ಪಾಡಂಪಟ್ಟು ತ್ರಾಣದಲಿ ಗರಳತೈಲವ ಸೇವಿಸೆ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೪)
- ಪರನಾರಿಯರೊಡನಾಟ ಗರಳವನಟ್ಟುಂಬಾಟ
- ಅಹುದಾದಡಹುದೆನ್ನಿ (ಬೆ-೧೩೨-೪)
- ತೀವಿರ್ದ ಮಡುವ ಧುಮುಕಲುಬಹುದು ಗರಳವನು ಸೇವಿಸಬಹುದು ಜಠರದಿ
- ವಾಸುದೇವಾಯ ನಮೋ (ಬೆ-೯೦-೨)

೧೩೬೫. ಗರಳಕಂಧರ (ಶಿವ) - ಗರಳಕಂಧರ ಸಖನನುಜನ ಕೊಂದನ ಗೋವಿಂದ ಎನ್ನಿರೋ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೧)
- ಗರಳಕಂಧರನು ಬೆರಳೆತ್ತಿ ಪೊಗಳಲು ತರಳ ಗೊಲಿದು ನಿಂದೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೪)

೧೩೬೬. ಗರಿ - ಗರಿಯುಂಟು ನೋಡಿದರೆ ಪಕ್ಷಿಕುಲ ತಾನಲ್ಲ
- ಬಲ್ಲವರು ಪೇಳರಿ (ಬೆ-೧೬೪-೧)
- ಹಕ್ಕರಿಕೆ ಗರಿಯಂತೆ ಹರವು .....ಒಕ್ಕಲು ಮೇಲದು ಒಲಿದವಗೆ
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೫)
- ಗರುಡನ ಗರಿಯೊಳು ಕಡಲ ತಂದಾತನ ನಾರಾಯಣ ಎನ್ನಿರೊ
- ನಾರಾಯಣ ಎನ್ನಿ ನಾರದವರದನ (ಬೆ-೭೬-೨)

೧೩೬೭. ಗರುಡ - ರೂಢಿಯೊಳತಿ ಸೇವಕ ನಾದ ಗರುಡನಿಗೆ ಬೋಡು ಮರದ ಮೇಲೆ ಪ್ರಾಪ್ತಿಯಾಯಿತು
- ನಮಗೆಲ್ಲಿ ಮನೆಗಳಯ್ಯ (ಸ-೧೩೨-೩)
- ಗರುಡ ಶೇಷಾದಿಗಳು ಪೊತ್ತುಕೊಂಡಿಹ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-೩)
- ಶೇಷನ ಹಾಸಿಗೆ ಗರುಡ ತುರಗವು ಪೀತವಾಸದುಡುಗೆಯು ಕೊರಳಲಿ ವೈಜಯಂತಿ
- ಸಿರಿಯ ಮದವೆ ಮುಕುಂದ (ಬೆ-೬೯-೨)
- ಅಂಜನಾಸೂನು ಫಣಿಪತಿ ಗರುಡ ಪ್ರಹ್ಲಾದ ಕುಂಜರಾಧಿಪ ಬಲಿ ವಿಭೀಷಣ ಧ್ರುವ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೩)
- ಗಡ್ಡ ಮೀಸೆಗಳುಂಟು ಗರುಡ ಎಂದೆನಬೇಡಿ ಒಡ್ಡಿನಪ್ಪಿ ಬಾಹೋದು ವರುಷಕೊಮ್ಮೆ
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೪)
- ಗರುಡನ ಗರಿಯೊಳು ಕಡಲ ತಂದಾತನ ನಾರಾಯಣ ಎನ್ನಿರೊ
- ನಾರಾಯಣ ಎನ್ನಿ ನಾರದವರದನ (ಬೆ-೭೬-೨)
- ಗರುಡಗಂಧರ್ವನಗರಿಯ ಮೆರೆದಾತನ

ನಾರಾಯಣ ಎನ್ನಿರೊ
- ನಾರಾಯಣ ಎನ್ನಿ ನಾರದವರದನ (ಬೆ-೭೬-೨)
- ಅಜಜ್ಞಾನಾಧಿಕ ಬಲ್ಲ ಅನಲಸ್ನೇಹಿತ ಬಲ್ಲ ಗಜ ಚರ್ಮಾಂಬರ ಬಲ್ಲ ಗರುಡ ಬಲ್ಲ
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-೧)
- ಮೇಣದಹಿಕೋಟಿ ದಳ್ಳುರಿಯ ಗರುಡನ ಕೂಡ ತ್ರಾಣದಿಂ ಕಾದಿ ಜಯಿಸುವುದೆ ಹೇಳಾ
- ಬೇಡ ಬೇಡ ಎಲೆಲೆ ದುರಿತಗಳಿರ (ಬೆ-೨೯-೨)
- ಉರಗನಂದದಿ ಮಂಚವಾಗುವನು ನಾನಲ್ಲ ಗರುಡನಂದದಿ ಬೆನ್ನಕೊಡುವನಲ್ಲ
- ಕಾಯೊ ಕರುಣಾಕರನೆ (ಬೆ-೫೯-೩)
- ದೇಶಾಧಿದೇಶಗಳ ತಿರುಗುವ ಗರುಡನಿಗೆ ನಾಸಿಕದ ಕೊನೆ ಡೊಂಕ ತಿದ್ದಲಿಲ್ಲ ಹರಿಯು
- ಪ್ರಾಚೀನ ಕರ್ಮವಿದು (ಬೆ-೧೦೭-೩)
- ಹರಿಗೆ ವಾಹನನಾಗಿ ಹದಿನಾಲ್ಕು ಲೋಕ ವನು ಚರಿಸಿದಾ ಗರುಡನಿಗೆ ಮರವೆ ಮನೆ ಯಾಯ್ತು
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೮೯-೨)
- ಗರುಡವಾಹನವೇರಿ ಧಿಮಕೆಂದು ಬರುತಾನೆ ಸರುವ ಲೋಕ ರಕ್ಷಕನೆಂಬ ಮದ್ದಾನೆ
- ಆನೆ ಬರುತಾದೆ ನೋಡಮ್ಮ (ಸ-೧೫-೫)

೧೩೬೮. ಗರುಡಗಮನ/ಗರುಡವಾಹನ - ಗರುಡಗಮನನು ನೀನು ಮರುಳು ಪಾಪೆಯು ನಾನು
- ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ-೬೩-೧)
- ತಿಂತ್ರಿಣಿ ಮರದಡಿ ಉರಗ ಕಚ್ಚಿ ಒರಗಿರಲು ಮಂತ್ರಿಸಿ ಮನೆಗೆ ಕಳುಹಿದ ಗರುಡಗಮನನೆ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೨)
- ಗರುಡವಾಹನ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೩)
- ಗರುಡವಾಹನನಾಗಿ ಗಜವನು ಸಲಹಿದ

ನಾರಾಯಣ ಎನ್ನಿರೊ
- ನಾರಾಯಣ ಎನ್ನಿ ನಾರದವರದನ (ಬೆ-೭೬-೨)
- ಎರಡು ನಂದಿಯ ಹೂಡಿ ಗರುಡವಾಹನ ನಾಗಿ ಬರುತ ಭೋರಿಡುತಿದೆ ಅರಿಗೆ ಮೀರಿ
- ಬೀಜ ಮೂರನು ಬಿತ್ತಿ (ಬೆ-೧೬೨-೩)

೧೩೬೯. ಗರುವ/ಗರ್ವ - ಹರಿಯ ನೆನೆಯ ಲಿಲ್ಲ ಹರುಷದಿ ಗರುವ ಪುಟ್ಟಿತಲ್ಲ
- ವ್ಯರ್ಥವಾಯಿತಲ್ಲ ಜನ್ಮ ಸಾರ್ಥಕಾಗಲಿಲ್ಲ (ಸ-೨೩೧-೧)
- ಗರುವವೇತಕೊ ನಿನ್ನ ತೆರನಾವುದೊ
- ಬೆರೆಯದಿರು ಬೆರೆಯದಿರು (ಬೆ-೧೪೩-೫)
- ಗರುವದ ಹೊರೆಯಿಂದ ನೀನು ಬರಿದೆ ಕಾಲಕಳೆದೆಯೊ
- ಏನು ಬರುವುದೋ ಸಂಗಡ (ಬೆ-೧೩೭-೫)
- ಗರುವದಲ್ಲಿಹೆನೆಂಬುದರಿತೆನ್ನ ನಿನ್ನ ದಾಸರಿಗೆ ಮಾರಿದೆಯೊ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೧)
- ತಮ್ಮ ಹವಣನರಿಯದೆ ಗರ್ವ ಪಿಶಾಚಿಗಳು ಎಮ್ಮ ಮನೆಯೊಡೆವಂತೆ ಕಲ್ಲಲಿಟ್ಟು
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೩)
- ಉದರಪೋಷಣೆಗಾಗಿ ಮದದಿಂದ ಚರಿಸಿದೆ ಮದಗರ್ವವೆಂಬುದ ಬದಿಯಲಿಟ್ಟುಕೊಂಡು
- ಹೇಗೆ ನೀ ದಾಸನಾದೆ (ಬೆ-೨೨-೫)
- ಗೆಲ್ಲು ಸೋಲಿನ ಮಾತು ಸಲ್ಲದೆಲವೋ ನಿನಗಿದೆಲ್ಲವನು ಬಿಡು ಗರ್ವ ನಿನಗೇತಕೊ
- ಮೆರೆಯದಿರು ಮೆರೆಯದಿರು (ಬೆ-೧೪೮-೬)
- ಇಲ್ಲ ನಿನಗಾರು ಸರಿಯೆಂಬ ಗರ್ವದಿ ಎನ್ನ ಸೊಲ್ಲು ಕಿವಿ ಕೇಳದಂತಾಯಿತೆ ಹರಿಯೆ
- ಸಿರಿಯ ಮದವೆ ಮುಕುಂದ (ಬೆ-೬೯-೪)
- ಆಡದಿರು ಮಾತುಗಳ ಗರ್ವದಿಂದ
- ನೆಚ್ಚದಿರು ಸಂಸಾರ ನೆಲೆಯಲ್ಲ (ಬೆ-೧೧೬-೨)

– ಆ ಮಹಾಸಿರಿಯ ಗರ್ವದಿ ಮುಂದರಿಯದೆ ಭೂಮಿಯನು ಬಲಿ ತಾನಾಳುತಿರೆ
– ತಾಳಲ್ಲಲ್ಲಲ್ಲಯ್ಯೊ ಮಾಸಾಳಲ್ಲಲ್ಲಲ್ಲಯ್ಯೋ (ಸ–೧೧೦–೫)
– ತ್ರಿಣಯನನೊಲಿದ ರಾವಣನ ಗರ್ವವ ರಣಾಂಗಣದೊಳೊರಗಿಸಿದೆ ಗೋವಿಂದ
– ಪರಮಪುರುಷ ಹರಿ ಗೋವಿಂದ (ಬೆ–೩೯–೭)
– ರಾಮಚಂದ್ರನ ಸೇವೆ ಮಾಡಿ ಮೆಚ್ಚಿಸಿ ಮಹಾತಾಮಸನ ಗರ್ವವನು ಮುರಿದುಬಂದ
– ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ–೧೧೯–೧)

೧೩೭೦. ಗರುವೆ (ಗೌರವಾನ್ವಿತೆ) – ವರಮಾತೆಯ ಕೂಡ ಜನಿಸಿದ ಧೀರನ ಗರುವೆ ನೀ ತೋರೆನಗೆ
– ಏಣನಯನೆ ಏಣಭೋಜ ಮಧ್ಯಳೆ (ಬೆ–೯೯–೪)

೧೩೭೧. ಗರ್ಭ – ಅಂದು ಕೌಸಲ್ಯಗರ್ಭ ಚಂದ್ರಮನಾಗಿ ಬೆಳಗಿ ಕೊಂದೆ ರಾವಣ ಕುಂಭ ಕರ್ಣಾದಿಗಳನೆಲ್ಲ
– ಯಾದವಗಿರಿವಾಸನಹುದೋ (ಸ–೨೧೯–೩)
– ಅಂಬುಜೋದ್ಭವನ ಬರೆಹವ ಮೀರಲಾರದೆ ನರಬೊಂಬೆ ಗರ್ಭದೊಳಿದ್ದೆ ವರದಾ
– ಮೊರೆ ಹೊಕ್ಕೆ ಹರಿ ನಿಮ್ಮ ಚರಣಕಮಲವ (ಸ–೨೧೩–೧)
– ಮಲದ ಗರ್ಭದಲ್ಲಿ ನಿಂದಿರುವನು ನೀನೆಲೊ
– ನಾನು ನೀನು ಎನ್ನದಿರೊ (ಬೆ–೧೪೦–೨)
– ಹೊತ್ತು ನವಮಾಸ ಪರ್ಯಂತ ಗರ್ಭದೊಳು ಅತ್ಯಂತ ನೋವು ಬೇನೆಗಳಿಂದಲಿ
– ಆರು ಸಂಗಡ ಬಾಹೋರಿಲ್ಲ (ಬೆ–೧೫–೧)

೧೩೭೨. ಗರ್ಭವಿಚ್ಛನ (ಹೊಟ್ಟೆಯನ್ನು ಸೀಳುವುದು) – ಕಾಗಿನೆಲೆಯಾದಿಕೇಶವ ಖಳನ ಗರ್ಭವಿಚ್ಛನ ಪ್ರಹ್ಲಾದಗೆ ಪ್ರಸನ್ನವಾದುದರಿಂದ
– ಚೆಲ್ವ ಕಂಗಳ ಚೆಲ್ವಕಾರ (ಸ–೯೯–೩)

೧೩೭೫. ಗವುಡ (ಗೌಡ)–ಒಕ್ಕಲಿಗಾಗದ ಗವುಡ ರೊಕ್ಕವ ಪಡೆವಾ ಕೊರಗ
– ಅಹುದಾದಡಹುದೆನ್ನಿ (ಬೆ–೧೩೨–೨)

೧೩೭೪. ಗಸಣೆ (ಗಸಣಿ, ತೊಂದರೆ, ಕೋಟಲೆ) – ಕಲಿಗೆ ಬೆದರುವರಲ್ಲ ಕಾಲನ ಬಾಧೆಗಳಿಲ್ಲ ಸಲೆ ನರಳಿ ಪುಟ್ಟುವ ಗಸಣೆಯಿಲ್ಲ
– ಬ್ರಹ್ಮ ಲಿಖಿತವ ಮೀರಿ ಬಾಳ್ವರು (ಬೆ–೨೫–೫)

೧೩೭೫. ಗಳಗಳನೆ – ಗಳಗಳನೆ ನುಡಿವ ನಾಲಗೆ ಗಂಟೆಯುಲಿಯಂತೆ ಕೆಲಕಾಲಕೀ ಕೊಂಪೆ ಕಡೆಗಾಹುದಂತೆ
– ಎಂದಿದ್ದರೀ ಕೊಂಪೆ ಎನಗೆ ನಂಬಿಕೆಯಿರದು (ಬೆ–೧೦_೧)

೧೩೭೬. ಗಳಿಗೆ – ಈ ದೇಹ ತಾನು ಸತ್ತ ಗಳಿಗೆ ಮುಟ್ಟಲಮ್ಮರು ಬರಿದೆ ನಾವು ವ್ಯಥೆಗೆ ಸಿಕ್ಕಿದೆವೆಂಬರು ಆತ್ಮ
– ಯಾರಿಗಾರು ಬಹರು ಸಂಗಡ (ಸ–೨೨೧–೨)
– ಕಡಲೊಡೆಯ ನಿನ್ನಡಿಯ ಗಳಿಗೆ ಬಿಡಲಾಗದು
– ತೊರೆದು ಜೀವಿಸಬಹುದೆ (ಬೆ–೫೫–೨)
– ಅನುಮಾನವಾಗಿ ಜೀವನ ತೊಲಗಿದಾಕ್ಷಣದಿ ಮನೆಯೊಳೊಂದರೆಗಳಿಗೆ ನಿಲ್ಲಿಸಿಕೊಳ್ಳರೊ
– ಆರು ಸಂಗಡ ಬಾಹೋರಿಲ್ಲ (ಬೆ–೧೫–೨)
– ಗಳಿಗೆಯೊಳಗೆ ಕೀಲುಸಡಿಲದೆ ಎಣಿಕೆ ಇಲ್ಲದ ದಳವು ಯಮನ ನಗರಿಗೈದದೆ
– ನಂಬಬೇಡಿ ಸಿರಿಯು ತನ್ನದೆ (ಬೆ–೧೧೫–೧)

೧೩೭೭. ಗಳಿಸು – ಆಯಾಸಪಟ್ಟು ಗಳಿಸಿದರ್ಥ ಹೇಯವೆನದೆ ಭೋಗಿಸುತ್ತ
– ಎಷ್ಟು ಪ್ರೀತಿಯೊ ಮನಕೆ (ಸ–೫೨–೪)
– ಭೋಗಿಸದೆ ಇಹಪರಕೆ ಗಳಿಸಿದರ್ಥ ಅಪಾರ್ಥ
– ಎನ್ನ ನುಡಿ ಪುಸಿಯಲ್ಲ (ಸ–೪೭–೩)
– ಚೆನ್ನಾಗಿ ಬದುಕಿದೆ ಗಳಿಸಿದೆ ನಾನೆಂಬ ಹೆಮ್ಮೆ ಬೇಡೆಚ್ಚರಿಕೆ
– ಮಾಡು ದಾನ ಧರ್ಮ (ಸ–೨೦೪–೩)
– ಗಳಿಸದಿರು ಸೀಮೆಯನು ಗಳಿಸದಿರು ದ್ರವ್ಯವನು
– ನೆಚ್ಚದಿರು ಸಂಸಾರ ನೆಲೆಯಲ್ಲ (ಬೆ–೧೧೬–೧)

- ಗಳಿಸದಿರು ನೀ ದುರಿತ ರಾಶಿಗಳನು
- ನೆಚ್ಚದಿರು ಸಂಸಾರ ನೆಲೆಯಲ್ಲ (ಬೆ-೧೧೬-೧)
- ಆಶೆಯಿಂದ ಹಣಕಾಸ ಗಳಿಸುವ ಆದಿಕೇಶವ ನಾರಾಯಣನೆಂಬ ಶೆಟ್ಟಿ
- ಬಂದೆವಯ್ಯ ಗೋವಿಂದಶೆಟ್ಟಿ (ಬೆ-೧೫೧-೩)
- ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ
- ಬಂದೆವಯ್ಯ ಗೋವಿಂದಶೆಟ್ಟಿ (ಬೆ-೧೫೧-೨)
- ಆಸೆಯ ಬಿಡಲಿಲ್ಲ ಕಾಸು ಗಳಿಸುವೆಯಲ್ಲ ದೋಷಕೆ ಗುರಿಯಾಗಿ ಹೇಸಿಕೆಯೊಳು ಬಿದ್ದು
- ಹೇಗೆ ನೀ ದಾಸನಾದೆ (ಬೆ-೨೨-೧)
- ಮಡದಿಮಕ್ಕಳಿಗೆಂದು ಒಡವೆ ವಸ್ತ್ರವ ಗಳಿಸೆ ಹಿಡಿಯಲಾ ಯಮನವರ ಕಟ್ಟಿಗೊಳಗಾಗಿ
- ಜಪವ ಮಾಡಿದರೇನು (ಬೆ-೧೨೩-೨)
- ಹತ್ತು ಎಂಟು ಲಕ್ಷ ಗಳಿಸಿ ಮತ್ತೆ ಸಾಲದೆನುತ
- ಡಿಂಬಿನೊಳು ಪ್ರಾಣವಿರಲು (ಬೆ-೧೧೭-೪)

೧೩೭೮. ಗಳು/ಗಳೆ - ಎಲುವ ಗಳುವಂ ಮಾಡಿ ಬಲುನರಗಳಂ ಬಿಗಿದು ಚೆಲುವ ತೊಗಲಂ ಪೊದಿಸಿ ಮಲ ಮಾಂಸವಂ ತುಂಬಿ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೨)
- ಎಲವುಗಳ ಗಳುಮಾಡಿ ಬಲು ನರಂಗಳ ಬಿಗಿದು
- ನೊಂದೆನಾ ಹರಿಯೆನ್ನದೆ (ಬೆ-೧೩-೨)
- ಬಳೆಯ ಕೇಳಿದರಲ್ಲಿ ಬಳೆಯೆ? ಊರ ಮುಂದಿನ ಗಳೆಯೆ?
- ಎಂಥ ಟವಳಿಗಾರನಮ್ಮ (ಸ-೪೩-೩)

೧೩೭೯. ಗಾಂಗೇಯ (ಭೀಷ್ಮ) - ಮರಣ ತನ್ನಿಚ್ಛೆಯೊಳಾದ ಗಾಂಗೇಯನು ಧುರದೊಳು ಷಂಢನ ನೆವದಿಂದಲಿ
- ಬಂದಿದೆ ದೂರು ಬರಿದೆ (ಬೆ-೮೬-೨)
- ಪಡೆಯೊಳಗೆ ಕೌರವನೊ ನುಡಿಯೊಳಗೆ ಗಾಂಗೇಯನೊ
- ಬೆರೆಯದಿರು ಬೆರೆಯದಿರು (ಬೆ-೧೪೩-೨)

೧೩೮೦. ಗಾಂಡೀವಿ (ಅರ್ಜುನ) - ಮಾವ ಕಂಸನ ಕೊಂದು ಮನುಜ ವೇಷದಲಿ ಗಾಂಡೀವಿಯಾ ರಥದ ಬಂಡಿಯ ಬೋವ ನಾದೆ
- ನೀನಾವ ಬಾಂಧವನೊ (ಬೆ-೭೮-೧)

೧೩೮೧. ಗಾಂಧಾರಿ (ಒಂದು ರಾಗ) - ಮಾಳವಿ ಶ್ರೀದೇವಿ ಗಾಂಧಾರಿ ಮಲಹರಿ ಸಾಳಗವು ಸೌರಾಷ್ಟ್ರ ಗುಂಡಕ್ರಿಯಾ ಲಲಿತ
- ತಂಗದಿರನನಿಮಿಷ ತಾರಕೆಗಳು (ಬೆ-೧೯೯-೫)

೧೩೮೨. ಗಾಂಧಾರಿ (ಕೌರವರ ತಾಯಿ) - ಅತ್ತೆಯಲ್ಲವೆ ಎನಗೆ ಗಾಂಧಾರಿ ದೇವಿಯರೆ
- ವಾಸುದೇವಾಯ ನಮೋ (ಬೆ-೯೦-೪)

೧೩೮೩. ಗಾಣ (ಎಣ್ಣೆ ತೆಗೆಯುವ ಯಂತ್ರ) - ಗಾಣದೆತ್ತಿನಂತೆ ಕಣ್ಣ ಮುಚ್ಚಿ ಪ್ರದಕ್ಷಿಣೆಯ ಮಾಡಿ ಕಾಣದೆ ತಿರುಗುವೆನು ಎರಡು ಕಣ್ಣಿದ್ದು ನಾನು
- ಎಳ್ಳು ಕಾಳನಷ್ಟು ಭಕ್ತಿ (ಬೆ-೧೨-೨)

೧೩೮೪. ಗಾಣ (ಮೀನಿನ ಗಾಳ) - ಗಾಣದ ತುದಿಯೊಳಿರ್ಪ ಭೂನಾಗನ ಕಂಡು ಪ್ರಾಣಾಹುತಿಯೆಂದು ಸವಿವ ಮೀನಂತೆ
- ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-೩)

೧೩೮೫. ಗಾನ - ಅಂಜನೇಯ ವರಸೂನು ಆಶ್ರಿತ ಕಾಮಧೇನು ಮಂಜುಳ ಗಾನ ಗೀತ ಪರಮ ವಿಖ್ಯಾತ
- ಕದರಮಂಡಲಗಿಯ ಕರುಣಿ ಹನುಮ ರಾಯ (ಸ-೭೫-೧)
- ಗಾನರಸಲೋಲ ಆಗಮಶೀಲ ಭಕ್ತಪರಿಪಾಲ ಗೋಪಾಲಬಾಲ
- ನೀನುಪೇಕ್ಷೆಯ ಮಾಡೆ (ಬೆ-೪೯-ಪ)

೧೩೮೬. ಗಾಯ - ಗಾಯ ಕಟ್ಟುವರಿಲ್ಲ ಗಾಳಿ ಹಾಕುವರಿಲ್ಲ
- ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ-೭೧-ಅ)
- ಓಹೋ ಎನ ಜೀವ ಮೈಯೆಲ್ಲ ನವಗಾಯ
- ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ-೭೧-ಪ)

೧೩೮೭. ಗಾಯನ - ಕಡು ನಾದದ ಗಾಯನ

ಮಾಡುತಿಹುದು
- ಮರ ನುಂಗುವ ಪಕ್ಷಿ (ಬೆ-೧೬೧-೨)
- ಇಷ್ಟ ಓಲೈಸುವ ಗಾಯನದಲಿ ನಿಂತು ಗಟ್ಟಿ ಪಾಡುವ ತುಂಬುರ ನಾರದರ ಸಂಭ್ರಮದಿ
- ಸಿರಿಯ ಮದವೆ ಮುಕುಂದ (ಬೆ-೬೯-೩)

೧೩೮೮. **ಗಾರಾಗು** - ಗಾರಾದಜಮಿಳ ನಾರಗ ಎನಲು ಪಾರಗಾಣಿಸಿದಪರ ಗುಣನಿಧಿಯ
- ಮರೆಯದಿರು ಹರಿಯ (ಸ-೨೦೩-೨)

೧೩೮೯. **ಗಾರುಡಿ** - ಗಾರುಡಿಯ ಮತ ಬಿಟ್ಟು ನಾದ ಬ್ರಹ್ಮನ ಪಿಡಿದು ಸಾರಿಸಾರಿ ಮುಕ್ತಿಯನ್ನು ಶಮನದಿಂದ ಮತ್ತೆ ಸುಮನದಿಂದ
- ದಾಸನಾಗೋ ಭವಪಾಶ ನೀಗೋ (ಬೆ-೨೦-೫)

೧೩೯೦. **ಗಾರ್ಗೇಯ/ಗಾರ್ಗ್ಯ** - ಮೂಜಗದ ವ್ಯವಹಾರಿ ಮುಂಕೊಂಡು ಭರದ್ವಾಜ ರೋಮಶ ಅತ್ರಿ ಗಾರ್ಗೇಯ
- ತಂಗದಿರನನಿಮಿಷ ತಾರಕೆಗಳು (ಬೆ-೧೯೬-೬)
- ಯುದ್ಧದಲಿ ತಾರಕನೊ ವಿದ್ಯೆಯಲಿ ಗಾರ್ಗ್ಯನೊ
- ಬೆರೆಯದಿರು ಬೆರೆಯದಿರು (ಬೆ-೧೪೩-೫)

೧೩೯೧. **ಗಾಲವ** (ಒಬ್ಬ ಋಷಿಯ ಹೆಸರು)
- ಜಲಜಾಪ್ತ ವರಗಾಲವಾನ್ವಿತ ಅತ್ರಿ ಶಾಂಡಿಲ್ಯ
- ಸಿಂಗರದ ಸಿರಿಧರನೆ (ಬೆ-೧೬೭-೪)

೧೩೯೨. **ಗಾಲಿ** - ಲೋಕವೀರೇಳನ್ನು ತಿರುಗುವಾ ರವಿರಥಕೆ ಏಕಗಾಲಿಯು ಏಳು ಕುದುರೆಯಿಂದ
- ಪ್ರಾಚೀನ ಕರ್ಮವಿದು (ಬೆ-೧೦೭-೨)

೧೩೯೩. **ಗಾಸಿ** - ಗಾಸಿ ಮಾಡದಿರು ಇನ್ನು ವಾಸುದೇವನೆ
- ಈಶ ನಿನ್ನ ಚರಣ ಭಜನೆ (ಬೆ-೬೫-೧೩)
- ಮೀಸಲೂಳಿಗವನು ಮಾಡದೆ ಈ ಪರಿಕ್ಲೇಶದಿಂದಲಿ ಬಲು ಗಾಸಿಯಾದೆನಯ್ಯ
- ಕಾಡುವ ದುರಿತಗಳ ನೀ ಬಿಡಿಸೆಂದು (ಬೆ-೬೦-೨)
- ಗಾಸಿಯನು ಮಾಡದಲೆ ದೋಷವನು ಪರಿಹರಿಸೊ ಸಾಸಿರ ನಾಮದಾ ಕೃಷ್ಣ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮-೨)

೧೩೯೪. **ಗಾಳ** - ಬೇಳುವೆಯ ಮಾತಾಡಿ ಗಾಳ ಹಾಕದಿರಯ್ಯ
- ಬೀದಿಯೊಳು ಯಾತರಾ ನಂಟು ಬೇಡ (ಸ-೧೮೫-೨)

೧೩೯೫. **ಗಾಳಗೂಳ** (ಕುತಂತ್ರವಾಡಿ ಜೀವಿಸುವವನು) - ಗಾಳಗೂಳರೆಲ್ಲ ಕೂಡಿ ತೂಳದೇವರ ಮಾತ ಕೇಳಿ
- ಕಣಿಯ ಹೇಳಬಂದೆ ನಾನು (ಬೆ-೭೨-೩)

೧೩೯೬. **ಗಿಡ** - ತನುರೋಮ ಗಿಡ ವೃಕ್ಷ ತಳಿರು ಭುಜಲತೆ ಮೆರೆವ ಘನ ಸಿಂಹ ಮೃಗ ಗಜಗಳಿಂದೊಪ್ಪುವ
- ಪಥ ನಡೆಯದಯ್ಯ (ಬೆ-೯_೨)
- ಗಿಡವ ನುಂಗಿತು ಗಿಡದೊಡ ತೊಟ್ಟ ನುಂಗಿತು
- ಹಲವು ಜೀವನವ ಒಂದೆಲೆ ನುಂಗಿತು (ಬೆ-೧೫೮-೩)
- ಗಿಡದ ತಾಯಿ ತಂದೆಯ ನುಂಗಿತು
- ಹಲವು ಜೀವನವ ಒಂದೆಲೆ ನುಂಗಿತು (ಬೆ-೧೫೮-೩)

೧೩೯೭. **ಗಿಡುಗ** - ಮುಂಗೈ ಮೇಲಿನ ಗಿಡುಗ ಎತ್ತಿನ ಮ್ಯಾಲಿನ ಧಡಗ? ಹೋಗೆನುತಾನೆ
- ಎಂಥ ಟವಳಗಾರನಮ್ಮ (ಸ-೪೩-೫)

೧೩೯೮. **ಗಿಡ್ಡ** - ಗಿಡ್ಡ ಮೀಸೆಗಳುಂಟು ಗರುಡ ಎಂದೆನಬೇಡಿ ಒಡ್ಡಿನಪ್ಪಿ ಬಾಹೋದು ವರುಷ ಕೊಮ್ಮೆ
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೪)

೧೩೯೯. **ಗಿರಿ** - ಹಿಂದಿನ ಮಗ್ಗುಲಲಿ ಗಿರಿ ನಿಚಯಂಗಳು ಸಂಧಿಯಲಿ ಮಕರಂದ ದೇವತೆಗಳು
- ವಿಶ್ವಲೋಕೇಶ ವಿಶ್ವಲೋಕೇಶ (ಸ-೨೩೪-೨)
- ಸಲೆ ದೈತ್ಯನ ಕೊಂದು ಸೀತೆಯ ತಂದನಿಗೆ ಗಿರಿ ತಲೆಯಮೇಲ ಇಹ ಪ್ರಾಪ್ತಿಯಾಯಿತು
- ನಮಗೆಲ್ಲಿ ಮನೆಗಳಯ್ಯ (ಸ-೧೩೨-೧)
- ಆಗಮವ ತಂದಿಹನೆ ರಂಗ ಬೇಗದಿ ಗಿರಿಯ

ಬಿಡಬಾರದು
- ವರಕವಿಗಳ ಮುಂದೆ ನರಕವಿಗಳ ವಿದ್ಯೆ (ಸ-೨೩೨-೫)
- ಸತಿಯು ಸುತರು ಪುತ್ರ ಮಿತ್ರರತಿಶಯದೊಳು ತಂದೆ ತಾಯಿ ಅತಿವಿನೋದಗೈವ ಭಾವ
- ಯಾರಿಗಾರು ಬಹರು ಸಂಗಡ (ಸ-೨೨೧-೨)
- ತತ್ತಿಯಾದ ಬ್ರಹ್ಮನೀಗೆ ದಿಕ್ಕು ಅಖಿಲಾಂಡ ವೆಲ್ಲ ಹೆತ್ತ ತಂದೆಗಾದವನೆ ನಿತ್ಯವುಳ್ಳವ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೪)
- ತಂದೆಯ ಮುಂದೆ ಮಗನನು ಬೈದು ಭಂಜಿಸಲು
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ-೧೪೫-೧)
- ತಂದೆಯ ಮುಂದೆ ಪತ್ನಿಯ ಪಿಡಿದೆಳೆದು ಅಂಜಿಸಲು
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ-೧೪೫-೧)
- ಅಂದು ಸಾಧಿಸಲು ಕಂಬದ ಬಳಿಯೆ ತನ್ನ ತಂದೆಯ ಕೊಲಿಸಿದನೆಂಬರು ಜನರು
- ನಡತೆ ಹೀನನಾದರೇನಯ್ಯ (ಸ-೧೨೭-೨)
- ಪೃಥ್ವಿಯ ತಲೆಯನು ಪರೆಮಾಡಿ ತಾಳಿದಳು ತ್ಯಾನಮಮ್ಮನ ತಂದೆಯ ಮೆಲುವನ
- ನಮಗೆಲ್ಲಿ ಮನೆಗಳಯ್ಯ (ಸ-೧೩೨-೨)
- ಒಂದುಕ್ಷಣ ವಾಯುಬರೆ ದುರ್ಗಂಧ ಹೇಸುವುದು ತಂದೆಯೊಡಲೊಳು ಮೂರು ಮಾಸ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೩)
- ಬಾಲಕ ತನ್ನ ತಾಯ್ತಂದೆಯೊಳ್ ಮುನಿದು ಹಲಕಾಲ ವನದೊಳು ತಪವನು ಮಾಡಲು
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೩)
- ಹಿರಿಯ ತಮ್ಮನ ಸುತ್ತಿ ನುಂಗದೆ ತಂದೆಯ ಮರಳಿ ನುಂಗಿದ ಧೀರನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೪)
- ನಾಲಗೆಯೆರಡರವನ ಭುಂಜಿಸುವನ ಮೇಲೇರಿ ಬಹನ ತಂದೆಯು ಇಹ ಗಿರಿಯನು
- ರಮಣಿ ಕೇಳೆಲೆ ಮೋಹನ (ಬೆ-೯೬-೨)
- ಶ್ರೀದೇವಿ ಭೂದೇವಿ ಮಾತೆಯರು ತಾವಿರಲು ಯಾದವರಾಯ ಮೋಹದ ತಂದೆಯು
- ಆರು ಸಮಯಕ್ಕೊದಗಲಿಲ್ಲ (ಬೆ-೩೨-೨)
- ಮನಸಿಜನರಿಯ ತಂದೆಯ ಭಕ್ಷಿಪನ ಪೊತ್ತನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೧)
- ಮಂದೆಗಾಯ್ದವನ ಮನ್ಮಥನ ಪೆತ್ತವನ ತಂದೆ ಶ್ರೀ ಬಾಡದಾದಿಕೇಶವನ
- ಕರೆತಾರೆ ಕಾಮಿನಿಕಮಲಜಪಿತನ (ಬೆ-೯೩-೫)
- ಅಂಧಕನನುಜನ ಕಂದನ ತಂದೆಯ ಕೊಂದನ ಶಿರದಲಿ ನಿಂದವನ
- ಮಂಗಲಂ ಜಯ ಮಂಗಲಂ (ಬೆ-೧೦೨-೧)
- ಅಣ್ಣ ತಮ್ಮ ತಾಯಿ ತಂದೆ ಬಯಸಲಾಗದು
- ಡಿಂಬಿನೊಳು ಪ್ರಾಣವಿರಲು (ಬೆ-೧೧೭-೨)
- ಆಯಿತೊ ಹೋಯಿತೊ ಏನಾಯಿತೋ ಈ ದೇಹಕ್ಕೆ ತಾಯಿ ಯಾರೊ ಇನ್ನು ತಂದೆ ಯಾರೊ
- ದಾಸನಾಗೋ ಭವಪಾಶ ನೀಗೋ (ಬೆ-೨೦-೩)
- ಜಗದೊಳಗೆ ತಾನು ತಂದೆಯ ಮಾತು ಕೇಳದಾ ಮಗನು ಇಹ ಪರಕೆ ಸಲುವನೆ ಪ್ರಾಜ್ಞನೆ
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೧)
- ಇಂದು ಭವದ ಬಂಧ ಬಿಡಿಸು ತಂದೆ ಗೋವಿಂದಾ
- ಈಶ ನಿನ್ನ ಚರಣ ಭಜನೆ (ಬೆ-೬೫-೩)
- ಇಂದೆನ್ನ ಮಾನ ಅಭಿಮಾನವನು ತಂದೆಯೆ ಮುಕುಂದ ನಿನಗೊಪ್ಪಿಸಿದೆನೊ
- ವಾಸುದೇವಾಯ ನಮೋ (ಬೆ-೯೦-೮)
- ಹರಿಯ ಮಗನ ಶಿರ ಹರಿದನ ತಂದೆಯ ಹಿರಿಯ ಮಗನ ತಮ್ಮನ ಪಿತನ

– ಮಂಗಲಂ ಜಯ ಮಂಗಲಂ (ಬೆ–೧೭೨–೩)
– ಹೆತ್ತ ತುಪ್ಪವನಿಕ್ಕಿ ಸಲಹಿದ ತಾಯ್ತಂದೆ ಅತ್ತು ಕರೆದುಳಿವರು ಮತ್ತೆ ಬೆನ್ನಲೆ ಬಾಹರೆ
– ಆರು ಸಂಗಡ ಬಾಹೋರಿಲ್ಲ (ಬೆ–೧೫–೧)
– ಕ್ಷಣವಿಲ್ಲದೆ ತಾಯ ಶಿರವರಿದು ತಂದೆಯನು ಪ್ರಾಣಹತ್ಯವ ಮಾಡಿದರ ಕುಲವನು
– ನೋಡಯ್ಯ ನಿನ್ನ ದಾಸರ (ಬೆ–೮೫–೬)
– ಗಜವನೇರಿದನ ತಂದೆಯ ತಾಯನಳೆದನ ಶ್ರೀರಾಮನೆನ್ನಿರಿ
– ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ–೮೧–೨)
– ತಾಯಿತಂದೆಯ ಬಿಟ್ಟು ತಪವ ಮಾಡಲು ಬಹುದು
– ತೊರೆದು ಜೀವಿಸಬಹುದೆ (ಬೆ–೫೫–೧)
– ತಂದೆ ಸಿರಿ ಕಾಗೆನೆಲೆಯಾದಿಕೇಶವನ ಪದ ದ್ವಂದ್ವವನು ಬಿಡೆನು ಬಿಡೆನೈ
– ನೊಂದೆನಾ ಹರಿಯೆನ್ನದೆ (ಬೆ–೧೩–೫)
– ತಂದೆ ಕಾಗೆನೆಲೆಯಾದಿಕೇಶವನ ನಾಮ ಒಂದೇ ವೈಕುಂಠವನೈದಿಪುದಯ್ಯ
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೭)
– ತಂದೆ ತಾಯಿಯು ನೀನೆ ಬಂಧುಬಳಗವು ನೀನೆ
– ವಾಸುದೇವಾಯ ನಮೋ (ಬೆ–೯೦–೮)
– ತಂದೆ ತಾಯ ಬಸುರಿನಲಿ ಬಂದೆ ನಂದಿ ಗಿಂದಿಗೂ
– ಒಲ್ಲೆನೆಂದರಾಗುವುದೆ (ಬೆ–೧೧೦–೧)
– ತಂದೆ ತಾಯ್ ಆರು ಆನಿದ್ದ ಊರಾವುದೋ
– ನೊಂದೆನಾ ಹರಿಯೆನ್ನದೆ (ಬೆ–೧೩–೫)
– ತಂದೆಯುದರದಿ ಮೂರು ಮಾಸ ತಾಯೊಡಲಿನಲಿ ಸಂದೇಹವಿಲ್ಲ ನವಮಾಸ
– ನೊಂದೆನಾ ಹರಿಯೆನ್ನದೆ (ಬೆ–೧೩–೧)
– ತಂದೆಯೊಡಲನು ಸೀಳಿಸಿದವರೊಳು ದೇವೇಂದ್ರನ ತಲೆಗೆ ತಂದವರೊಳು
– ಶೇಷ ಶಯನ ನಿನ್ನ ಭಾಗವತರ (ಬೆ–೨೭–೧)
– ತಂದೆಗೆ ಹಿರಿಯನೆಂದೆನಿಸಿಕೊಂಡಾತನ ಹೊಂದಿಸಿದವರಣ್ಣನ
– ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ–೯೫–೨)
– ತಂದೆತಾಯನು ಬೈದು ಬಾಧಿಸುವವನ ಸಂಗ
– ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ–೧೧೯–೧)
– ಗಿಡದ ತಾಯಿ ತಂದೆಯ ನುಂಗಿತು
– ಹಲವು ಜೀವನವ ಒಂದೆಲೆ ನುಂಗಿತು (ಬೆ–೧೫೮–೩)

೧೭೭೭. **ತಂಪು** – ಕೆಂಪು ಮೂಗಿನ ಪಕ್ಷಿ ತಂಪಿನೊಳಿರುವದು ನೆಂಪು ಬಲ್ಲವರು
– ಕೆಂಪುಮೂಗಿನ ಪಕ್ಷಿ (ಸ–೮೮–ಪ)

೧೭೭೮. **ತಂಬಿಟ್ಟು** – ಸಂಭ್ರಮದಲಿ ಒಂದು ಹೊತ್ತು ನೇಮದಲ್ಲಿದ್ದು ತಂಬಿಟ್ಟನಾ ದೀಪ ಹೊರಲೇತಕೆ
– ದಾನ ಧರ್ಮವ ಮಾಡಿ ಸುಖಿಯಾಗು (ಬೆ–೧೩೯–೨)

೧೭೭೯. **ತಕ್ಕೊ** (ತೆಗೆದುಕೊ) – ಚೋರ ನಿನ್ನ ಕಂದ ಕಂಡು ಸೀರೆಯ ತಕ್ಕೊಂಡು ಹೋಗಿ
– ಸೈಯೇ ಇದು ಸೈಯೇ ಗೋಪಿ (ಬೆ–೧೦೪–೫)

೧೭೮೦. **ತಗ್ಗಿಸು** – ಮಾನದಲಿ ಮನವ ತಗ್ಗಿಸಲುಬಹುದು
– ತೊರೆದು ಜೀವಿಸಬಹುದೆ (ಬೆ–೫೫–೩)
– ಎವೆಯಿಕ್ಕದಲೆ ನೋಡಿದ ತಲೆಯ ತಗ್ಗಿಸಿ ಕವಲುದಾರಿಯೊಳಾಡಿದ ಕಂಬದಿ ಮೂಡಿ
– ಇಂದು ನೀ ಕರೆದುತಾರೆ (ಬೆ–೯೨–೨)

೧೭೮೧. **ತಗ್ಗು** – ಸತ್ತ್ವ ತಗ್ಗಿದ ಮೇಲೆ ಸಾಮರ್ಥ್ಯವೆ
– ಬಾಯಿ ನಾರಿದ ಮೇಲೆ (ಬೆ–೧೪೨–೩)

೧೭೮೨. **ತಟ್ಟು** – ಡೊಳ್ಳಿನ ಮೇಲ್ ಕೈಯ ಭರಮಪ್ಪ ಹಾಕ್ಯಾನು ತಾಳವ ಶಿವನಪ್ಪ ತಟ್ಟ್ಯಾನ್ಯಾ
– ದೇವಿ ನಮ್ಮ ದೇವರು ಬಂದರು (ಬೆ–೭೭–೧೧)
– ಕಾಲ ಗೆಜ್ಜೆಯ ಕಟ್ಟಿ ಮೇಲೆ ಕರತಾಳ ತಟ್ಟಿ ಶ್ರೀಲೋಲನ ಗುಣ ಪೊಗಳದಲೇ ನೀ
– ಹೇಗೆ ನೀ ದಾಸನಾದೆ (ಬೆ–೨೨–೭)

೧೭೮೩. **ತಡ** – ಇದ್ದೀಯಾ ಶ್ರೀಹರಿ ನೀನು ವೃದ್ಧಿಸಿದ್ಧಿಯ ನಡುವೆ ಪದುಮನಾಭನು ಅಭಿವೃದ್ಧಿಯಾಗಲು ತಡವೇನು
– ಇದ್ದೀಯಾ ಶ್ರೀ ಹರಿ ನೀನೊಲಿದು ಬಂದಿದ್ದೀಯಾ (ಸ-೩೨-೧)

೧೭೮೪. **ತಡಿ** (ದಡ, ತೀರ) – ಕಡಹಾಯಿಸೊ ಕಮಲಲೋಚನನೆ ಎನ್ನ ತಡಿಯ ಸೇರಿಸೊ ತರಣಿಶತಕೋಟಿತೇಜ
– ಕಡಹಾಯಿಸೊ ಕಮಲಲೋಚನನೆ (ಬೆ-೬೨-ಪ)
– ಹಳ್ಳದ ತಡೆಯಲಿದ್ದ ಸುಳ್ಳರೆಲ್ಲ ಕೂಡಿಬಿದ್ದು ಬೆಳ್ಳನೆ ಬೆಳತನಕ ನೀರ ತರುವರೆಲ್ಲರು
– ಕಣಿಯ ಹೇಳಬಂದೆ ನಾನು (ಬೆ-೭೨-೨)

೧೭೮೫. **ತಡೆ** (ಅಡ್ಡಗಟ್ಟು) – ಮಾಡಬೇಕೆಂಬರ ತಡೆದು ಕಾಡಿಪನವನು ಹಿಡಿಗೆ ಅಡಗದಾ ಹಿರಣ್ಯಗರ್ಭನವನಿರೆ
– ಕೊಡಲು ನೀನಾರು (ಸ-೯೨-೧)
– ಮಾಡುವ ದಾನ ತಡೆದು ಶುಕ್ರನು ಕೆಟ್ಟ
– ನಾ ನಿಮ್ಮ ದಾಸರ ದಾಸ (ಸ-೧೩೪-೨)
– ಒಲಿದು ಇತ್ತಪೆನೆನಲು ಧಾರೆಯನೆರೆಯಲ ಸುರಕುಲಗುರುವು ಜುಳಿಗೆಯೊಳು ತಡೆದು ನಿಲಲು
– ನೋಡಯ್ಯ ನಿನ್ನ ದಾಸರ (ಬೆ-೮೫-೫)

೧೭೮೬. **ತಡೆ** (ನಿಧಾನಿಸು) – ಒಡೆಯ ಅಂಬುಧಿಯೊಳು ಪೊಕ್ಕು ವೇದವ ತಂದು ತಡೆಯದೆ ಅಜಗಿತ್ತನೆಂದೆನುತ
– ಅರಸಿನಂತೆ ಬಂಟನೊ (ಬೆ-೫_೧)
– ತಪ್ಪದು ಎಷ್ಟೊತ್ತಾದರು ತಡೆದೆವು ಜಯ ಜಯವೆನುತ
– ಸೈಯೇ ಇದು ಸೈಯೇ ಗೋಪಿ (ಬೆ-೧೦೪-೮)

೧೭೮೭. **ತಡೆ** (ಸೈರಿಸು) – ಖತಿಯನು ತಡೆದನ ಸತಿಯು ಜನನಿ ಸುತ ಸತಿಯರನಾಳದ ಚತುರನಿಗೆ
– ಮಂಗಲಂ ಜಯ ಮಂಗಲಂ (ಬೆ-೧೭೨-೨)

೧೭೮೮. **ತಡೆಗಡೆ** (ಕತ್ತರಿಸು) – ಮನ್ನಿಸಲೈದಿ ಅರ್ಭಕನ ಅಡಿಯಿಟ್ಟಳೆಯೆ ಭೂಮಿಯನು ಕ್ಷತ್ರಿಯರ ಶಿರವ ತಡೆಗಡೆಯೆ
– ಪೊಸರನ ಜನಕನೇ (ಬೆ-೧೬೮-೫)

೧೭೮೯. **ತಡೆಗಾರ** (ಹಾವಾಡಿಗ, ಗಾರುಡಿಗ) – ಧರೆ ನಡುಗುವ ಹಾವನು ನಾ ಪಿಡಿವೆನೆ ತರಳನು ತಡೆಗಾರನೆ
– ನೆರೆದು ಗೋಪಿಯರೆಲ್ಲರು (ಬೆ-೧೦೩-೮)

೧೭೯೦. **ತಣಿ** – ಅಂದಿಗೊ ಇಂದಿಗೊ ಒಮ್ಮೆ ಸಿರಿ ಕಮಲೇಶನನ್ನು ಒಂದು ಬಾರಿ ಅರುಹಿಂದ ನೆನೆಯಲಿಲ್ಲ ಮನ ತಣಿಯಲಿಲ್ಲ
– ದಾಸನಾಗೋ ಭವಪಾಶ ನೀಗೋ (ಬೆ-೨೦-೪)

೧೭೯೧. **ತಣ್ಣನ** (ತಂಪಾದ) – ಹುಣ್ಣಿವೆ ಮುಂದಿನ ಬೆಳಗಲಿ ಬಾಹೋದು ತಣ್ಣನ ಹೊತ್ತಲಿ ತವಕಗೊಂಬುವುದು
– ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೧)

೧೭೯೨. **ತತ್** (ತಾಳದ ನುಡಿ) – ಕಪ್ಪೆ ತತ್ಥೈ ಯೆಂದು ಕುಣಿವುದ ಕಂಡೆ ಬಾಡದಾದಿಕೇಶವನ ಕಣ್ಣಾರೆ ಕಂಡೆ
– ಲಟಪಟ ನಾ ಸಟೆಯಾಡುವನಲ್ಲ (ಬೆ-೧೫೯-೩)

೧೭೯೩. **ತತಿ** – ರಾಮ ಎಂದವನೆ ಧನ್ಯನೆಂದು ಶ್ರುತಿತತಿಗಳು ಪೊಗಳುತಿರೆ
– ರಾಮ ನಾಮವ ನೆನೆ ಮನವೆ (ಸ-೨೨೬-ಅ)
– ಸತ್ತು ಹುಟ್ಟಲಿಲ್ಲವೆಂದು ಅತ್ತ ನೋಡಿ ಇತ್ತ ತಿರುಗಿ ತತ್ತಿಯೊಳಗೆ ಬೆಳೆದವೆಲ್ಲ ಸತ್ತವೆನ್ನುತ
– ಎರಡು ಸಾವಿರದ ಜಿಹ್ವೆಯುರಗ (ಸ-೪೮-೪)
– ನಿಗಮತತಿ ಕಾಣದ ಮಹಾ ಮಹಿಮನನು ನಮಿಪ ಬಗೆಯನಾನರಿವೆನೆಂತೈ ದೇವ
– ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೪)
– ಪೊಸ ಶಾಸ್ತ್ರಕ್ರಮ ಕೂಗೆ ಜಾರ ತಸ್ಕರ ತತಿಯು ಬಸವಳಿದು ಭಯದಿ ಪೋಗೆ
– ಸಿಂಗರದ ಸಿರಿಧರನೆ (ಬೆ-೧೬೭-೧)

– ಸಿರಿ ದಾರಿದ್ರ್ಯವು ಸುರ ತತಿಗಡರುವ ತೆರನೆಂದರಿದದರಿಂದಲಿ
– ಬೆರೆಯದಿರು ಬೆರೆಯದಿರು (ಬೆ–೧೪೪–೨)
೧೭೫೪. ತತ್ಕಾಲ – ನಾಡ ನಾನಾ ತಪೋಧನರು ತತ್ಕಾಲದಲಿ ಬೀಡ ಹೊರ ವಂಟು ನಡೆದುದು
– ತಂಗದಿರನನಿಮಿಷ ತಾರಕೆಗಳು (ಬೆ–೧೬೯–೧)
೧೭೫೫. ತತ್ತ್ವ /ತತ್ವ– ಮೂರು ರೂಪವ ತಾಳಿ ಮಹಾಯೋಗ್ಯರುಗಳಿಗೆ ಸಾರ ತತ್ತ್ವವ ಪೇಳ್ದೆ
– ಎಷ್ಟು ಪೊಗಳಲಿ ನಾನು (ಸ–೫೩–೩)
– ಸುಲಲಿತ ತತ್ತ್ವವನು ಸುಲಭ ಮಾರ್ಗದಿ ತೋರೊ
– ಅರಿತು ಭಜಿಪರ್ಯ್ಯಾರಯ್ಯ ರಂಗಯ್ಯ ನಿನ್ನ (ಸ–೮–೩)
– ಸಾರ ತತ್ವಗಳನೆಲ್ಲ ಶೋಧಿಸಿ ಸೂರೆ ಮಾಡಿದಾತಗೆ
– ಶರಣು ಶರಣು ದಶರಥ ರಾಮದೂತಗೆ (ಸ–೨೩೬–೩)
– ಹತ್ತರೊಳು ಬಿದ್ದಿರ್ದ ಸರ್ಪ ಸಾಯಲಿ ಬಹುದೆ ತತ್ತ್ವಬಾಹಿರರಾದಿರೈ
– ವಾಸುದೇವಾಯ ನಮೋ (ಬೆ–೯೦–೪)
– ಶಪಥದಲಿ ರಣದೊಳರಸನ ಹಿಡಿವನೆಂದು ಬಲು ತಪಸಿಗಳ ಕಳುಹಿ ತತ್ತ್ವ ಬೋಧಿಸಿ
– ನೀನಾವ ಬಾಂಧವನೊ (ಬೆ–೭೮–೫)
– ಮಮಕಾರ ತತ್ತ್ವದಲಿ ಮತ್ತೊಂದು ರೂಪಾಗಿ ಅಮಿತಗುಣಮೂರ್ತಿ ನೀನಂದು ಬೇರೆ
– ನೋಡಯ್ಯ ನಿನ್ನ ದಾಸರ (ಬೆ–೮೫–೨)
– ತತ್ವದ ಅರ್ಥವ ವಿಚಿತ್ರದಿ ಪೇಳೆ ಕತ್ತೆಯ ಚಿತ್ತಕೆ ಹತ್ತೀತೆ
– ಕೇಶವನೊಲುಮೆಯು ಆಗುವ ತನಕ (ಸ–೮೯–೩)
– ತತ್ವಭಾಂಡವ ತೊಳೆಯಬೇಕಣ್ಣ ಸತ್ಯಾತ್ಮನಾಗಿ ಅರ್ತಿ ಅಕ್ಕಿಯ ಮಥಿಸಬೇಕಣ್ಣ
– ಅಡಿಗೆಯನು ಮಾಡಬೇಕಣ್ಣ (ಸ–೧–೨)
– ಆತ್ಮನಾವ ಕುಲ ಜೀವನಾವಕುಲ ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ
– ಕುಲ ಕುಲ ಕುಲವೆನ್ನುತಿಹರೊ (ಬೆ–೧೨೦–೩)
– ಆರು ಮೂರು ಹದಿನಾರು ತತ್ತ್ವವ ಮೀರಿ ತೋರುವ ಕಾಗೆನೆಲೆಯಾದಿಕೇಶವನಡಿ
– ದಾಸನಾಗಬೇಕು ಸದಾಶಿವನ (ಬೆ–೨೪–೩)
– ತತ್ತ್ವವನರಿತು ಸುತತ್ತ್ವವ ಬೋಧಿಸಿ ಉತ್ತರ ವಿತ್ತವನ
– ತೋರೆ ಬೇಗನೆ ಸಖಿ (ಬೆ–೯೪–೨)
– ಸಾರತತ್ತ್ವದ ಮತವು ಮೀರಿ ಹೋಹುತಲಿದೆ ಆರೈದುಕೊಂಬ ಅರಸುಗಳಿಲ್ಲವು
– ಕಲಿಯೇರಿ ಬಂತು (ಬೆ–೧೩೦–೪)
೧೭೫೬. ತತ್ತ್ವಪತಿ – ನೀವು ತತ್ತ್ವಪತಿ ಆದಿಕೇಶವನ ಕೂಡಬೇಕಾದರೆ ಶಿವ ಶಿವ ಎನ್ನಿರೊ
– ಶಿವ ಶಿವ ಶಿವ ಎನ್ನಿರೊ (ಬೆ–೩–೭)
೧೭೫೭. ತನಯ – ವನಜಾಕ್ಷ ಮಾಧವ ವಸುದೇವ ತನಯ ಸನಕಾದಿ ಮುನಿವಂದ್ಯ ಸಾಧುಜನಪ್ರಿಯ
– ಲಾಲಿ ಪಾವನಚರಣ ಲಾಲಿ ಅಘಹರಣ (ಸ–೨೨೯–೧)
– ಸುಕೃತಿವಂತನು ಯಮುನ ತನಯ ಭೀಮಾರ್ಜುನರು
– ಸಿಂಗರದ ಸಿರಿಧರನೆ (ಬೆ–೧೬೭–೨)
– ಜನಕ ಹಿತದವನೆಂದು ನಂಬಬಹುದೇ ಹಿಂದೆ ತನಯ ಪ್ರಹ್ಲಾದನಿಗೆ ಪಿತ ಮುನಿದನು
– ಆರು ಹಿತವರು ಎಂದು ನಂಬಬೇಡ (ಬೆ–೩೩–೧)
– ಜನನಿ ರಕ್ಷಿಸುವಳೆಂತೆಂಬೆನೇ ಆ ಕುಂತಿ ತನಯ ರಾಧೇಯನಿಗೆ ಎರಡನೆಣಿಸಿದ ಮೇಲೆ
– ಆರು ಹಿತವರು ಎಂದು ನಂಬಬೇಡ (ಬೆ–೩೩–೧)
– ನಿಜಮುನಿಗಳ ವನದಿಂದ ತನಯರ ತಂದನ ಶ್ರೀರಾಮನೆನ್ನಿರಿ
– ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ–೮೧–೨)
– ತನುವು ತನ್ನದು ಎಂದು ತನಯ ಮಾನಿನಿಯರ ಇನಿತು ಎನಗೆ ಗತಿಯೆಂಬುವ ಮೂಢನೆ
– ಹೇಗೆ ನೀ ದಾಸನಾದೆ (ಬೆ–೨೨–೨)
– ಚಳಿಯ ಮಗಳ ತಾಯಳಿಯನ ತನಯನ

ಇಳುಹದೆ ಪೊತ್ತಿಹನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೧)
- ತರಣಿಯೊಡನೆ ಪಂಥಮಾಡಿ ತಿರುಗಿದನ ತನಯನಳಿದನ ತೋರಿಸೆ ಹೇ ಸಖಿಯೆ
- ತೋರೆ ಬೇಗನೆ ಸಖಿ (ಬೆ-೯೪-೧)

೧೭೯೮. ತನು - ಧೀರ ತನು ಧುರದುಂಡಿ ಹನುಮಯ್ಯರಿಂ ಸೇವಿಸಿದ ನಿಮ್ಮಂಘ್ರಿಕಮಲವ ದೂರ ಮಾಡದೆ
- ಎಷ್ಟು ಪೊಗಳಲಿ ನಾನು (ಸ-೫೩-೩)
- ಬೊಮ್ಮ ಮಾಡಿದ ತನುಬಿಟ್ಟು ವಿಶ್ವಕರ್ಮನು ಮಾಡಿದ ಬೊಂಬೆಯನಿಟ್ಟು
- ಎಲ್ಲಿ ನೋಡಿದಿರಲ್ಲ ರಾಮ (ಸ-೫೧-೪)
- ಸರಸವಿಲ್ಲದ ಸತಿಯ ಭೋಗ ತನುರೋಗ
- ಎನ್ನ ನುಡಿ ಪುಸಿಯಲ್ಲ (ಸ-೪೭-೧)
- ತನು ನಿನ್ನದು ಜೀವನ ನಿನ್ನದು ರಂಗ ಅನುದಿನದಲಿ ಬಾಹ ಸುಖದುಃಖ ನಿನ್ನದಯ್ಯಾ
- ತನು ನಿನ್ನದು ಜೀವನ ನಿನ್ನದು (ಬೆ-೫೭-ಪ)
- ತನು ನಿತ್ಯವಲ್ಲದಾ ಬೊಂಬೆ ನಾನು
- ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ-೬೩-೨)
- ಭಾರವು ನಿನ್ನದೊ ದೂರು ನಿನ್ನದೊ ಕೃಷ್ಣ ನಾರಿ ಮಕ್ಕಳು ತನು ಮನ ನಿನ್ನವಯ್ಯ
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೪)
- ತನುರೋಮ ಗಿಡ ವೃಕ್ಷ ತಳಿರು ಭುಜಲತೆ ಮೆರೆವ ಘನ ಸಿಂಹ ಮೃಗ ಗಜಗಳಿಂದೊಪ್ಪುವ
- ಪಥ ನಡೆಯದಯ್ಯ (ಬೆ-೯-೨)
- ನಿಮ್ಮ ತನು ಮನ ಪ್ರಾಣವ ವ್ಯರ್ಥವ ಮಾಡದೆ ಶಿವ ಶಿವ ಎನ್ನಿರೊ
- ಶಿವ ಶಿವ ಶಿವ ಎನ್ನಿರೊ (ಬೆ-೩-೨)
- ತನುವಿನಾ ಪರಿಮಳವು ಘಮಘಮಿಪನಿಗೆ ಸುಚಂದನವೆಂತು ನಾ ಪೂಸಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೧)
- ಒಂಬತ್ತು ಹೆಜ್ಜದ ತನುವಿನ ಹೊಲಸಿನೊಳ್ ತುಂಬು ತುಂಬಿ ದೇಹ ತುಳುಕುತಿದೆ
- ಏತರವನೆಂದು ಪೇಳಲಿ (ಬೆ-೧೨೨-೩)
- ಮನೆಮಕ್ಕಳಿವರೆನ್ನ ತನುವಿಗೊಡೆಯರೆಂದು ಘನವಾಗಿ ಬಲುನಂಬು ನೆಚ್ಚುತಿಹರು
- ಆರು ಸಂಗಡ ಬಾಹೋರಿಲ್ಲ (ಬೆ-೧೫-೨)
- ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ ವನಿತೆಯನು ಬಿಟ್ಟು ತಪವಿರಲು ಬೇಡ
- ಸಂಸಾರವೆಂಬ ಸಾಗರವನು (ಬೆ-೧೮-೨)
- ಕಚ್ಚುವ ಕೆಟ್ಟ ತನುವ ಖಂಡಿಸೊ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೨)
- ವ್ಯಾಧಿರೂಪಗಳಿಂದ ಪೀಡಿಸುತ ತನುವ ತೊತ್ತುಳಿಗೈದು ನೆಲಕಿಕ್ಕಿ ತೀಡಿ ಬಸವಳಿದ ಬಳಿಕ
- ಅಣುಮತ್ತಾದ ದೇವ (ಬೆ-೭೧-೧)
- ತನುವು ತನ್ನದು ಎಂದು ತನಯ ಮಾನಿನಿಯರ ಇನಿತು ಎನಗೆ ಗತಿಯೆಂಬುವ ಮೂಢನೆ
- ಹೇಗೆ ನೀ ದಾಸನಾದೆ (ಬೆ-೨೨-೨)
- ತನುವು ಅಸ್ಥಿರವೆನ್ನುತ ತಿಳಿದು ಶಂಕರನ ಹೃದಯವ ಕಾಣುತ
- ದಾಸನಾಗಬೇಕು ಸದಾಶಿವನ (ಬೆ-೨೪-೨)
- ತನುವು ನೀರೊಳಗೆ ನಿಲ್ಲಿಸಿದಂತೆ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೨)
- ಘೋರ ಸಂಸಾರ ತನುವೆಂದು ತನ್ನಲಿ ತಿಳಿದು ಗೇರು ಹಣ್ಣಿನ ಬೀಜದಂತೆ ಹೊರಟು
- ತಾನಾರು ದೇಹವಾರು (ಬೆ-೧೪-೩)
- ಮುಂದರಿದು ನೋಡು ನರರ ತನುವು ದೊರಕಲರಿಯದು
- ಏನು ಬರುವುದೋ ಸಂಗಡ (ಬೆ-೧೩೭-೫)
- ಧ್ಯಾನದೊಳಗೆ ಕೃಷ್ಣನಿಲ್ಲದ ತನುವಿದ್ದೇತಕೆ
- ಸತ್ಯವಂತರ ಸಂಗವಿರಲು (ಬೆ-೧೨೪-೪)
- ಪಾತಕವದೊಂದು ಮೂರುತಿಯದ ತನುವೆಂದು ನೀತಿಯಲಿ ತಿಳಿದಾತ ಪರಮ ಯೋಗಿ
- ತಾನಾರು ದೇಹವಾರು (ಬೆ-೧೪-೨)
- ತನುಮಾಯಾ ರೂಪವ ತೋರಿದನಾ ಕಾಗೆನೆಲೆಯಾದಿಕೇಶವನು
- ನೆರೆದು ಗೋಪಿಯರೆಲ್ಲರು (ಬೆ-೧೦೩-೧೦)

೧೭೯೯. **ತನುಜ** - ತಾಮಸದ ಖಳ ತನ್ನ ತನುಜನನು ಮಥಿಸುತಿರೆ ರಾವುನನು ತೋರೆಂದು ಬಾಧಿಸುತಿರೆ
- ನೋಡಯ್ಯ ನಿನ್ನ ದಾಸರ (ಬೆ-೮೫-೪)

೧೮೦೦. **ತನುಭಾವ** - ತನ್ನ ಗುರುವನ್ನು ನೆನೆಯಬೇಕಣ್ಣ ತನುಭಾವವೆಂಬ ಭಿನ್ನ ಕಲ್ಮಷವಳಿಯಬೇಕಣ್ಣ
- ಅಡಿಗೆಯನು ಮಾಡಬೇಕಣ್ಣ (ಸ-೧-೧)

೧೮೦೧. **ತಪ** - ಜಪತಪಾನುಷ್ಠಾನ ಜಪಿತನೆಂದೆನಿಸುವೆನೆ ಜಾಣತನ ಮೊದಲಿಗಿಲ್ಲ
- ನೀನುಪೇಕ್ಷೆಯ ಮಾಡೆ (ಬೆ-೪೯-೧)
- ಮೀಸಲಾಗಿ ಮಿಂದು ಜಪ ತಪ ಹೋಮ ನೇಮಗಳ ಏಸು ಬಾರಿ ಮಾಡಿದರೂ ಫಲವೇನೊ ಅದು ಛಲವೇನೊ
- ದಾಸನಾಗೋ ಭವಪಾಶ ನೀಗೋ (ಬೆ-೨೦-೧)
- ಪೌರತ್ರಯವ ಗೆಲುವ ಸಮಯದಲಿ ತಪಮಾಡಿ ನಾರಾಯಣಾಸ್ತ್ರವನು ಪಡೆದನೀಶ
- ಆರು ಬಲ್ಲರು ಹರಿಹರರ (ಬೆ-೮೨-೧)
- ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ ವನಿತೆಯನು ಬಿಟ್ಟು ತಪವಿರಲು ಬೇಡ
- ಸಂಸಾರವೆಂಬ ಸಾಗರವನು (ಬೆ-೧೮-೨)
- ಜಲದೊಳು ಮುಳುಗಿ ತಪವ ಮಾಡಿ ಕುಲವನು ಛಲದಿಂದೆಬ್ಬಿಸಿ ಕಾದುವೆನೆನುತ
- ಬಂದಿದೆ ದೂರು ಬರಿದೆ (ಬೆ-೮೬-೬)
- ವರ ಪಶುವಿನ ಋಷೀಶ್ವರನ ತಪದ ಬಹು ಕರಕಮಲದಲಿದ್ದೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೬)
- ತಪದೊಳಗೆ ವ್ಯಾಸನೋ ಕೃಪೆಯಲಿ ಬಲೀಂದ್ರನೋ
- ಬೆರೆಯದಿರು ಬೆರೆಯದಿರು (ಬೆ-೧೪೩-೧)
- ಜಪವ ಮಾಡಿದರೇನು ತಪವ ಮಾಡಿದರೇನು
- ಜಪವ ಮಾಡಿದರೇನು (ಬೆ-೧೨೩-ಪ)
- ತಾಯಿತಂದೆಯ ಬಿಟ್ಟು ತಪವ ಮಾಡಲು ಬಹುದು
- ತೊರೆದು ಜೀವಿಸಬಹುದೆ (ಬೆ-೫೫-೧)
- ವೇಷಭಾಷೆಯ ಕಲಿತು ಗೋಸನಿಯ ಕಡೆಗಿಟ್ಟು ಆಸೆಯನು ತೊರೆಯದೆ ತಪವ ಮಾಡಿ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೫)
- ಚಳಿ ಮಳೆಯು ಅತಿ ಕಾರುಗತ್ತಲೆಯೊಳಗೆ ಎದ್ದು ಹೊಳೆಯೊಳಗೆ ಮುಳುಗಿ ಜಪತಪವ ಮಾಡಿ
- ಜಪವ ಮಾಡಿದರೇನು (ಬೆ-೧೨೩-೩)
- ಬಾಲಕ ತನ್ನ ತಾಯ್ತಂದೆಯೊಳ್ ಮುನಿದು ಹಲಕಾಲ ವನದೊಳು ತಪವನು ಮಾಡಲು
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೩)
- ಪಂಕಜಕೆ ಕುರುಹೇನು ಪಾರ್ಥಿಯಳ ತಪವೇನು
- ಬಲ್ಲವರು ಪೇಳಿರೈ (ಬೆ-೧೬೩-೧)

೧೮೦೨. **ತಪಸಿ** - ಶಪಥದಲಿ ರಣದೊಳರಸನ ಹಿಡಿವನೆಂದು ಬಲು ತಪಸಿಗಳ ಕಳುಹಿ ತತ್ತ್ವ ಬೋಧಿಸಿ
- ನೀನಾವ ಬಾಂಧವನೊ (ಬೆ-೭೮-೫)

೧೮೦೩. **ತಪೋಧನ** - ನಾಡ ನಾನಾ ತಪೋಧನರು ತತ್ಕಾಲದಲಿ ಬೀಡ ಹೊರವಂಟು ನಡೆದುದು
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೧)

೧೮೦೪. **ತಪ್ಪಲು** - ಎನುತ ಇಟ್ಟ ನುಡಿ ತಪ್ಪಲುಂಟೆ
- ವಾಸುದೇವಾಯ ನಮೋ (ಬೆ-೯೦-೧೧)

೧೮೦೫. **ತಪ್ಪಿಸಿಕೊಳ್ಳು** - ತಿಂದೋಡಿ ಬಂಧು ಬಳಗ ತಪ್ಪಿಸಿಕೊಂಬರೆಂದು ನೋಡೆಚ್ಚರಿಕೆ
- ಮಾಡು ದಾನ ಧರ್ಮ (ಸ-೨೦೪-೬)

೧೮೦೬. **ತಪ್ಪಿಸು** - ಪಾಪವನು ತಪ್ಪಿಸಿ ರಾಮನಾಮವ ಕೊಡಲು ಕಾಪಥಕ ವಾಲ್ಮೀಕಿ ಮುನಿಯಾಗಲಿಲ್ಲವೆ
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೧)
- ಶರವ ತಪ್ಪಿಸಿ ತನ್ನ ದಾಸರಿಗೆ ಅನುದಿನ ಕರೆದು ವರವನಿತ್ತು ಮನ್ನಿಸಿ ಸಲಹುವ
- ರಮಣಿ ಕೇಳೆಲೆ ಮೋಹನ (ಬೆ-೯೬-೩)

2AF

**೧೮೦೭. ತಪ್ಪು** (ಅಪರಾಧ) - ಇಂದು ಸೈರಿಸಿರಿ ಶ್ರೀಕೃಷ್ಣನ ತಪ್ಪ ಮುಂದಕೆ ನಿಮ್ಮ ಮನೆಗೆ ಬಾರನಮ್ಮ
- ಇಂದು ಸೈರಿಸಿರಿ ಶ್ರೀಕೃಷ್ಣನ (ಬೆ-೧೦೫-ಪ)
- ಅಂಧಕನದು ತಪ್ಪೊ ಮುಂದಾಡಿಯ ತಪ್ಪೊ ಹಿಂದಾಡಬೇಡ ಎನ್ನಲಿ ತಪ್ಪಿಲ್ಲವೋ ದೇವ
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೨)
- ಕ್ಷಮಿಸುವುದೆನ್ನ ತಪ್ಪುಗಳ ಸ್ವಾಮಿ ಕ್ಷಮಿಸುವುದು ದಾಸೋಹಂ ಬಿರುದಿನೊಳು
- ಕ್ಷಮಿಸುವುದೆನ್ನ ತಪ್ಪುಗಳ (ಬೆ-೬೧-ಪ)
- ಕಾಯಜಪಿತ ಕಾಗಿನೆಲೆಯಾದಿಕೇಶವರಾಯ ನೀ ಕಾಯಯ್ಯ ತಪ್ಪುಗಳೆಣಿಸದೆ
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೫)
- ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ ನಿನ್ನದು ತಪ್ಪೊ ಎನ್ನದು ತಪ್ಪೊ ಪರಮಾತ್ಮ
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೮)

**೧೮೦೮. ತಪ್ಪು** (ಕ್ರಮಬಿಟ್ಟು ನಡೆ) - ಅಂಧನ ಕೈಯಲಿ ಕೋಲಿತ್ತು ಕರೆದೊಯ್ವ ಮುಂದಾಡಿ ತಪ್ಪಿ ಗುಂಡಿಗೆ ಕೆಡಹಲು
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೨)

**೧೮೦೯. ತಪ್ಪು** (ಮೀರು) - ಬಾಗಿ ಪರಸತಿಯರನು ಬಯಸಿ ಕಣ್ಣಿಡುವಂತ ಯೋಗ ತಪ್ಪಿದರಲ್ಲೆಲ್ಲ ದೇವ ಬ್ರಾಹ್ಮಣರೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೨)

**೧೮೧೦. ತಪ್ಪು** (ರೀತಿಗೆಡು) - ವಾವೆ ವರಸೆಯು ತಪ್ಪಿ ವೈರಿವರ್ಗವು ಹೆಚ್ಚಿ ದೇವ ಬ್ರಾಹ್ಮಣ ಗುರುಹಿರಿಯರನ್ನು ಜರೆದು
- ಕಲಿಯೇರಿ ಬಂತು (ಬೆ-೧೩೦-೨)

**೧೮೧೧. ತಪ್ಪು** (ಹುಸಿಯಾಗು) - ಬೊಮ್ಮ ಪಣೆಯಲಿ ಬರೆದ ಬರೆಹ ತಪ್ಪುವುದುಂಟೆ ಸುಮ್ಮನೆ ಬಯಲಾಸೆ ವ್ಯರ್ಥಜೀವನವೆ
- ಒಲ್ಲೆನೆಂದರಾಗುವುದೆ (ಬೆ-೧೧೦-೨)
- ತಪ್ಪದು ಎಷ್ಟೊತ್ತಾದರು ತಡೆದೆವು ಜಯಜಯವೆನುತ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೮)
- ಆರಿಗಾದರು ಪೂರ್ವಕಲ್ಪನೆಯು ತಪ್ಪದು ಬೇರೆ ಬಯಸಿದರೆ ಬರಲರಿಯದಯ್ಯ
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೯-)
- ಮೊದಲಾದ ಠಕ್ಕುದೇವರ ಗೊಡವೆ ಬೇಡ ನರಕ ತಪ್ಪದು
- ಕಣಿಯ ಹೇಳಬಂದೆ ನಾನು (ಬೆ-೭೨-೧)
- ಜೊಳ್ಳುದೇವರ ಗೊಡವೆ ಬೇಡ ನರಕ ತಪ್ಪದು
- ಕಣಿಯ ಹೇಳಬಂದೆ ನಾನು (ಬೆ-೭೨-೨)
- ಎಂದಿದ್ದರೊಂದು ದಿನ ಸಾವು ತಪ್ಪದು
- ಡಿಂಬಿನೊಳು ಪ್ರಾಣವಿರಲು (ಬೆ-೧೧೭-ಪ)
- ಒಡೆಯ ಬಾಡದಾದಿಕೇಶವನಡಿಗಳನ್ನು ಸ್ಮರಿಸಿ ಇಂಥ ದೊಡದೇವರ ಮೊರೆಯ ಬಿದ್ದರೆ ಮುಕ್ತಿ ತಪ್ಪದು
- ಕಣಿಯ ಹೇಳಬಂದೆ ನಾನು (ಬೆ-೭೨-೫)
- ಇಪ್ಪತ್ತು ನಾಲ್ಕು ನಾಮಗಳೊಳಗೇಳನು ತಪ್ಪದೆಣಿಸಿ ಕಳೆದು
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೨)

**೧೮೧೨. ತಮ** (ಒಬ್ಬ ರಾಕ್ಷಸನ ಹೆಸರು) - ಹೆಚ್ಚಿದ ತಮನೆಂಬ ದನುಜ ವೇದವ ಕದ್ದು ಬಚ್ಚಿಟ್ಟು ನೀರೊಳು ಮುಳುಗಿರಲು
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೧)
- ತಮನೊಡನೆ ಹೋರಿ ಬೆಟ್ಟವನು ಬೆನ್ನಲಿ ಪೊತ್ತು ರಮಣಿ ಧರೆಯನು ತಂದ ಆಯಾಸವೊ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೧)
- ತಮನ ಸಂಹರಿಸಿ ವೇದವ ತಂದೆ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೧)

**೧೮೧೩. ತಮ** (ಕತ್ತಲು) - ಉರ್ವಿಯೊಳ್

ತಮ ಸಾರಿ ಪ್ರಕಟಿಸುತ ಐದಿರಲು
- ಪೂಸರನ ಜನಕನೇ (ಬೆ-೧೬೮-೧)
೧೮೧೪. **ತಮ** (ತಮೋಗುಣ) - ರಜ ತಮ ಗುಣ ಪ್ರವರ್ತಕ ಮೂಲಾಂತರದಿಂದ ಯಜಮಾನತನದ ಅಹಂಕಾರ ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೧)
೧೮೧೫. **ತಮ್ಮ** (ಅನುಜ) - ಜತನವೆಂಬೊ ಅತ್ತೆ ಮಾವ ಜೊತೆಗೆ ಹುಟ್ಟಿದಣ್ಣ ತಮ್ಮ
- ಯಾರಿಗಾರು ಬಹರು ಸಂಗಡ (ಸ-೨೨೧-೨)
- ಬ್ರಹ್ಮ ಕಪಾಲವ ಧರೆಗಿಳುಹಿದನ ತಮ್ಮ ಅಣ್ಣರನು ಕಡಿದಾಡಿಸಿದವನ
- ಕರೆತಾರೆ ಕಾಮಿನಿಕಮಲಜಪಿತನ (ಬೆ-೯೩-೧)
- ಕಾಮಿನಿ ಸತಿಯ ಕಂದನ ತಮ್ಮಗೊಲಿದನ ಭಾಮೆ ನೀ ತಂದು ತೋರೆ
- ಹರಿಮುಖಿ ಹರಿವಾಣಿ (ಬೆ-೯೮-೨)
- ಹಿರಿಯ ತಮ್ಮನ ಸುತ್ತಿ ನುಂಗದೆ ತಂದೆಯ ಮರಳಿ ನುಂಗಿದ ಧೀರನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೪)
- ಬಾಯೊಳಗಿಹಳ ಗಂಡನ ನಿಜ ತಮ್ಮನ ತಾಯ ಪಿತನ ಮಡದಿಯ ಧರಿಸಿದನ
- ರಮಣಿ ಕೇಳೆಲೆ ಮೋಹನ (ಬೆ-೯೬-೧)
- ಹರಿಯ ಮಗನ ಶಿರ ಹರಿದನ ತಂದೆಯ ಹಿರಿಯ ಮಗನ ತಮ್ಮನ ಪಿತನ
- ಮಂಗಲಂ ಜಯ ಮಂಗಲಂ (ಬೆ-೧೭೨-೩)
- ತಮ್ಮನ ನುಡಿ ಕೇಳದೆ ರಾವಣನು ಕೆಟ್ಟ
- ನಾ ನಿಮ್ಮ ದಾಸರ ದಾಸ (ಸ-೧೩೪-೪)
- ಅಣ್ಣ ತಮ್ಮ ತಾಯಿ ತಂದೆ ಬಯಸಲಾಗದು
- ಡಿಂಬಿನೊಳು ಪ್ರಾಣವಿರಲು (ಬೆ-೧೧೭-೨)
೧೮೧೬. **ತರಣಿ** (ಸೂರ್ಯ) - ತರಣಿ ಶತ ಕೋಟಿತೇಜನ ಮುಂದೆ ಹೇಗೆ ನಾ ಪೆರತೊಂದು ದೀಪವಿಡಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೨)
- ಪೂಸರನ ಜನಕನೇ ಶತಕೋಟಿತರಣಿಪ್ರಕಾಶ ಅಗಣಿತಕೋಟಿಬ್ರಹ್ಮಾಂಡನಾಯಕನೆ
- ಪೂಸರನ ಜನಕನೇ (ಬೆ-೧೬೮-ಪ)
- ಕಡಹಾಯಿಸೊ ಕಮಲಲೋಚನನೆ ಎನ್ನ ತಡಿಯ ಸೇರಿಸೊ ತರಣಿಶತಕೋಟಿತೇಜ
- ಕಡಹಾಯಿಸೊ ಕಮಲಲಲೋಚನನೆ (ಬೆ-೬೨-ಪ)
- ತರಣಿಯ ಮರೆಮಾಡಿ ಶಿರವ ತರೆಯುವಂತೆ ನರಗೆ ಸೂಚಿಸಿದಾತನ
- ತೋರೆ ಬೇಗನೆ ಸಖಿ (ಬೆ-೯೪-೧)
- ತರಣಿಯೊಡನೆ ಪಂಥಮಾಡಿ ತಿರುಗಿದನ ತನಯನಳಿದನ ತೋರಿಸೆ ಹೇ ಸಖಿಯೆ
- ತೋರೆ ಬೇಗನೆ ಸಖಿ (ಬೆ-೯೪-೧)
೧೮೧೭. **ತರಣಿತನಯ/ತರಣಿಸುತ** (ಕರ್ಣ) - ತರಣಿತನಯನ ಸುತನ ಬಾಯೊಳು ಅನೃತವ ಭರದಿಂದ ನುಡಿಸಿದನ
- ತೋರೆ ಬೇಗನೆ ಸಖಿ (ಬೆ-೯೪-೧)
- ತರಣಿಸುತನ ಬಾಣವೆರಗದಂದದಿ ರಥವ ಧರೆಗೆ ಒತ್ತಿದ ದೇವನ
- ತೋರೆ ಬೇಗನೆ ಸಖಿ (ಬೆ-೯೪-೧)
೧೮೧೮. **ತರವು** - ಆಶೆಯು ತರವಲ್ಲ ಸ್ಥಿರವಲ್ಲ ಮುಂದೆ ಬಾಹೋದಲ್ಲ
- ದಾಸನಾಗೋ ಭವಪಾಶ ನೀಗೋ (ಬೆ-೨೦-ಅ)
೧೮೧೯. **ತರಹರಿಸು** - ತರಹರಿಸಲು ಸುಂದರಿಗೆ ಪತಿವ್ರತ ಸುರರರಿಯದೆ ಕೊಟ್ಟೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೬)
೧೮೨೦. **ತರಳ** - ಕಠಿಣ ನಿಲುವನು ಬಿಡದ ತರಳ ನಿನ್ನಯ ಗುಣವ ಪಠಿಸಲ್ಕೆ
- ಯಾದವಗಿರಿವಾಸನಹುದೋ (ಸ-೨೧೯-೨
- ಧರೆ ನಡುಗುವ ಹಾವನು ನಾ ಪಿಡಿವೆನೆ ತರಳನು ತಡೆಗಾರನೆ
- ನೆರೆದು ಗೋಪಿಯರೆಲ್ಲರು (ಬೆ-೧೦೩-೮)
- ಗರಳಕಂಧರನು ಬೆರಳೆತ್ತಿ ಪೊಗಳಲು ತರಳ

ಗೊಲಿದು ನಿಂದೆ ಗೋವಿಂದ
- ಪರಮಪುರುಷ ಹರಿ ಗೋವಿಂದ
(ಬೆ-೩೯-೪)

೧೮೨೧. **ತರಳಾಕ್ಷ** - ಉತ್ತರಾಯಣ ಮಾವನ ಮಗಳನಿಳುಹಿದನ ಹೊತ್ತು ಹೋಗದು ಎನಗೆ ತೋರೆ ತರಳಾಕ್ಷಿ
- ಬಲ್ಲವರು ನೀವು ಪೇಳಿರಯ್ಯ
(ಬೆ-೧೫೦-೧)

೧೮೨೨. **ತರಳೆ** - ದುರುಳತನದಿ ಸೆಳೆದು ಕೊಂಡನ ಕೊಂದನ ತರಳೆ ನೀ ತಂದು ತೋರೆ
- ಹರಿಮುಖ ಹರಿವಾಣಿ (ಬೆ-೯೮-೧)
- ಮಂಗಳಂ ತರಳೆಯಭಿಮಾನವನು ಕಾಯ್ದವನೆ
- ವಾಸುದೇವಾಯ ನಮೋ (ಬೆ-೯೦-೧೫)
- ತರಳೆ ರುಕ್ಮಿಣೀಯ ತಂದಾನೆ
- ಆನೆ ಬಂದಿದೆ ಇದಿಗೋ ಮದ್ದಾನೆ
(ಸ-೧೪-೬)

೧೮೨೩. **ತರಿ** (ಕತ್ತರಿಸು) - ಕುಲಛಲಂಗಳ ಬಿಟ್ಟು ಬಲು ಪಾಶಗಳ ತರಿದು
- ನಾರಾಯಣೆನು ಮನವೆ (ಬೆ-೧೪೧-೨)
- ಮತಿವಂತನಾಗಿ ಮಾತೆಯ ಶಿರವ ತರಿದನ ಗೋವಿಂದ ಎನ್ನಿರೊ
- ಮಂದರಧರ ಪಾವನ ಇಂದಿರಾರಮಣ
(ಸ-೨೦೦-೨)
- ಕ್ರೂರ ಖಳನ ತರಿದು ಆ ಪಾಂಡವರ ಅರಣ್ಯದಿ ಪೊರೆದ
- ಮರೆಯದಿರು ಹರಿಯ (ಸ-೨೦೩-೨)
- ಒಲಿದು ಭಜಿಪರ ಭವ ತರಿದು ಕಾಯುವ ಮುತ್ತು
- ಮುತ್ತು ಬಂದಿದೆ ಕೇರಿಗೆ (ಸ-೨೧೦-೧)
- ಅಂತರಂಗದೊಳಗೆ ಅಷ್ಟ ಜ್ಯೋತಿಯನಿಟ್ಟು ದಂತಿ ಎಂಟನು ಪಿಡಿದು ತರಿದು ಬಿಸುಟು
- ನಿಜವರಿತು ಲಿಂಗವನು ಪೂಜೆ ಮಾಡುವರು (ಸ-೧೪೨-೪)

೧೮೨೪. **ತರು** (ತೆಗೆದುಕೊಂಡುಬರು) - ನುಡಿಯ ಕದ್ದೊಯ್ದವನ ಒರಸಿ ಸುಧೆಯನು ತರಿಸಿ ಪೊಡವಿಯನು ಧರಿಸಿ
- ಮೊಸರನ ಜನಕನೇ (ಬೆ-೧೬೮-೫)
- ಕದ್ದು ಮತ್ತೊಬ್ಬ ತರುತಿದ್ದ ದಾರಿಯನ್ನು ಕಟ್ಟಿ ಒದ್ದು ಹಿಡಿದು ಗುದ್ದಿ ನೂಕಿ ಸೆಳೆದು ಕೊಂಡುದ
- ಎರಡು ಸಾವಿರದ ಜಿಹ್ವೆಯುರಗ
(ಸ-೪೮-೨)
- ಬೊಗಸೆಗಂಗಳ ಬಾಲೆಯರ ತಂದಾತನ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ
(ಬೆ-೮೦-೩)
- ಬೆಂಗೊಂಡು ಪೋಗಿ ಅವನಂಗವ ಸೀಳಿ ವೇದಂಗಳ ತಂದವನ
- ಘುಲ್ಲವದನೆ ಕೇಳೆ ನಿಲ್ಲಲಾರೆ
(ಬೆ-೯೫-೩)
- ಭುಜಗಧರನ ಕೈಯ ಆಯುಧವನು ತಂದನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ
(ಬೆ-೮೧-೨)
- ಭಾವೆಯ ತಂದ ಮನೆಯಲಿ ಜೀವಿಪುದ ಕಿಂತ ಸಾವುದೇ ಲೇಸು ಅಭಿಮಾನಿಗಳಿಗೆ
- ಮಾವನ ಮನೆಯೊಳಗೆ (ಬೆ-೧೪೬-೧)
- ಸುರಪತಿಯ ಗೆದ್ದು ಸುಧೆಯನು ತಂದು ಮಾತೆಯ ಸೆರೆಯ ಪರಿಹರಿಸಿ ಬಹುಭಕ್ತನೆನಿಸಿ
- ಆರಿಗಾದರು ಪೂರ್ವಕಲ್ಪನೆಯು ತಪ್ಪದು
(ಬೆ-೧೦೯-೨)
- ತರಳೆ ರುಕ್ಮಿಣಿಯ ತಂದಾನೆ
- ಆನೆ ಬಂದಿದೆ ಇದಿಗೋ ಮದ್ದಾನೆ
(ಸ-೧೪-೬)
- ನಿಜಮುನಿಗಳ ವನದಿಂದ ತನಯರ ತಂದನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ
(ಬೆ-೮೧-೨)

೧೮೨೫. **ತರು** (ಮರ) - ತರುಣಿಯಳನು ತಂದ ಮನೆಯ ವಾಸಕ್ಕಿಂತ ತರು ಗಿರಿ ಗುಹೆಗಳಲಿ ಇದ್ದು ಜೀವಿಸಬಹುದು
- ಮಾವನ ಮನೆಯೊಳಗೆ (ಬೆ-೧೪೬-೨)

೧೮೨೬. **ತರುಣತನ** - ತರುಣತನದಿ ದಿನ ದಾಟಿತು ಸುಮ್ಮನೆ ಶರೀರದೊಳು ಸ್ವರವಾಡುತಲೆ
- ರಾಮ ನಾಮವ ನೆನೆ ಮನವೆ
(ಸ-೨೨೬-೧)

೧೮೨೭. ತರುಣಿ - ತರುಣಿ ಸುತರು ಸಂಸಾರ ವೆಂಬ ಶರಧಿಯೊಳಗೆ ಮುಳುಗಿರದೆ ಮನವೆ
- ರಾಮ ನಾಮವ ನೆನೆ ಮನವೆ (ಸ-೨೨೬-೧)
- ಸುಟ್ಟಬಳಿಕ ಭರದಿ ಬಂದು ಮನೆ ಯೊಳೆಂಬರು ಪಾಪಿ ಸತ್ತ ತರುಣಿ ಕೆಟ್ಟಳೆಂದು ಕೊಂಬರು ಆತ್ಮ
- ಯಾರಿಗಾರು ಬಹರು ಸಂಗಡ (ಸ-೨೨೧-೧)
- ಹರಗೆ ನಯನವಾಗಿ ಮಕುಟವ ಬೆಳಗುವನ ತರುಣಿಯೈವರ ಲಜ್ಜೆ ಕಾಯ್ದವನ
- ನೆನೆಯಬಾರದೆ ಮನವೆ ಪರಮಪಾವನನ (ಸ-೧೫೨-೩)
- ತರುಣಿ ತನ್ನಿನಿಯನ ಮುಟ್ಟಲಂಜಿ ದೂರದಲಿ ಪೊರೆವರು ತನಗಾರು ಹೇಳೆಂಬಳು
- ಆರು ಸಂಗಡ ಬಾಹೋರಿಲ್ಲ (ಬೆ-೧೫-೪)
- ಕಲು ತರುಣಿಯ ಮಾಡಿದ ಪಾದವಾರದು
- ಆತನ ಪಾಡುವೆ ಅನವರತ (ಬೆ-೭೦-೨)
- ತರುಣಿಯಳನು ತಂದ ಮನೆಯ ವಾಸಕ್ಕಿಂತ ತರು ಗಿರಿ ಗುಹೆಗಳಲಿ ಇದ್ದು ಜೀವಿಸಬಹುದು
- ಮಾವನ ಮನೆಯೊಳಗೆ (ಬೆ-೧೪೬-೨)
- ದುರುಳ ದುಶ್ಶಾಸ ದ್ರೌಪದಿಯ ಸೀರೆಯ ಸೆಳೆಯೆ ತರುಣಿಗಕ್ಷಯವಿತ್ತು ಕಾಯ್ದಯಂತೆ ಹರಿಯೆ
- ಆ ವೇಳೆಯಲ್ಲ ಆರಾರ ಕಾಯ್ದೆಯೊ (ಬೆ-೬೬-೨)

೧೮೨೮. ತರೆ (ಕತ್ತರಿಸು) - ತರಣಿಯ ಮರೆ ಮಾಡಿ ಶಿರವ ತರೆಯುವಂತೆ ನರಗೆ ಸೂಚಿಸಿದಾತನ
- ತೋರೆ ಬೇಗನೆ ಸಖಿ (ಬೆ-೯೪-೧)
- ವರ ಮತ್ಸ್ಯನಗಧರನ ಸೂಕರನ ಸಿಂಹನ ತಿರುಕ ತಾಯ್ತರೆದಾತನೆ
- ಇಂದು ನೀ ಕರೆದುತಾರೆ (ಬೆ-೯೨-೩)
- ಋಷಿಯ ಶಾಪವ ತರೆದು ಅಂಬರೀಷನ ಕಾಯ್ದೆ
- ವಾಸುದೇವಾಯ ನಮೋ (ಬೆ-೯೦-೬)
- ಹಿರಿಯಣ್ಣನಯ್ಯನ ಮೊಮ್ಮನ ಮಾವನ ತರೆದೊಟ್ಟಿದನ ಹಗೆಯ
- ಹರಿಮುಖ ಹರಿವಾಣಿ (ಬೆ-೯೮-೧)
- ಹರಹರನೆಂಬ ಸಾವಿರ ತೋಳ ಕೊಯ್ದನ ತರೆದು ಒಟ್ಟಿದ ನಮ್ಮ ಹರಿಯೆ
- ಶಂಕರನಾರಾಯಣ ಬಿಡು (ಬೆ-೧೭೫-೩)
- ತುಂಟಕನೊಬ್ಬನ ತರೆದುದರಿಂದೆ ಬಂಟನಾಗಿ ಬಂದೆನೊ ರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-೧)

೧೮೨೯. ತರ್ಕ - ವೇದಶಾಸ್ತ್ರ ಶಬ್ದ ತರ್ಕ ಮೀಮಾಂಸೆಗಳ ಓದಿದವನಲ್ಲ ನಿನ್ನಯ ಭಕುತಿಗೆ
- ಎಂತಹುದೊ ನಿನ್ನಯ ಭಕುತಿ ಸ-೪೧-೨)
- ವೇದ ಶಾಸ್ತ್ರ ಪುರಾಣ ಶ್ರುತಿ ತರ್ಕ ಮಹದಾದಿ ಸಾಧನದ ಶ್ವಾನ ನಮ್ಮಜ್ಜನ ಹಿಂಡಿನೊಳು
- ನಾವು ಕುರುಬರು (ಬೆ-೧೫೨-೪)
- ಹಾದಿಯನು ಕಾಣದಂತಿರುತಿರ್ದ ಹಲ ವೆಂಟು ವಾದ ತರ್ಕದೊಳಿದ್ದ ಭೇದವಾದಿಗಳು
- ಜಪವ ಮಾಡಿದರೇನು (ಬೆ-೧೨೩-೧)

೧೮೩೦. ತಲೆ - ರಣದಲ್ಲಿ ತಲೆಹೊಯ್ದು ರುಂಡವು ಬೀಳಲು ಹೆಣನೆದ್ದು ಕುಣಿದಾಡಿತು
- ಮುತ್ತುಗಳ ಹಣ್ಣು ಕಾಯಾದ ಬಳಕ (ಸ-೨೯-೩)
- ಸಲೆ ದೈತ್ಯನ ಕೊಂದು ಸೀತೆಯ ತಂದನಿಗೆ ಗಿರಿ ತಲೆಯಮೇಲೆ ಇಹ ಪ್ರಾಪ್ತಿಯಾಯಿತು
- ನಮಗೆಲ್ಲ ಮನೆಗಳಯ್ಯ (ಸ-೧೩೨-೧)
- ಚಟಿಚಟಿ ಚಟಿರೆನ್ನಲು ಉಗುರಲಿ ಸೀಳಿ ಪುಟನೆಗೆದ ಪದದಲಿ ಬಲಿಯ ತಲೆಯನು ಮೆಟ್ಟಿ
- ಯಾದವಗಿರಿವಾಸನಹುದೋ (ಸ-೨೧೯-೨)
- ಹಿಂದೆ ಮುಂದೆ ಹಸ್ತ ಮುಚ್ಚಿಕೊಂಡು ತಲೆಯ ಬಾಗಿ ಕೇಳೆ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೭)
- ಹೊಳೆಗೂಡಿನೊಳು ಪೊಗಿಸಿ ತಲೆ ಹುಳಿತ ನಾಯಂತೆ ಮನೆ ಮನೆಯ ತಿರುಗಿ ಪೋಗಿ
- ನೊಂದೆನಾ ಹರಿಯೆನ್ನದೆ (ಬೆ-೧೩-೨)
- ಕಲಿ ಬಾಡದಾದಿಕೇಶವರಾಯ ಚಕ್ರದಲಿ

ತಲೆಗಳನು ಚೆಂಡಾಡಿಸುವ ಕಾಣೊ ಬೇಡ
– ಬೇಡ ಬೇಡ ಎಲೆಲೆ ದುರಿತಗಳಿರ
(ಬೆ–೨೯–೩)
– ಗೋಪಿ ಕಟ್ಟಿದ ಒರಳ ಗೊಲ್ಲಗೇರಿಗೆಳೆಯುತ ಆ ಫಣಿಯ ತಲೆಯ ಮೇಲಾಡಿದ ಪಾದ
– ಎಂಥ ಕೀರುತಿ ಪೊತ್ತುವೆರಡು ಪಾದ
(ಬೆ–೮೩–೨)
– ಮೂರೆರಡು ತಲೆ ಹರಗೆ ಕೈಯೊಳ್ಕಪ್ಪರವಂತೆ
– ಆರಿಗಾದರು ಪೂರ್ವಕರ್ಮಬಿಡದು
(ಬೆ–೧೦೮–೧)
– ವರನ ತಲೆಯನು ಕತ್ತರಿಸಿದ ಧೀರನ ಗುರುವಿನೊಳುದಿಸಿದನ
– ರಮಣಿ ಕೇಳೆಲೆ ಮೋಹನ (ಬೆ–೯೬–೩)
– ಅರ್ಧದೇಹನ ಕೈಯ ತಲೆಯ ಕಪಟದಿಂದ ಕದ್ದು ಬಿಸುಟ ಕಳ್ಳ ಕೋ ಎನ್ನಿರೊ
– ಕೋ ಕೋ ಕೋ ಎನ್ನಿರೊ
(ಬೆ–೧೦೧–೧)
– ಎವೆಯಿಕ್ಕದಲೆ ನೋಡಿದ ತಲೆಯ ತಗ್ಗಿಸಿ ಕವಲುದಾರಿಯೊಳಾಡಿದ ಕಂಬದಿ ಮೂಡಿ
– ಇಂದು ನೀ ಕರೆದುತಾರೆ (ಬೆ–೯೨–೨)
– ಎಂಟು ಗಜವ ನುಂಗಿ ಉಂಟಾದ ಗಿರಿಯನು... ತಲೆಯ ನುಂಗಿತು
– ಹಲವು ಜೀವನವ ಒಂದೆಲೆ ನುಂಗಿತು
(ಬೆ–೧೫೮–೨)
– ಎರವಿನ ತಲೆಯವನಣ್ಣನಯ್ಯನ ಪರಮ ಸಖನ ಸುತನ
– ಹರಿಮುಖ ಹರಿವಾಣಿ (ಬೆ–೯೮–೧)
– ಕಳದೊಳು ತಲೆಯ ಚೆಂಡಾಡಿದ ಧೀರನ ಬಳಿ ಪಾಥೆಯನು ಪಿಡಿದನ
– ಏಣನಯನೆ ಏಣಭೋಜಮಧ್ಯಳೆ
(ಬೆ–೯೯–೧)
– ಕುಣಿದಾಡುತಿದೆ ಹರಿಯ ತಲೆ ತುರಗವೇರಿ
– ಬಲ್ಲವರು ಪೇಳಿರಿ (ಬೆ–೧೬೪–೩)
– ಕ್ಷೀಣ ಶಾಸ್ತ್ರಾರ್ಥವ ಪರಿಗ್ರಹಿಸುತೆ ಕುರಿ ಕೋಣಗಳ ತಲೆ ಚೆಂಡನಾಡಿ
– ಗೋವಿಂದ ಗೋವಿಂದ ಎನ್ನಲರಿಯದೆ
(ಬೆ–೧೬–೧)
– ಖಳನ ಬಲವ ನಂಬಲಾತು ತಲೆಯ ತವಿಸಿದವನ ಸಿರಿಯು
– ನಂಬಬೇಡಿ ಸಿರಿಯು ತನ್ನದೆ
(ಬೆ–೧೧೫–೧)
– ತಲೆ ಹುಳಿತ ನಾಯಂತೆ ಹಲವು ಬೀದಿಯ ತಿರುಗಿ ಗೆಲವಿನಿಂದಲಿ ಮೂಲ ಮಲವ ನಳಿಯದೆ
– ಹೇಗೆ ನೀ ದಾಸನಾದೆ (ಬೆ–೨೨–೪)
– ತಲೆಮೇಲೆ ಇರಿಸೆನಲು ತಳಕಿಳಿಸಿ ಅವನ ಬಾಗಿಲ ಕಾಯ್ದ ವಾಮನನೆ ಶರಣೆಂಬೆನು
– ನೋಡಯ್ಯ ನಿನ್ನ ದಾಸರ (ಬೆ–೮೫–೫)
– ತನ್ನಯ ಬೀಯಗನ ತಲೆಯನ್ನು ಕಾಯಿ ದಂಥ ರಾಯನ ಕರೆದು ತೋರೆ
– ರಮಣಿ ಕೇಳೆಲೆ ಮೋಹನ (ಬೆ–೯೬–೧)
– ತಂದೆಯೊಡಲನು ಸೀಳಿಸಿದವರೊಳು ದೇವೇಂದ್ರನ ತಲೆಗೆ ತಂದವರೊಳು
– ಶೇಷ ಶಯನ ನಿನ್ನ ಭಾಗವತರ
(ಬೆ–೨೭–೧)
– ವಾಗೀಶ ಬೃಹಸ್ಪತಿ ಹಜಾರದೊಳು ತಲೆ ದೂಗಿ ಶ್ರುತಿ ಶಾಸ್ತ್ರದಲಿ ಸ್ತುತಿಸಿಹರು
– ತಂಗದಿರನನಿಮಿಷ ತಾರಕೆಗಳು
(ಬೆ–೧೬೯–೭)
– ಹೊಲೆಗೂಡಿನಲ್ಲಿರಿಸಿದಾ ಬಳಿಕ ತಲೆಹುಳುಕ ನಾಯಂತೆ ಮನೆಮನೆಯ ತಿರುತಿರುಗಿ
– ಮುಂದೆ ದಯವಿರಲಿ ಶ್ರೀಹರಿಯೆ
(ಸ–೨೧೪–೨)

೧೮೩೧. **ತಲೆದೂಗು** – ವಾಗೀಶ ಬೃಹಸ್ಪತಿ ಹಜಾರದೊಳು ತಲೆದೂಗಿ ಶ್ರುತಿ ಶಾಸ್ತ್ರದಲಿ ಸ್ತುತಿಸಿಹರು
– ತಂಗದಿರನನಿಮಿಷ ತಾರಕೆಗಳು
(ಬೆ–೧೬೯–೭)

೧೮೩೨. **ತಲೆಹುಳುಕ** – ಹೊಲೆಗೂಡಿ ನಲ್ಲಿರಿಸಿದಾ ಬಳಿಕ ತಲೆಹುಳುಕ ನಾಯಂತೆ ಮನೆಮನೆಯ ತಿರುತಿರುಗಿ
– ಮುಂದೆ ದಯವಿರಲಿ ಶ್ರೀಹರಿಯೆ
(ಸ–೨೧೪–೨)

೧೮೩೩. **ತಲ್ಪ** – ಪರಮಪದದೊಳಗೆ ವಿಷಧರನ ತಲ್ಪದಲಿ ನೀ ಸಿರಿಸಹಿತ ಕ್ಷೀರವಾರಿಧಿ ಯೊಳಿರಲು

- ಬಾಗಿಲನು ತೆರೆದು ಸೇವೆಯನು (ಬೆ-೪೬-೧)

೧೮೩೪. **ತಲ್ಲಣ** - ಹಣವ ಕೇಳಿದರಲ್ಲಿ ಹಣವೆ? ತಡೆಯಲಾರದ ತಲ್ಲಣವೆ?
- ಎಂಥ ಟವಳಗಾರನಮ್ಮ (ಸ-೪೩-೧)

೧೮೩೫. **ತಲ್ಲಣಗೊಳು** - ಘುಲ್ಲವದನೆ ಕೇಳೆ ನಿಲ್ಲಲಾರೆ ತಾಪ ತಲ್ಲಣಗೊಳುತಿಹೆನೆ
- ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-ಪ)
- ಬಲು ಘೋರ ಪಾತಕದಿ ಇಳೆಯು ತಲ್ಲಣಗೊಂಡು ಕಳವಳಿಸುತಿದೆ ಕಾಲ ವಿಪರೀತದಿ
- ಕಲಿ ಹೆಚ್ಚಿ ಬಂದಿತಲ್ಲ (ಸ-೭೮-ಅ)

೧೮೩೬. **ತಲ್ಲಣಿಸು** - ತಲ್ಲಣಿಸದಿರು ಕಂಡೆಯಾ ತಾಳು ಮನವೆ ನಿಲ್ಲದಲೆ ರಕ್ಷಿಸುವ ಸಂದೇಹ ಬೇಡ
- ತಲ್ಲಣಿಸದಿರು ಕಂಡೆಯಾ ತಾಳು ಮನವೆ (ಬೆ-೩೪-ಪ)
- ತಮತಮಗೆ ಪಿಡಿದೆಳೆಯೆ ತಲ್ಲಣಿಸಿ ಫಣಿರಾಜ ಸಮವಿಷದ ಕರ್ಬೊಗೆಯನುಗುಳುತಿರಲು
- ನೋಡಯ್ಯ ನಿನ್ನ ದಾಸರ (ಬೆ-೮೫-೨)
- ವಿಷವನುಣಿಸಿ ತಲ್ಲಣಿಸುವ ದುರಿತ ಸಹವಾಸವ, ಅದರ ವಿಲಾಸವ
- ನೆನೆಯೋ ಎಲೆ ಮನವೆ (ಸ-೧೫೩-೨)

೧೮೩೭. **ತವಕ** - ಅಂದು ಸಭೆಯಲಿ ಬಯ್ದವನ ತವಕದಿ ಕಂಧರ ಕಡಿದಾತನ
- ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೨)
- ತವಕದಿಂದಲಿ ಓಡಿದ ಭೂಭುಜರ ಕಡಿದ ಶಿವನ ಬಿಲ್ಲನು ಮುರಿದು
- ಇಂದು ನೀ ಕರೆದುತಾರೆ (ಬೆ-೯೨-೨)
- ಹುಣ್ಣಿವೆ ಮುಂದಿನ ಬೆಳಗಲಿ ಬಾಹೋದು ತಣ್ಣನ ಹೊತ್ತಲಿ ತವಕಗೊಂಬುವುದು
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೧)

೧೮೩೮. **ತವರು/ತವರೂರು** - ತಾಯಿ ತೀರಿದ ಮೇಲೆ ತವರಾಸೆಯೆ
- ಬಾಯಿ ನಾರಿದ ಮೇಲೆ (ಬೆ-೧೪೨-ಪ)
- ಶರೀರ ಸೌಖ್ಯ ಶಮನಕ್ಕಾಗದ ಹೆಣ್ಣು ಊರಲ್ಲಿದ್ದರೇನು ತವರೂರಲ್ಲಿದ್ದರೇನು
- ಮುಟ್ಟಬಾರದವರ ಮನೆಯ (ಬೆ-೧೪೭-೨)

೧೮೩೯. **ತವಿಸು** - ಖಳನ ಬಲವ ನಂಬಲಾತು ತಲೆಯ ತವಿಸಿದವನ ಸಿರಿಯು
- ನಂಬಬೇಡಿ ಸಿರಿಯು ತನ್ನದೆ (ಬೆ-೧೧೫-೧)

೧೮೪೦. **ತವೆ** - ಶುಕ್ರನುಪದೇಶವನು ತವೆ ಜರಿದ ವೈಷ್ಣವರ ಅಕ್ಕರದಿ ಪಾಲಿಸಿದೆ ನಾರಾಯಣಾ
- ನಾರಾಯಣಾ ನಮೋ (ಬೆ-೫೧-೨)
- ಜವನ ಬಾಧೆಯನ್ನು ಬಿಡಿಸು ತವೆ ತ್ರಿವಿಕ್ರಮಾ
- ಈಶ ನಿನ್ನ ಚರಣ ಭಜನೆ (ಬೆ-೬೫-೬)

೧೮೪೧. **ತಸ್ಕರ** - ಗೊಲ್ಲತನವ ಬಿಡಿಸಿ ಗೋಗಾವ ಡಿಂಬ್ಧರಿಸಿ ಉಳ್ಳ ತಸ್ಕರ ಬುದ್ಧಿ ಕಡೆಗೆ ಇರಿಸಿ
- ಯಾಕೆಲೊ ರಂಗ ನಿನಗಿಂತ ನಟನೆಯ ಮಾತು (ಸ-೨೧೬-೧)
- ಪೊಸ ಶಾಸ್ತ್ರಕ್ರಮ ಕೂಗೆ ಜಾರ ತಸ್ಕರ ತತಿಯು ಬಸವಳಿದು ಭಯದಿ ಪೋಗೆ
- ಸಿಂಗರದ ಸಿರಿಧರನೆ (ಬೆ-೧೬೭-೧)
- ವೇದ ತಸ್ಕರನೊಡನೆ ಕಾದಿ ವೇದವ ಸೆಳೆದು
- ಸಿಂಗರದ ಸಿರಿಧರನೆ (ಬೆ-೧೬೭-೫)

೧೮೪೨. **ತಳಕಾಲನಯನದವ** (ಭೃಗು ಋಷಿ)
- ಚಲದಂಕ ಕೌಶಿಕನು ಕಟಿಲ (= ಕಪಿಲ?) ಮಾರ್ಕಂಡೇಯ ತಳಕಾಲನಯನದವನು
- ಸಿಂಗರದ ಸಿರಿಧರನೆ (ಬೆ-೧೬೭-೪)

೧೮೪೩. **ತಳವಾರ** - ಕಳವು ಮಾಡಿದನೆಂದು ಹಿಡಿದೆಳತಂದರೆ ತಳವಾರನೇನ ಮಾಡುವನೊ ಕೇಳೆಲೊ ಹರಿ
- ಯಮದೂತರಿನ್ನೇನ ಮಾಡುವರು (ಬೆ-೪೪-೨)

೧೮೪೪. **ತಳಿರು** - ತನುರೋಮ ಗಿಡ ವೃಕ್ಷ ತಳಿರು ಭುಜಲತೆ ಮೆರೆವ ಘನ ಸಿಂಹ ಮೃಗ ಗಜಗಳಿಂದೊಪ್ಪುವ
- ಪಥ ನಡೆಯದಯ್ಯ (ಬೆ-೯-೨)

೧೮೪೫. **ತಳುವು** - ತಳುವದೀ ವಸ್ತ್ರಗಳ ಕಳುಹು ಬೊಕ್ಕಸಕೆನಲು ನಳಿನಾಕ್ಷಿ ತಿಳಿದಳಾಗ

- ವಾಸುದೇವಾಯ ನಮೋ (ಬೆ-೯೦-೧೦)

**೧೮೪೬. ತಳ್ಳಿಗಾರ** (ಜಗಳಗಂಟ) - ತಳ್ಳಿಗಾರನು ಆಗಿ ತಿರುಗಬೇಡ
- ಏನು ಇಲ್ಲದ ಎರಡು ದಿನದ ಸಂಸಾರ (ಬೆ-೧೧೪-೨)

**೧೮೪೭. ತಾಂಬೂಲ** - ಅಂಬರ ತೊರೆಯಲೇಕೆ ತಾಂಬೂಲ ಬಿಡಲೇಕೆ ಡಂಭತನದಲ್ಲಿ ನೀನಿರಲೇತಕೆ
- ನೇಮವಿಲ್ಲದ ಹೋಮವೇತಕಯ್ಯ (ಬೆ-೧೭-೨)

**೧೮೪೮. ತಾಟಕ** - ಬಲು ಕಳ್ಳ ನಿನ್ನ ಮಗ ತಾಟಕನಿವ ಬಲು ಕದ್ದ ನವನೀತವ
- ನೆರೆದು ಗೋಪಿಯರೆಲ್ಲರು (ಬೆ-೧೦೩-೧)

**೧೮೪೯. ತಾತ್ಪರ್ಯ** - ನುಡಿವ ನುಡಿಯ ತಾತ್ಪರ್ಯವನರಿವ ನಾಡಿ ನರಗಳಂತೊಲಿಹ ಆದಿಕೇಶವರಾಯ
- ಕೊಡಲು ನೀನಾರು (ಸ-೯೨-೨)

**೧೮೫೦. ತಾಪ** - ದಾಂಟುವುದು ಅಸದಳವೊ ಎರಡೊಂದು ಬಲೆಗಳಲಿ ಕಂಟಕದಿ ಬಲು ತಾಪದಿಂದ ಬಳಲುವರು
- ಏನಿದೆತ್ತಣ ಬಯಕೆ (ಬೆ-೧೩೬-೧)
- ಫುಲ್ಲವದನೆ ಕೇಳೆ ನಿಲ್ಲಲಾರೆ ತಾಪ ತಲ್ಲಣಗೊಳುತಿಹೆನೆ
- ಫುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-ಪ)
- ಸ್ಮರನ ಶರತಾಪವನು ಪರಿಹರಿಸಲರಿಯದೆ ದುರುಳ ಕೀಚಕನು ದ್ರೌಪದಿಯ ತುಡುಕಿ
- ನೋಡಿ ಮರುಳಾಗದಿರು (ಬೆ-೧೨೭-೩)
- ಚಂಚಲತ್ವ ಬಲವು ಫಲವು ಜಾಲ ಕೋಪ ತಾಪದಿಂದ ವಂಚನಾರ್ಥ ಹಲವು ಕೆಲವು ಮಿಂಚಿನಂತೆ ಸುಳಿಸುತ
- ಅಹಹ ಮೋಸ ಹೋದೆನಯ್ಯ (ಸ-೯-೨)

**೧೮೫೧. ತಾಮರಸ** (ಕಮಲ) - ತಾಮರಸಾಂಘ್ರಿಯಿಂ ಹೇಮಗರ್ಭದಲಿದ್ದ ವ್ಯೋಮಗಂಗೆಯ ಪೆತ್ತೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೫)

**೧೮೫೨. ತಾಮಸ** - ರಾಮಚಂದ್ರನ ಸೇವೆ ಮಾಡಿ ಮೆಚ್ಚಿಸಿ ಮಹಾತಾಮಸನ ಗರ್ವವನು ಮುರಿದುಬಂದ
- ಆರಿಗಾದರು ಪೂರ್ವ ಕಲ್ಪನೆಯು ತಪ್ಪದು (ಬೆ-೧೮೯-೧)
- ಮರೆವು ತಾಮಸ ಅಹಂಕಾರ ದುರ್ಮತಿಯೆಂಬ ದುರಿತವನು ಹೊರಡಿಸಿದೆ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೩)
- ರಜಸು ತಾಮಸವೆಂಬ ರಯವನೆಲ್ಲವ ಕಳೆದು
- ಆರಿಗಳವಲ್ಲಾತ್ಮ ಯೋಗಸಿದ್ಧಿ (ಬೆ-೧೨೬-೧)
- ತಾಮಸದ ಖಳ ತನ್ನ ತನುಜನನು ಮಥಿಸುತಿರೆ ರಾಮನನು ತೋರೆಂದು ಬಾಧಿಸುತಿರೆ
- ನೋಡಯ್ಯ ನಿನ್ನ ದಾಸರ (ಬೆ-೮೫-೪)
- ತಾಮಸವಿಲ್ಲದೆ ಕ್ಷತ್ರಿಯರ ಸಂಹರಿಸಿದ ರಾಮ ಭಾರ್ಗವನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೬)

**೧೮೫೩. ತಾಮ್ರಚೂಡ** (ಹುಂಜ) - ಮೂಡುಗಡೆ ಮುಗಿಲು ಕೆಂಪಾದುದಡವಿಯ ತಾಮ್ರಚೂಡ ಕಾಳೋದರವು ಕೋಗಿಲೆಗಳುಲಿಯುತಿರೆ
- ತಂಗದಿರನನಿಮಿಷ ತಾರಕೆಗಳು (ಬೆ-೧೮೯-೧)

**೧೮೫೪. ತಾಯ್/ತಾಯಿ** - ತಾಯುದರದಲಿ ಇಂದು ನವಮಾಸಂಗಳಲ್ಲಿ ಒಂದಾಗಿ ಮಲಮೂತ್ರದಲಿ ಕುದಿದು ಕುದಿದು
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೩)
- ಆನೆವಾಹನ ಪಿತನ ತಾಯನಳೆದೋನು ಭಾನುಸುತಗೆ ಶಾಪವನಿತ್ತವನು
- ಈತನೇನೆ ನಿನ್ನ ಮಗನು (ಸ-೩೮-೨)
- ಚಂದದಲಿ ತಾಯಿ ಮಗುವಿಗೆ ಮೊಲೆಯ ಹಾಲುಣಿಸುವಂದದಲಿ ಉಣಿಸಿದಲ್ಲದೆ ಬಿಡದು ಮರೆಯದಿರಿ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು

(ಸ-೧೨೪-೫)
- ಹಲವು ಜನಮದಿ ತಾಯಿ ಎನಗಿತ್ತ ಮೊಲೆ ಹಾಲು ನಲಿದುಂಬಾಗ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೪)
- ಸತಿಯು ಸುತರು ಪುತ್ರಿ ಮಿತ್ರರತಿಶಯದೊಳು ತಂದೆ ತಾಯಿ ಅತಿವಿನೋದಗೈವ ಭಾವ
- ಯಾರಿಗಾರು ಬಹರು ಸಂಗಡ (ಸ-೨೨೧-೨)
- ತಾಯಿತಂದೆಯ ಬಿಟ್ಟು ತಪವ ಮಾಡಲು ಬಹುದು
- ತೊರೆದು ಜೀವಿಸಬಹುದೆ (ಬೆ-೫೫-೧)
- ತಾಯಿ ತೀರಿದ ಮೇಲೆ ತವರಾಸೆಯೆ
- ಬಾಯಿ ನಾರಿದ ಮೇಲೆ (ಬೆ-೧೪೨-ಪ)
- ಪಂಕಜಜನ ತಾಯಿ ಸುತನ ಅಂಕದಲ್ಲಿ ಹುಟ್ಟಿ ಜಗವ ಮಂಕು ಮಾಡುತಿಪ್ಪ ಮಾಯೆ ಹತ್ತು ಶಂಕೆಯ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೫)
- ತಂದೆ ತಾಯಿಗಳಾರು ಅಂದಿದ್ದ ಊರೇನು
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೫)
- ತಾಯಿಯಪ್ಪಣೆಗೊಂಡು ಸೇವೆಗೆ ರಘುಪತಿ ರಾಯನಲ್ಲಿ ನಿಂದು
- ಎಷ್ಟು ಪೊಗಳಲಿ ನಾನು (ಸ-೫೩-೧)
- ಗಿಡದ ತಾಯಿ ತಂದೆಯ ನುಂಗಿತು
- ಹಲವು ಜೀವನವ ಒಂದೆಲೆ ನುಂಗಿತು (ಬೆ-೧೫೮-೩)
- ಅಣ್ಣ ತಮ್ಮ ತಾಯಿ ತಂದೆ ಬಯಸಲಾಗದು
- ಡಿಂಬಿನೊಳು ಪ್ರಾಣವಿರಲು (ಬೆ-೧೧೭-೨)
- ಉಂಡರೆ ಸೇರದ ತಾಯಿ ಉರಗನ ಮೆಕ್ಕೆಯ ಕಾಯಿ
- ಅಹುದಾದಡಹುದೆನ್ನಿ (ಬೆ-೧೩೨-೩)
- ಆಯಿತೊ ಹೋಯಿತೊ ಏನಾಯಿತೋ ಈ ದೇಹಕ್ಕೆ ತಾಯಿ ಯಾರೊ ಇನ್ನು ತಂದೆ ಯಾರೊ
- ದಾಸನಾಗೋ ಭವಪಾಶ ನೀಗೋ (ಬೆ-೨೦-೩)

- ಕಂದನ ತಾಯಿಯು ಆಡಿಸುತಿರೆ ಪೋಗಿ ಕಂದ ಬಾವಿಯ ಕಂಡು ನೋಡುತಿರೆ
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೩)
- ತಂದೆ ತಾಯಿಯು ನೀನೆ ಬಂಧುಬಳಗವು ನೀನೆ
- ವಾಸುದೇವಾಯ ನಮೋ (ಬೆ-೯೦-೮)
- ಜಲವೆ ಸಕಲ ಕುಲಕೆ ತಾಯಿಯಲ್ಲವೆ
- ಕುಲ ಕುಲವೆಂದು ಹೋರಾಡದಿರಿ (ಬೆ-೧೨೧-೨)
- ಐವರು ಮಕ್ಕಳನು ಪಡೆದ ತಾಯಿಗೆ ಸಹೋದರನು ಭೂರಮಣರೊಳಗಗ್ಗಳನು ಅತಿ ಧೈರ್ಯನು
- ನೀನಾವ ಬಾಂಧವನೊ (ಬೆ-೭೮-೭)
- ತೊಟ್ಟ ಬಾಣವ ತೊಡಲೊಲ್ಲದೆ ತಾಯಿಗೆ ಕೊಟ್ಟ ಭಾಷೆಗೆ ಐವರ ಕೊಲ್ಲದೆ
- ಬಂದಿದೆ ದೂರು ಬರಿದೆ (ಬೆ-೮೬-೪)
- ಹೆತ್ತ ತಾಯಿಗಿಂತ ಅತ್ಯಧಿಕ ಮಾಯವುಂಟೆ
- ಹೆತ್ತ ತಾಯಿಗಿಂತ ಅತ್ಯಧಿಕ (ಬೆ-೧೨೮-ಪ)
- ತಾಯ ಮಾತನು ಕೇಳಿ ಸಾವಿರ ತೋಳಿನ ಆವಿನ ಕಳ್ಳನ ಕೊಂದಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೬)
- ಮುತ್ತಯ್ಯನ ತಾಯ ಪೆತ್ತ ದೇವನ ಎನ್ನ ಒತ್ತಿಗೆ ಕರೆದು ತಾರೆ ಹೇ ಸಖಿಯೆ
- ತೋರೆ ಬೇಗನೆ ಸಖಿ (ಬೆ-೯೪-೨)
- ತಂದೆ ತಾಯ ಬಸುರಿನಲಿ ಬಂದೆನಂದಿ ಗಿಂದಿಗೂ
- ಒಲ್ಲೆನೆಂದರಾಗುವುದೆ (ಬೆ-೧೧೦-೧)
- ಹೆತ್ತವಳಿರೆ ತಾಯ ಬೇರೆ ಪಡೆದಾತನ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ (ಬೆ-೮೦-೨)
- ಕ್ಷೂಣವಿಲ್ಲದೆ ತಾಯ ಶಿರವರಿದು ತಂದೆಯನು ಪ್ರಾಣಹತ್ಯವ ಮಾಡಿದರ ಕುಲವನು
- ನೋಡಯ್ಯ ನಿನ್ನ ದಾಸರ (ಬೆ-೮೫-೬)
- ಚಳಿಯ ಮಗಳ ತಾಯಳಿಯನ ತನಯನ

ಇಳುಹದೆ ಪೊತ್ತಿಹನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೧)
- ವರುಷವೈದರ ಪೆಸರವನ ತಾಯನುಜನ ಧರಿಸಿದಾತನ ಸಖನ
- ರಾಜವದನೆ ಸುರರಾಜನ (ಬೆ-೯೭-೨)
- ತಂದೆಯುದರದಿ ಮೂರು ಮಾಸ ತಾಯೊಡಲಿನಲಿ ಸಂದೇಹವಿಲ್ಲ ನವಮಾಸ
- ನೊಂದೆನಾ ಹರಿಯೆನ್ನದೆ (ಬೆ-೧೩-೧)
- ತೋಯಜವೆಂಬ ಪುಷ್ಪದ ಪೆಸರವರೊಳು ತಾಯ ಸೊಸೆಗೆ ಮಕ್ಕಳಿತ್ತವರೊಳು
- ಶೇಷಶಯನ ನಿನ್ನ ಭಾಗವತರ (ಬೆ-೨೭-೨)
- ತಿರುಕ ಹಾರುವನೆಂದೆನೆ ಹೆತ್ತ ತಾಯ ಶಿರಕೆ ಮುನಿದವನೆಂದೆನೆ
- ನಿನ್ನ ನಾನೇನೆಂದೆನೊ ರಂಗಯ್ಯ (ಬೆ-೯೧-೨)
- ಬಾಯೊಳಗಿಹಳ ಗಂಡನ ನಿಜ ತಮ್ಮನ ತಾಯ ಪಿತನ ಮಡದಿಯ ಧರಿಸಿದನ
- ರಮಣಿ ಕೇಳೆಲೆ ಮೋಹನ (ಬೆ-೯೬-೧)
- ವರ ಮತ್ಸ್ಯನಗಧರನ ಸೂಕರನ ಸಿಂಹನ ತಿರುಕ ತಾಯ್ತರೆದಾತನ ವರವಿತ್ತು ಶಬರಿಗೆ
- ಇಂದು ನೀ ಕರೆದುತಾರೆ (ಬೆ-೯೨-೩)
- ತೊಟ್ಟಲಿನ ಶಿಶು ತಾಯ ಬಿಟ್ಟ ತೆರನಂತೆ ಕಂಗೆಟ್ಟು ಸೊರಗಿದೆನಯ್ಯ ಕೃಷ್ಣ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮_೧)
- ತಂದೆತಾಯನು ಬೈದು ಬಾಧಿಸುವವನ ಸಂಗ
- ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ-೧೮೯-೧)
- ಆನೆವಾಹನ ಪಿತನ ತಾಯನಳೆದವನು ಭಾನುಸುತಗೆ ಶಾಪವನಿತ್ತು ಜರೆದವನು
- ಸೀತಾಪತಿ ರಘುನಾಥ (ಬೆ-೧೦೦-೨)
- ಗಜವನೇರಿದನ ತಂದೆಯ ತಾಯನಳೆದನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೨)
- ತಂದೆ ತಾಯ್ ಆರು ಆನಿದ್ದ ಊರಾವುದೋ
- ನೊಂದೆನಾ ಹರಿಯೆನ್ನದೆ (ಬೆ-೧೩-೫)
- ಬಾಲಕ ತನ್ನ ತಾಯ್ತಂದೆಯೊಳ್ ಮುನಿದು ಹಲಕಾಲ ವನದೊಳು ತಪವನು ಮಾಡಲು
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೩)
- ವನಿತೆ ಧರ್ಮಜನ ತಾಯ್ ತಿರಿದುಂಡಳಂತೆ
- ಆರಿಗಾದರು ಪೂರ್ವಕರ್ಮಬಿಡದು (ಬೆ-೧೦೮-೩)
- ಹೆತ್ತ ತುಪ್ಪವನಿಕ್ಕಿ ಸಲಹಿದ ತಾಯ್ತಂದೆ ಅತ್ತು ಕರೆದುಳಿವರು ಮತ್ತೆ ಬೆನ್ನಲೆ ಬಾಹರೆ
- ಆರು ಸಂಗಡ ಬಾಹೋರಿಲ್ಲ (ಬೆ-೧೫-೧)
- ಮೃತ್ಯುವಂತೆಳೆವನನು ಬಿಡಿಸಬಾರದೆ ತಾಯೆ
- ವಾಸುದೇವಾಯ ನಮೋ (ಬೆ-೯೦-೪)

೧೮೫೫. ತಾರಕ (ಒಬ್ಬ ರಾಕ್ಷಸ) - ಯುದ್ಧದಲಿ ತಾರಕನೊ ವಿದ್ಯೆಯಲಿ ಗಾರ್ಗೆಯನೊ
- ಬೆರೆಯದಿರು ಬೆರೆಯದಿರು (ಬೆ-೧೪೩-೫)

೧೮೫೬. ತಾರಕ (ಸಂರಕ್ಷಕ) - ಭಿನ್ನಭೇದ ಗಳೆಂಬ ಬಲು ಸಂಶಯ ಕಳೆದು ತನ್ನೊಳಗೆ ತಾ ತಿಳಿದು ತಾರಕಬ್ರಹ್ಮವ
- ಆರಿಗಳವಲ್ಲಾತ್ಮ ಯೋಗಸಿದ್ಧಿ (ಬೆ-೧೨೬-೨)

೧೮೫೭. ತಾರಕೆ (ನಕ್ಷತ್ರ) - ತಂಗದಿರನನಿಮಿಷ ತಾರಕೆಗಳು ಮುಸಳಿಸೆ ಪತಂಗ ಪರ್ವತವ ಅಡರಿ ಬಂದನು
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-ಪ)

೧೮೫೮. ತಾರಿಸು (ಪಾರುಮಾಡು) - ಗೋವಿಂದ ವೈಕುಂಠವಿಭುವಿಂದು ತಾರಿಸುತ ಮುಕುಂದ ಮುಕುತಿಯನೊದಗಿಸ್ಯೆ
- ಅಣುಮಹತ್ತಾದ ದೇವ (ಬೆ-೭೧-೨)

೧೮೫೯. ತಾರೆ (ನಕ್ಷತ್ರ) - ಹನ್ನೆರಡನೆಯ ತಾರೆಯ ಪೆಸರಾಕೆಯ ಕನ್ನೆಯಯ್ಯನ ಮನೆಯ
- ರಾಜವದನೆ ಸುರರಾಜನ (ಬೆ-೯೭-೩)
-ಶಶಿತಾರೆಗಳು ಸರಿಯೆ ನೀಲಾಬ್ಜ ಮೈಮರೆಯೆ
- ಸಿಂಗರದ ಸಿರಿಧರನೆ (ಬೆ-೧೬೭-೧)

೧೮೬೦. ತಾಲ/ತಾಳ - ತಾಲ ದಂಡಿಗೆ ಪಿಡಿದು

ತುಂಬುರು ನಾರದರು ಭೂಪಾಳಿ ದೇಶಾಕ್ಷಿ ನಾರಾಯಣಿ ಗುಜ್ಜರಿ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೫)
- ತಾಳದಂಡಿಗೆ ಭೃಂಗಿಮೇಳಗಳ ಕೂಡಿ
- ಬಂಟನಾಗಿ ಬಾಗಿಲಕಾಯ್ವೆ (ಬೆ-೪೫-೨)
- ಡೊಳ್ಳಿನ ಮೇಲ್ ಕೈಯ ಭರಮಪ್ಪ ಹಾಕ್ಯಾನು ತಾಳವ ಶಿವನಪ್ಪ ತಟ್ಟಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೧೧)

೧೮೬೧. ತಾವರೆ - ಕೆಸರೊಳು ತಾವರೆ ಪುಟ್ಟಲು ಅದ ತಂದು ಕುಸುಮನಾಭನಿಗೆ ಅರ್ಪಿಸರೇನಯ್ಯ
- ಕುಲ ಕುಲ ಕುಲವೆನ್ನುತಿಹರೊ (ಬೆ-೧೨೦-೧)

೧೮೬೨. ತಾಳ (ತಾಳಹಾಕುವ ಸಾಧನ)- ದಾಸರೆಲ್ಲರು ಬಂದು ಧೂಳಿನ ದರ್ಶನಕೊಂಡು ಲೇಸಾಗಿ ತಾಳ ದಂಡಿಗೆಯ ಪಿಡಿದು
- ಏಳು ನಾರಾಯಣ (ಸ-೫೯-೩)

೧೮೬೩. ತಾಳಿ (ಒಂದು ಆಭರಣ) - ಈರೈದು ತಾಳಿಗಳಿತ್ತು ಬಿರುದಿನ ಕಪ್ಪೆಂಟಿತ್ತು
- ಒಡವೆ ಹೋಯಿತು ಮನ ಧೃಡವಾಯಿತು (ಸ-೬೯-೧)

೧೮೬೪. ತಾಳು (ಧರಿಸು) - ಮೂರು ರೂಪವ ತಾಳಿ ಮಹಾಯೋಗ್ಯರುಗಳಿಗೆ ಸಾರ ತತ್ತ್ವವ ಪೇಳ್ದೆ
- ಎಷ್ಟು ಪೊಗಳಲಿ ನಾನು (ಸ-೫೩-೩)
- ಕಮಲ ಬ್ರಹ್ಮಾಂಡ ಕೋಟಿ ಒಡಲೊಳು ತಾಳ್ದಂಥ ರಮಾಧವ ನಿಮಗೆ ನೀರೊಳಗೆ ವಾಸವಾಯಿತು
- ನಮಗೆಲ್ಲ ಮನೆಗಳಯ್ಯ (ಸ-೧೩೨-ಅ)
- ಹರಿಯೆನಲು ಹರಿ ರೂಪ ತಾಳಿದೆ ಹರಿ ಯೊಳಡಗಿದೆ ಮತ್ತೆ
- ಭವಭಯವಿನಾಶ ಭೋ (ಬೆ-೪೧-೧)
- ಮತ್ಸ್ಯಾವತಾರದೊಳಾಡಿದನೆ ಮಂದರಾಚಲ ಬೆನ್ನೊಳು ತಾಳಿದನೆ
- ಗೋವಿಂದ ಹರಿ ಗೋವಿಂದ (ಬೆ-೫೬-೧)
- ಹಗೆಯರು ಮುನ್ನಿನ ಪೂರ್ವದ್ವೇಷವ ತಾಳಿ ಮಿಗೆ ಸ್ನೇಹ ಮೆಚ್ಚಿಸಿ ಕುರುಪತಿಗೆ
- ಬಂದಿದೆ ದೂರು ಬರಿದೆ (ಬೆ-೮೬-೧)

೧೮೬೫. ತಾಳು (ಸಹಿಸು) - ಧಾರಿಣಿಯ ಭಾರವನು ತಾಳಲಾರದೆ ದೇವಿ ಶ್ರೀರಾಮ ರಾಮೆಂದು ಶಿರವ ತೂಗುವಳಯ್ಯ
- ಕಲಿಯೇರಿ ಬಂತು (ಬೆ-೧೩೦-೪)
- ಒಂದು ಕ್ಷಣ ಯಮನ ಬಾಧೆಯ ತಾಳಲಾರೆನ್ನೆ ಇಂಬಿಟ್ಟುಕೊಳು ಮುರಾರಿ
- ನೊಂದೆನಾ ಹರಿಯೆನ್ನದೆ (ಬೆ-೧೩-೧)
- ತಲ್ಲಣಿಸದಿರು ಕಂಡೆಯಾ ತಾಳು ಮನವೆ ನಿಲ್ಲದಲೆ ರಕ್ಷಿಸುವ ಸಂದೇಹ ಬೇಡ
- ತಲ್ಲಣಿಸದಿರು ಕಂಡೆಯಾ ತಾಳು ಮನವೆ (ಬೆ-೩೪-ಪ)
- ಒಂದು ಕ್ಷಣವೂ ಯಮನ ಬಾಧೆ ತಾಳಲಾರೆ ಹಿಂದಿಟ್ಟುಕೋ ಮುರಾರೆ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೩)

೧೮೬೬. ತಾಳು (ಹೊಂದು, ಪಡೆ) - ದಶಕಂಠ ನನುಜನು ಜಾನಕಿಯ ಬಿಡಹೇಳೆ ಅಸುರ ಕೋಪವ ತಾಳಿ ಅಟ್ಟಲಾಗ
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೪)
- ಮಂಡೆಯಲಿ ಕೊಂಡಾಂತು ಮೈ ಜುಮ್ಮು ತಾಳಲು
- ಸಿಂಗರದ ಸಿರಿಧರನೆ (ಬೆ-೧೬೭-೩)
- ಹರಿಯ ರೂಪವ ತಾಳಿ ಇರುಳು ದೈತ್ಯನ ಕೊಂದ ಸಿರಿಧರನು ಕಾಗೆನೆಲೆ ಆದಿಕೇಶವ ರಾಯ
- ಮೂವರೇರಿದ ಬಂಡಿ (ಬೆ-೧೬೦-೩)

೧೮೬೭. ತಿಂಗಳು - ಬಂದೊಂದು ತಿಂಗಳೊಳು ಬಹುಮಾನ ನಡತೆಗಳು
- ಮಾವನ ಮನೆಯೊಳಗೆ (ಬೆ-೧೪೬-೪)
- ಬಂದೆರಡು ತಿಂಗಳೊಳಗೆ ಹಿತವಾದವು
- ಮಾವನ ಮನೆಯೊಳಗೆ (ಬೆ-೧೪೬-೪)

೧೮೬೮. ತಿಂತ್ರಿಣಿ (ಹುಣಿಸೆ ಮರ) - ತಿಂತ್ರಿಣಿ ಮರದಡಿ ಉರಗ ಕಚ್ಚಿ ಒರಗಿರಲು ಮಂತ್ರಿಸಿ ಮನೆಗೆ ಕಳುಹಿದ ಗರುಡಗಮನನೆ

- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೨)

೧೮೬೯. ತಿದ್ದು (ಓರಣಗೊಳಿಸು) - ಕುಂಜರ ಗಮನೆ ಬಾ ಎಂದು ಮುಂಗುರುಳ ತಿದ್ದಿದ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೧)

೧೮೭೦. ತಿದ್ದು (ಸರಿಪಡಿಸು) - ಎನ್ನ ತಿದ್ದಿ ಹೃದಯ ಶುದ್ಧ ಮಾಡು ಪ್ರದ್ಯುಮ್ನನೆ
- ಈಶ ನಿನ್ನ ಚರಣ ಭಜನೆ (ಬೆ-೬೫-೧೪)
- ತಿದ್ದುವ ಸದಮಲ ವೈಷ್ಣವರು ಬರುತಿರೆ ಕಂಡು ಎದ್ದು ನಮಸ್ಕರಿಸಲೊಲ್ಲೆ
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೫)
- ದೆಸೆಗೆಟ್ಟು ನಾಡದೈವಂಗಳಿಗೆ ಹಲುಬಿದಡೆ ನೊಸಲ ಬರೆಹವ ತೊಡೆದು ತಿದ್ದಲಳವೆ
- ತನ್ನ ಪ್ರಾಪ್ತಿಯ ಫಲವ (ಬೆ-೧೧೨-೩)
- ದೇಶಾಧಿದೇಶಗಳ ತಿರುಗುವ ಗರುಡನಿಗೆ ನಾಸಿಕದ ಕೊನೆ ಡೊಂಕ ತಿದ್ದಲಿಲ್ಲ ಹರಿಯು
- ಪ್ರಾಚೀನ ಕರ್ಮವಿದು (ಬೆ-೧೦೭-೩)

೧೮೭೧. ತಿನ್/ತಿನ್ನು - ಜೊನ್ನೆಯ ತುಪ್ಪ ಅನ್ನ ಒಲ್ಲದೆ ಎಲುವು ಮಾಂಸವನ್ನು ತಿಂಬ ಕುನ್ನಿಯಾದೆನಯ್ಯ ಕೃಷ್ಣ
- ಎಷ್ಟು ಪ್ರೀತಿಯೊ ಮನಕೆ (ಸ-೫೨-೫)
- ಹಾಲ್ಮೊಸರ ಮೀಸಲು ಮುರಿದು ತಿಂದ
- ನಾರಾಯಣನೆ ಈತ (ಸ-೧೩೮-೩)
- ತಿಂದೋಡಿ ಬಂಧು ಬಳಗ ತಪ್ಪಿಸಿಕೊಂಬ ರೆಂದು ನೋಡೆಚ್ಚರಿಕೆ
- ಮಾಡು ದಾನ ಧರ್ಮ (ಸ-೨೦೪-೬)
- ವೇದವಿಪ್ರರು ತಮ್ಮ ವೃತ್ತಿ ಸ್ವಾಸ್ಥ್ಯವ ಕಳೆದು ಆಧಾರವಿಲ್ಲದಲೆ ತಿರಿದು ತಿನ್ನುವರು
- ಕಲಿಯೇರಿ ಬಂತು (ಬೆ-೧೩೦-೯)
- ಹರಿವಾಣದೊಳಗಮೃತಾನ್ನವು ಇರುತಿರೆ ತಿರಿದ ಕೂಳನು ತಿನ್ನಲೇತಕಯ್ಯ
- ನಾರಾಯಣ ನಿನ್ನ ನಾಮವು (ಬೆ-೫೨-೨)
- ಅಷ್ಟೈಶ್ವರ್ಯದ ಮೃಷ್ಟಾನ್ನವಿರುತಿರೆ ಬಿಟ್ಟ ಕೂಳನು ತಿನ್ನಲೇತಕಯ್ಯ
- ನಾರಾಯಣ ನಿನ್ನ ನಾಮವು (ಬೆ-೫೨-೧)
- ತನ್ನ ಅನುಜೆಯಾಳಿದವನ ಬೆಂಕಿ ತಿನ್ನದಂತೆ ಕಾಯ್ದ
- ಈತನೀಗ ವಾಸುದೇವನು (ಬೆ-೭೫-೧)
- ಮಾರಿ ಮಸಣಿಗಳಂತೆ ಕೂಳನ್ನು ತಿಂಬರಂತೆ
- ಆರಿಗಾದರು ಪೂರ್ವಕರ್ಮಬಿಡದು (ಬೆ-೧೦೮-೧)
- ತುಡುಗುತಿಂದು ಮೀಸಲಳಿದು ಎಡೆಗೆಡಿಸಿ ಓಡಿಹೋದ ನೋಡು
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೩)
- ಕುಳ್ಳಿನಿಂದ ಕುದಿಸಿ ತಿಂದು ಕಳ್ಳ ಗಡಿಗೆ ಬರಿದು ಮಾಡೆ
- ಕಣಿಯ ಹೇಳಬಂದೆ ನಾನು (ಬೆ-೭೨-೨)
- ಕಡೆಗೆ ಅಪರ ರಾತ್ರಿಯಲ್ಲಿ ತಿಂದು ಒರಗುವೆ
- ಸಾಕು ಸಾಕು ಮನುಜ ಸೇವೆಯು (ಬೆ-೪೨-೧)
- ಮಲ ಮೂತ್ರ ಹಲವು ಉಚ್ಚಿಷ್ಟವೆನ್ನದೆ ತಿಂದು
- ನೊಂದೆನಾ ಹರಿಯೆನ್ನದೆ (ಬೆ-೧೩-೨)
- ಬಹುಜನದೊಂದಿಗೆ ಕುಳಿತು ನೀ ಮಿಂಚು ಗೂಳನೆ ತಿಂದು ಬೆಂದೊಡಲ ಹೊರೆದು ಕಾಲವ ಕಳೆಯುತಿಹೆ ಮರುಳೆ
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೨)
- ಬಂದದ್ದು ಬಚ್ಚಲಕುಣಿ ತಿಂದದ್ದು ಮೊಲೆಯ ಮಾಂಸ ಇಂಥ ನಿಂದಕಗೆ ನನಗೆ ಇನ್ನೇತರ ಕುಲವೊ
- ಏತರವನೆಂದು ಪೇಳಲಿ (ಬೆ-೧೨೨-೨)

೧೮೭೨. ತಿನಿಸು (ನವೆ, ತುರಿಕೆ) - ನಿರ್ಮ ಳಿಲ್ಲದ ಮನಸು ಅದು ಕಜ್ಜಿ ತಿನಿಸು
- ಅಹುದಾದರಹುದೆನ್ನಿ (ಬೆ-೧೩೧-೨)

೧೮೭೩ ತಿನಿಸು (ಊಡು)- ಎಂಜಲ ತಿನಿಸುವುದು ಮೂಜಗಕೆ
- ಮರ ನುಂಗುವ ಪಕ್ಷಿ (ಬೆ-೧೬೧-೩)

೧೮೭೪. ತಿಪ್ಪ - ಕೊಪ್ಪಾನೆ ಕೇಳಿದರಲ್ಲಿ ಕೊಪ್ಪ? ಊರಮುಂದಿನ ತಿಪ್ಪ?
- ಎಂಥ ಟವಳಗಾರನಮ್ಮ (ಸ-೪೩-೨)

೧೮೭೫. ತಿಮಿರ - ಬ್ರಹ್ಮಾಂಡ ಕೋಟಿ

ತಿಮಿರವ ಗೆಲುವವನ ಒಮ್ಮೆ ನೆನೆಯಲು ಪ್ರಸನ್ನನಾದವನ
– ನೆನೆಯಬಾರದೆ ಮನವೆ ಪರಮಪಾವನನ (ಸ–೧೫೨–೨)

೧೮೭೬. ತಿಮ್ಮ/ತಿಮ್ಮರಾಯ (ಶ್ರೀನಿವಾಸ) – ಶೇಷಗಿರಿಯ ಮೇಲೆ ಇಪ್ಪ ತಿಮ್ಮ ಶೆಟ್ಟಿ ದೇಶಕೆ ಪ್ರಸಾದವ ನಡಸುವ ಶೆಟ್ಟಿ
– ಬಂದೆವಯ್ಯ ಗೋವಿಂದಶೆಟ್ಟಿ (ಬೆ–೧೫೧–೩)
– ಜಗದಂತರ್ಯಾಮಿ ಎಂತೆಂದು ನಿನ್ನ ನಿಗಮ ಸಾರುವ ಮಾತು ಪುಸಿಯೆ ಕೋನೇರಿ ತಿಮ್ಮ
– ಜಗದಂತರ್ಯಾಮಿ ಎಂತೆಂದು (ಬೆ–೫೮–ಪ)
– ಹರಿ ಆದಿಕೇಶವ ಗುರು ಅಪ್ರಮೇಯ ಸಿರಿಧರ ಶೇಷಗಿರಿ ವರ ತಿಮ್ಮರಾಯ
– ಲಾಲಿ ಪಾವನಚರಣ ಲಾಲಿ ಅಘಹರಣ (ಸ–೨೨೯–೫)

೧೮೭೭. ತಿರಿ – ಹರಿವಾಣದೊಳಗಮೃತಾನ್ನವು ಇರುತಿರೆ ತಿರಿದ ಕೂಳನು ತಿನ್ನಲೇತಕಯ್ಯ
– ನಾರಾಯಣ ನಿನ್ನ ನಾಮವು (ಬೆ–೫೨–೨)
– ವನಿತೆ ಧರ್ಮಜನ ತಾಯ್ ತಿರಿದುಂಡಳಂತೆ
– ಆರಿಗಾದರು ಪೂರ್ವಕರ್ಮಬಿಡದು (ಬೆ–೧೦೮–೩)
– ವೇದವಿಪ್ರರು ತಮ್ಮ ವೃತ್ತಿ ಸ್ವಾಸ್ಥ್ಯವ ಕಳೆದು ಆಧಾರವಿಲ್ಲದಲೆ ತಿರಿದು ತಿನ್ನುವರು
– ಕಲಿಯೇರಿ ಬಂತು (ಬೆ–೧೩೦–೯)

೧೮೭೮. ತಿರು (ಶ್ರೀ) – ತಿರು ಚೂರ್ಣದ್ವಾದಶ ನಾಮವನಿಡುವರ ಪರಿಚಾರಕರ ಪರಿಚಾರಕ ನೆನಿಸೆನ್ನ
– ದೇಶಾಧಿಪತಿ ನರಹರಿಯೆ (ಬೆ–೨೧–೨)
– ತಿರುವೆಂಕಟೇಶ ಜಗದೀಶ ಒಲಿದುಪ್ಪವಡಿಸೊ ಹರಿಯೆ
– ಪೊಸರನ ಜನಕನೇ (ಬೆ–೧೬೮–೫)
– ತೀರ್ಥ ಪಿಡಿದವರು ತಿರುನಾಮಧಾರಿಗಳೆ
– ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ–೧೩೮–ಪ)

೧೮೭೯. ತಿರುಕ – ನರದೇಹ ಹೊತ್ತು ತಿರುಗುವಂಥ ತಿರುಕ ನನಗಿನ್ನಾತರ ಕುಲವಯ್ಯ
– ಯಾತರವನೆಂದುಸುರಲಿ (ಸ–೨೧೮–೪)
– ತಿರುಕ ಹಾರುವನೆಂದೆನೆ ಹೆತ್ತ ತಾಯ ಶಿರಕೆ ಮುನಿದವನೆಂದೆನೆ
– ನಿನ್ನ ನಾನೇನೆಂದೆನೊ ರಂಗಯ್ಯ (ಬೆ–೯೧–೨)
– ವರ ಮತ್ಸ್ಯನಗಧರನ ಸೂಕರನ ಸಿಂಹನ ತಿರುಕ ತಾಯ್ತರೆದಾತನ ವರವಿತ್ತು ಶಬರಿಗೆ
– ಇಂದು ನೀ ಕರೆದುತಾರೆ (ಬೆ–೯೨–೩)

೧೮೮೦. ತಿರುಗು – ಶ್ವಾನಗಿಂತಲು ಬಲು ಮಾನಗೆಟ್ಟು ನಾ ದೀನನಾಗಿ ಮನೆಮನೆಗಳ ತಿರುಗಿ
– ವ್ಯರ್ಥವಾಯಿತಲ್ಲ ಜನ್ಮ ಸಾರ್ಥಕಾಗಲಿಲ್ಲ (ಸ–೨೩೧–೨)
– ಹೊತ್ತುಕೊಂಡು ತಿರುಗಿದೆ ರೊಕ್ಕದಾ ಪ್ರಾಣಿಯನ್ನು
– ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ–೭೧–೨)
– ತಿಳಿದು ನಾಲ್ಕು ದಿಕ್ಕಿನಲ್ಲಿ ಹೊಳೆದು ಎಂಟು ದಿಕ್ಕ ತೋರಿ ಬಳಸಿ ಸುತ್ತ ತಿರುಗುತಿಹುದು ಬಳಲಿ ಬಳಲದೆ
– ಎರಡು ಸಾವಿರದ ಜಿಹ್ವೆಯುರಗ (ಸ–೪೮–೩)
– ನರದೇಹ ಹೊತ್ತು ತಿರುಗುವಂಥ ತಿರುಕ ನನಗಿನ್ನಾತರ ಕುಲವಯ್ಯ
– ಯಾತರವನೆಂದುಸುರಲಿ (ಸ–೨೧೮–೪)
– ಲೋಕವೀರೇಳನ್ನು ತಿರುಗುವಾ ರವಿರಥಕೆ ಏಕಗಾಲಿಯು ಏಳು ಕುದುರೆಯಿಂದ
– ಪ್ರಾಚೀನ ಕರ್ಮವಿದು (ಬೆ–೧೦೭–೨)
– ದೇಶಾಧಿದೇಶಗಳ ತಿರುಗುವ ಗರುಡನಿಗೆ ನಾಸಿಕದ ಕೊನೆ ಡೊಂಕ ತಿದ್ದಲಿಲ್ಲ ಹರಿಯು
– ಪ್ರಾಚೀನ ಕರ್ಮವಿದು (ಬೆ–೧೦೭–೩)
– ಬಲಿದ ಚರ್ಮ ರಕ್ತ ಹೊತ್ತು ತಿರುಗುವ ಶುದ್ಧ ಹೊಲೆಯಗೆ ನನಗೆ ಇನ್ನೇತರ ಕುಲವೊ
– ಏತರವನೆಂದು ಪೇಳಲಿ (ಬೆ–೧೨೨–೪)
– ರಥವನಡರಿ ಸುರಪಥದಲಿ ತಿರುಗುವ ಸುತನಿಗೆ ಶಾಪವನಿತ್ತವನ
– ಏತರವನೆಂದು ಪೇಳಲಿ (ಬೆ–೧೨೨–೪)

- ಬಣ್ಣಗೆಟ್ಟಾರಣ್ಯ ತಿರುಗುವವನು ನಾನಲ್ಲ ಹೆಣ್ಣಿನಾಸೆಯ ಬಿಡುವ ಹನುಮನಲ್ಲವೊ ಸ್ವಾಮಿ
- ಕಾಯೊ ಕರುಣಾಕರನೆ (ಬೆ-೫೯-೧)
- ಪಕ್ಷಿವಾಹನನ ಗುಣ ಲೆಕ್ಕಿಸಿ ಪೊಗಳದೆ ಬೆಕ್ಕಸ ಬೆರಗಾಗಿ ಅಕ್ಕಿಗೆ ತಿರುಗುವವ
- ಹೇಗೆ ನೀ ದಾಸನಾದೆ (ಬೆ-೨೨-೨೦)
- ಮೊದಲು ನಿನ್ನುಪದೇಶ ಸದರುಮಾಡದೆ ತಿರುಗುವುದನೆಲ್ಲ ಉದುರಿಸಿದೆ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೪)
- ನಾರಿಯರ ವ್ರತಭಂಗಗೆಯ್ಯಲಾ ದೆಸೆಯಿಂದ ಊರುತ್ರಯವದು ತಿರುಗುವುದು ನಿಲ್ಲಲಾಗ
- ನೋಡಯ್ಯ ನಿನ್ನ ದಾಸರ (ಬೆ-೮೫-೯)
- ಅತ್ತೆಮನೆ ಸೇರುವಗೆ ಅಭಿಮಾನವುಂಟೆ ಬತ್ತಲೆ ತಿರುಗುವಗೆ ಭಯವು ಇನ್ನುಂಟೆ
- ಹೆತ್ತ ತಾಯಿಗಿಂತ ಅತ್ಯಧಿಕ (ಬೆ-೧೨೮-೨)
- ರಿಕ್ತ ಹಸ್ತದಿಂದ ಮನೆಯ ಸೇರುವೆ ಈ ಉದರಕಾಗಿ ಮತ್ತೆ ಕಂಡ ಕಡೆಗೆ ತಿರುಗುವೆ
- ಸಾಕು ಸಾಕು ಮನುಜ ಸೇವೆಯು (ಬೆ-೪೨-೧)
- ಗಾಣದೆತ್ತಿನಂತೆ ಕಣ್ಣ ಮುಚ್ಚಿ ಪ್ರದಕ್ಷಿಣೆಯ ಮಾಡಿ ಕಾಣದೆ ತಿರುಗುವೆನು ಎರಡು ಕಣ್ಣಿದ್ದು ನಾನು
- ಎಳ್ಳು ಕಾಳಷ್ಟು ಭಕ್ತಿ (ಬೆ-೧೨-೨)
- ಹೊಲದೊಳಗೆ ಜೋಡಗಲಿ ತಿರುಗಾಡು ತಿಹುದು
- ಬಲ್ಲವರು ಪೇಳರಿ (ಬೆ-೧೬೪-೨)
- ತಿರುಗಿ ಪೋದನು ತನ್ನ ಅರಮನೆಯ ಬಾಗಿಲಿಗೆ
- ವಾಸುದೇವಾಯ ನಮೋ (ಬೆ-೯೦-೧೩)
- ತೀರ್ಥಯಾತ್ರೆಗೆ ಪೋಗಿ ತಿರುತಿರುಗಿ ಬಳಲಿ ಕೃತಾರ್ಥನಾದೆನು ಎಂಬ ಘನತೆ ಬೇಡ
- ಕೀರ್ತನೆಯ ಮಾಡಿ ಕೈವಲ್ಯ ಪಡೆವರು (ಸ-೮೫-೫)

೧೮೮೧. ತಿರುಪತಿ - ತಿರುಪತಿಯ ವಾಸ ಶ್ರೀವೆಂಕಟೇಶನೆ ನಿನ್ನ
- ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ-೬೩-೫)
- ತಿರುಮಂತ್ರ ತೀರ್ಥಪ್ರಸಾದಕೊಳಗಾದವರ ತಿರುಪತಿಯ ಯಾತ್ರೆಯನು ಮಾಡಿದ ಮಹಾತ್ಮರನು
- ಮುಟ್ಟಬೇಡಿ ಮುಟ್ಟಬೇಡಿ (ಬೆ-೨೬-೧)
- ಗುರುವೆ ಕೇಳಯ್ಯ ಕನಕಪ್ರಿಯ ತಿರುಪತಿಯ ಗಿರಿಯಾದಿಕೇಶವನೆ ಒಲಿದು ನಿಲ್ಲಿಸಿದ
- ಏಕೆ ನಡುಗಿದೆ ತಾಯೆ (ಸ-೫೬-೫)
- ಉಕ್ಕುವಾ ಹೊಳೆಯಲ್ಲಿ ತೆಪ್ಪವೇ ನಾನಾದೆ ಚೊಕ್ಕ ಕನಕಪ್ಪನ ಹಿಂದೆ ನಾ ತಿರುಪತಿಗೆ ಬಂದೆ
- ಕಾಯೊ ಎನ್ನನು ದೇವ (ಸ-೮೨-೩)

೧೮೮೨. ತಿರುಮಂತ್ರ - ತಿರುಮಂತ್ರ ತೀರ್ಥ ಪ್ರಸಾದಕೊಳಗಾದವರ ತಿರುಪತಿಯ ಯಾತ್ರೆಯನು ಮಾಡಿದ ಮಹಾತ್ಮರನು
- ಮುಟ್ಟಬೇಡಿ ಮುಟ್ಟಬೇಡಿ (ಬೆ-೨೬-೧)
- ತಿರುಮಂತ್ರವನು ಭಜಿಸು ತಿರುಲಾಂಛನವ ಧರಿಸು
- ನಾರಾಯಣೆನು ಮನವೆ (ಬೆ-೧೪೧-೧)

೧೮೮೩. ತಿರುಮಣ್ಣು - ತಿರುಮಣ್ಣು ಶ್ರೀಚೂರ್ಣ ಪೂರ್ಣ ದ್ವಾದಶನಾಮ ಸಿರಿತುಳಸಿ ವನಮಾಲೆ ಕೊರಳಿನೊಳಗಿಪ್ಪವರ
- ಮುಟ್ಟಬೇಡಿ ಮುಟ್ಟಬೇಡಿ (ಬೆ-೨೬-೧)

೧೮೮೪. ತಿರುಮಲೆ - ಕಂತುಪಿತ ತಿರುವೆಂಗಳೇಶ ತಿರುಮಲೆಯೊಳಗೆ ಚಿಂತಿಸುವ ಭಕ್ತರನು ಪಾಲಿಸುತಲಿ
- ನೋಡಯ್ಯ ನಿನ್ನ ದಾಸರ (ಬೆ-೮೫-೧೧)

೧೮೮೫. ತಿರುಮಲೇಶ - ಕಳವಿನವರು ಬಂದು ಇಳೆಯ ಮೇಲೆ ನಿಂದು ಬಿಳಿಗಿರಿವಾಸ ತಿರುಮಲೇಶ ಆದಿಕೇಶವ ತಾನೆಯೆಂದು
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೭)
- ತೀಡಯ್ಯ ಭವಭಯದ ಪಾತಕಂಗಳ ದಾನವಾಡ ಗುಡ್ಡದ ತಿರುಮಲೇಶ ಸರ್ವೇಶ
- ನೋಡಯ್ಯ ನಿನ್ನ ದಾಸರ (ಬೆ-೮೫-೮)

೧೮೮೬. ತಿರುವೆಂಗಳೇಶ (ಶ್ರೀವೆಂಕಟೇಶ) - ಕಂತುಪಿತ ತಿರುವೆಂಗಳೇಶ ತಿರುಮಲೆಯೊಳಗೆ ಚಿಂತಿಸುವ ಭಕ್ತರನು ಪಾಲಿಸುತಲಿ
- ನೋಡಯ್ಯ ನಿನ್ನ ದಾಸರ (ಬೆ-೮೫-೧೧)

೧೮೮೭. ತಿರುಹು - ಅರವಿಂದನಯನ

ಆದಿಕೇಶವ ರಾಯ ಕರುಗಳ ಸಹಿತ ಗೋವ್ಗಳ ತಿರುಹುತ
– ಯಾದವರಾಯ ಬೃಂದಾವನದೊಳು (ಸ–೨೨೦–೩)

೧೮೮೮. ತಿಲಕ – ಸಿರಿಗಂಧ ಕುಂಕುಮ ಸಾದು ಜವಾದಿ ಕತ್ತುರಿ ತಿಲಕವ ನೊಸಲಲಿ ಇಡಲೊಲ್ಲೆ
– ದೇಶಾಧಿಪತಿ ನರಹರಿಯೆ (ಬೆ–೨೧–೨)
– ಕತ್ತುರಿ ತಿಲಕವನೊತ್ತಿ ಫಣೆಯೊಳಿಡೆ ಅರ್ಥಿಯ ತೋರದೆ ಇದ್ದೀತೆ
– ಕೇಶವನೊಲುಮೆಯು ಆಗುವ ತನಕ (ಸ–೮೯–೩)

೧೮೮೯. ತಿವಿ – ಕೋರಿಯಲಿ ತಿವಿದು ಹತ ಮಾಡ್ದಾ
– ನಾರಾಯಣನೆ ಈತ (ಸ–೧೩೮–೧)
– ರೂಢಿಯ ಕದ್ದುಕೊಂಡೋಡುವ ದೈತ್ಯ ನೀಡಿ ತಿವಿದು ಕೋರೆದಾಡೆಯಿಂದ
– ತಾಳಲ್ಲಲ್ಲಲ್ಲಯ್ಯೋ ಮಾಸಾಳಲ್ಲಲ್ಲಲ್ಲಯ್ಯೋ (ಸ–೧೧೦–೩)
– ಮುಕುರ ದಂತ್ಯದ ಹರ್ಮ್ಯದೊಳಗಿಂದ ಕಂಸಕನ ಪಕಪುಕನೆ ತಿವಿದವನನಿರಿದೊರಗಿಸಿ
– ನೋಡಯ್ಯ ನಿನ್ನ ದಾಸರ (ಬೆ–೮೫–೮)

೧೮೯೦. ತಿಳಿ – ತಿಳಿದು ನಾಲ್ಕು ದಿಕ್ಕಿನಲ್ಲಿ ಹೊಳೆದು ಎಂಟು ದಿಕ್ಕ ತೋರಿ ಬಳಸಿ ಸುತ್ತ ತಿರುಗುತಿಹುದು ಬಳಲಿ ಬಳಲದೆ
– ಎರಡು ಸಾವಿರದ ಜಿಹ್ವೆಯುರಗ (ಸ–೪೮–೩)
– ತಿಳಿಯುತಿಹುದು ತಿಳಿಯದಿಹುದು ಬೆಳೆಯುತಿಹುದು ಬೆಳೆಯದಿಹುದು
– ಎರಡು ಸಾವಿರದ ಜಿಹ್ವೆಯುರಗ (ಸ–೪೮–೩)
– ರಂಗನಂತರಂಗ ಹಲವಂಗ ತಿಳಿಯದು ಬ್ರಹ್ಮಾದಿಗಳಿಗೆ
– ರಂಗನೆಂಥವನೆಂಥವನೆಲೆ ತಂಗಿ (ಸ–೨೨೨–೭)
– ಸಂಚುಮಾಡಿ ಕಾಲನವರ ವಂಚನೆಗಳ ತಿಳಿಯದ್ಹೋದೆ
– ಅಹಹ ಮೋಸ ಹೋದೆನಯ್ಯ (ಸ–೯–೭೨)
– ಬೆಳ್ಳಿಕಣ್ಣಿನವರು ತಿಳಿಯಲಾರದ ಮಾತು ಬಲ್ಲ ಆದಿಕೇಶವನು
– ಮುತ್ತುಗಳ ಹಣ್ಣು ಕಾಯಾದ ಬಳಿಕ (ಸ–೨೮೯–೫)
– ಬಲ್ಲಿದಳು ಈಕೆ ಎಂದು ಇವಳ ಬಗೆ ತಿಳಿಯಿತೆಂದು
– ಒಡವೆ ಹೋಯಿತು ಮನ ಧೃಡವಾಯಿತು (ಸ–೬೯–೪)
– ವರ ಬಾಡ ಬಂಕಾಪುರದ ಆದಿಕೇಶವನ ಕುರಿತು ತಿಳಿಯೊ ಹಳೆಗನ್ನಡದ ಸೊಬಗ
– ನಿಜವರಿತು ಲಿಂಗವನು ಪೂಜೆ ಮಾಡುವರು (ಸ–೧೪೨–೫)
– ಎಂದಿಗಾದರು ಸ್ಥಿರವಿದಲ್ಲವೆಂದು ತಿಳಿಯಿರೊ
– ನಂಬಬೇಡಿ ಸಿರಿಯು ತನ್ನದೆ (ಬೆ–೧೧೫–)
– ಪರಬ್ರಹ್ಮನ ಬಲು ನಿಜವ ತಿಳಿಯ ಬಲ್ಲ ನಿರ್ವಾಣಗಲ್ಲದೆ
– ಆರಿಗಳವಲ್ಲಾತ್ಮ ಯೋಗ ಸಿದ್ಧಿ (ಬೆ–೧೨೬–೧)
– ಮುಂದೆ ಪರಮಾತ್ಮನ ನೀವು ತಿಳಿಯ ಬೇಕಾದರೆ ಶಿವ ಶಿವ ಎನ್ನಿರೊ
– ಶಿವ ಶಿವ ಶಿವ ಎನ್ನಿರೊ (ಬೆ–೩_೬)
– ಸಿರಿವರದನೆ ಅಂತಃಕರಣಕೊಪ್ಪಿದ ನಿನ್ನ ಇರವನೆ ತಿಳಿಯಲು ನರರ ವಶವೆ ಸ್ವಾಮಿ
– ಕ್ಷಮಿಸುವುದೆನ್ನ ತಪ್ಪುಗಳ (ಬೆ–೬೧–೧)
– ಕಣಿಯ ಹೇಳಬಂದೆ ನಾನು ತಿಳಿಯಲಿಲ್ಲವೆ
– ಕಣಿಯ ಹೇಳಬಂದೆ ನಾನು (ಬೆ–೭೨–೭)
– ಲಿಂಗಾಂಗದೊಳಗಿರುವ ಅನುಭವವ ತಿಳಿಯದೆ ಅಂಗಲಿಂಗದ ನೆಲೆಯ ಗುರುತರಿಯದೆ
– ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ–೧೩೮–೪)
– ತಾನಾರು ದೇಹವಾರು ದಿವ್ಯ ಜ್ಞಾನದಲಿ ತಿಳಿದಾತ ಪರಮ ಯೋಗಿ
– ತಾನಾರು ದೇಹವಾರು (ಬೆ–೧೪–೭)
– ತಳುವದೀ ವಸ್ತ್ರಗಳ ಕಳುಹು ಬೊಕ್ಕಸಕೆನಲು ನಳಿನಾಕ್ಷಿ ತಿಳಿದಳಾಗ
– ವಾಸುದೇವಾಯ ನಮೋ (ಬೆ–೯೦–೧೦)

- ತನುವು ಅಸ್ಥಿರವೆನ್ನುತ ತಿಳಿದು ಶಂಕರನ ಹೃದಯವ ಕಾಣುತ
- ದಾಸನಾಗಬೇಕು ಸದಾಶಿವನ (ಬೆ-೨೪-೨)
- ಹರಿಮಯವೆಲ್ಲವೆನುತ ತಿಳಿದು
- ಕುಲ ಕುಲವೆಂದು ಹೋರಾಡದಿರಿ (ಬೆ-೧೨೧-೩)
- ಜ್ಞಾನದಿಂದ ನಿನ್ನ ನೀನೆ ತಿಳಿದುನೋಡೆಲೊ
- ನಾನು ನೀನು ಎನ್ನದಿರೊ (ಬೆ-೧೪೦-ಪ)
- ಬಳಿಕ ಅಳುವ ನಯನಜಲವು ತಿಳಿದು ನೋಡಿದರೆ ಲವಣಾರ್ಣವಕೆ ಮೂರು ಮಡಿ
- ನೊಂದೆನಾ ಹರಿಯೆನ್ನದೆ (ಬೆ-೧೩-೩)
- ಘೋರ ಸಂಸಾರ ತನುವೆಂದು ತನ್ನಲಿ ತಿಳಿದು ಗೇರು ಹಣ್ಣಿನ ಬೀಜದಂತೆ ಹೊರಟು
- ತಾನಾರು ದೇಹವಾರು (ಬೆ-೧೪-೩)
- ಮನದ ಕಲ್ಮಷ ಕಳೆದು ಶ್ರೀಮಹೇಶನ ಮಹಿಮೆಯ ತಿಳಿದು
- ದಾಸನಾಗಬೇಕು ಸದಾಶಿವನ (ಬೆ-೨೪-೧)
- ಕಣ್ಣಿಂದ ಕೇಳ್ವನ ಹಗೆಯನಾಳುವನ ಕಣ್ಣಿಂದ ತಿಳಿದು ಕಲ್ಪಿಸಿದವನ
- ಕರೆತಾರೆ ಕಾಮಿನಿ ಕಮಲಜಪಿತನ (ಬೆ-೯೩-೪)

೧೮೯೧. **ತಿಳಿವು** - ಕುಳ್ಳಿರ್ದ ಸಭೆಯೊಳಗೆ ತಿಳಿವ ನಡಸಲುಬೇಡ
- ಏನು ಇಲ್ಲದ ಎರಡು ದಿನದ ಸಂಸಾರ (ಬೆ-೧೧೪-೨)

೧೮೯೨. **ತೀಡು** - ತೀಡಯ್ಯ ಭವಭಯದ ಪಾತಕಂಗಳ ದಾನವಾಡ ಗುಡ್ಡದ ತಿರುಮಲೇಶ ಸರ್ವೇಶ
- ನೋಡಯ್ಯ ನಿನ್ನ ದಾಸರ (ಬೆ-೮೫-ಪ)
- ಕುಸುಮಸೌರಭವ ಎಡೆವರಸಿ ಮಾರುತ ತೀಡೆ
- ಸಿಂಗರದ ಸಿರಿಧರನೆ (ಬೆ-೧೬೭-೧)
- ವ್ಯಾಧಿರೂಪಗಳಿಂದ ಪೀಡಿಸುತ ತನುವ ತೊತ್ತುಳಿಗೈದು ನೆಲಕಿಕ್ಕಿ ತೀಡಿ ಬಸವಳಿದ ಬಳಿಕ
- ಅಣುಮಹತ್ತಾದ ದೇವ (ಬೆ-೭೧-೧)

೧೮೯೩. **ತೀರಿಸು** - ಎಲ್ಲವನುಂಡು ತೀರಿಸಬೇಕು ಮನವೆ
- ಒಲ್ಲೆನೆಂದರಾಗುವುದೆ (ಬೆ-೧೧೦-ಪ)
- ಬಂದುದನೆಲ್ಲವನುಂಡು ತೀರಿಸಬೇಕು
- ಒಲ್ಲೆನೆಂದರಾಗುವುದೆ (ಬೆ-೧೧೦-೧)
- ಭೂತಳಕೆ ಬಂದು ಹದನೇನ ತೀರಿಸಿಕೊಂಡೆ
- ಎಲ್ಲಿಂದ ಬಂದೆ ಮುಂದೆತ್ತ ಪಯಣ (ಬೆ-೧೩೫-೧)

೧೮೯೪. **ತೀರು** (ಮುಗಿ) - ಪುಣ್ಯ ತೀರಿದ ಮೇಲೆ ಪರಲೋಕ ಸಾಧನವೆ
- ಬಾಯಿ ನಾರಿದ ಮೇಲೆ (ಬೆ-೧೪೨-೧)

೧೮೯೫. **ತೀರು** (ಸಾಯಿ) - ತಾಯಿ ತೀರಿದ ಮೇಲೆ ತವರಾಸೆಯೆ
- ಬಾಯಿ ನಾರಿದ ಮೇಲೆ (ಬೆ-೧೪೨-ಪ)

೧೮೯೬. **ತೀರ್ಥ** - ಹರಿತೀರ್ಥ ಪ್ರಸಾದ ಎನ್ನ ಜಿಹ್ವೆಗೊದಗಿತು
- ಬದುಕಿದೆನು ಬದುಕಿದೆನು (ಸ-೧೭೧-೧)
- ಚೆಲುವರಾಯನ ರಥೋತ್ಸವದೀ ತೀರ್ಥ ಕೊಲಿದು ಗಂಗಾದೇವಿ ಬರುವ ಸಂಭ್ರಮವ
- ಕೈಯ ತೋರಿದ ಬಗೆಯ (ಸ-೯೧-೪)
- ತೀರ್ಥ ಪಿಡಿದವರು ತಿರುನಾಮಧಾರಿಗಳೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-ಪ)
- ತಿರುಮಂತ್ರ ತೀರ್ಥಪ್ರಸಾದಕೊಳಗಾದವರ ತಿರುಪತಿಯ ಯಾತ್ರೆಯನು ಮಾಡಿದ ಮಹಾತ್ಮರನು
- ಮುಟ್ಟಬೇಡಿ ಮುಟ್ಟಬೇಡಿ (ಬೆ-೨೬-೧)
- ಸುಲಭದಲಿ ಶ್ರೀಪಾದ ತೀರ್ಥ ಪ್ರಸಾದವನು
- ನಾರಾಯಣೆನು ಮನವೆ (ಬೆ-೧೪೧-೨)
- ಬೋಧೆ ಹೇಳುವ ಹರಿದಾಸರ ಪಾದ ತೀರ್ಥ ಪ್ರಸಾದವನುಣಿಸೆನ್ನ
- ದೇಶಾಧಿಪತಿ ನರಹರಿಯೆ (ಬೆ-೨೧-೩)
- ಸತ್ಯವಂತರ ಸಂಗವಿರಲು ತೀರ್ಥವೇತಕೆ
- ಸತ್ಯವಂತರ ಸಂಗವಿರಲು (ಬೆ-೧೨೪-ಪ)

೧೮೯೭. **ತೀರ್ಥಯಾತ್ರೆ** - ಅರ್ಥವಿಷಯಂಗಳ ಫಲವನರಿತು ಪುಣ್ಯತೀರ್ಥಯಾತ್ರೆಗಳ ಮಾಡುವುದ ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೭)
- ತೀರ್ಥಯಾತ್ರೆಗೆ ನೀನು ತಿರುಗಿ ಝೊಂಪಿಸಿ

ಕೃತಾರ್ಥನಾದೆನೆಂಬ ಹೆಮ್ಮೆ ಬೇಡ
- ಸಂಸಾರವೆಂಬ ಸಾಗರವನು (ಬೆ-೧೮-೩)
- ತೀರ್ಥಯಾತ್ರೆಗೆ ಪೋಗಿ ತಿರುತಿರುಗಿ ಬಳಲಿ ಕೃತಾರ್ಥನಾದೆನು ಎಂಬ ಘನತೆ ಬೇಡ
- ಕೀರ್ತನೆಯ ಮಾಡಿ ಕೈವಲ್ಯ ಪಡೆವರು (ಸ-೮೫-೫)

೧೮೯೮. ತೀವು - ತೀವಿರ್ದ ಮಡುವ ಧುಮುಕಲುಬಹುದು ಗರಳವನು ಸೇವಿಸ ಬಹುದು ಜಠರದಿ
- ವಾಸುದೇವಾಯ ನಮೋ (ಬೆ-೯೦-೨)

೧೮೯೯. ತೀವ್ರ - ಸಾಯಕವದು ತೀವ್ರದಿ ಬರುತಿರೆ ಕಂಡು ಮಾಯಾಪತಿಯು ಭೂಮಿ ಯನೊತ್ತಿ
- ರಮಣಿ ಕೇಳೆಲೆ ಮೋಹನ (ಬೆ-೯೬-೧)

೧೯೦೦. ತುಂಗ - ಮುಂಗೈಯ ಶಕ್ತಿ ಸಾವಿರ ತೋಳ ಬಾಣನ ತುಂಗವಿಕ್ರಮ ಕೃಷ್ಣ ತೋಳ ಖಂಡಿಸುವಾಗ
- ಆವ ಬಲವಿದ್ದರೇನು (ಬೆ-೧೩೩-೪)

೧೯೦೧. ತುಂಗಭದ್ರೆ - ತುಂಗಭದ್ರೆ ಇರಲಿಕ್ಕೆ ಭಾವಿ ಕೆರೆಯೇಕೆ
- ಮರೆಯದಿರು ಮರೆಯದಿರು (ಬೆ-೩೬-೧)
- ದೋಷನಾಶೆ ಕೃಷ್ಣವೇಣಿ ಗಂಗೆ ಗೋದಾವರಿ ಭವನಾಶಿ ತುಂಗಭದ್ರೆ ಯಮುನೆ ವಾಸದಲ್ಲಿ ಉಪವಾಸದಲ್ಲಿ
- ದಾಸನಾಗೋ ಭವಪಾಶ ನೀಗೋ (ಬೆ-೨೦-೧)

೧೯೦೨. ತುಂಟ/ತುಂಟಕ - ಪಂಥ ಪಾಡುಗಳನರಿಯದ ಬಂಟನವ ತುಂಟ
- ಎನ್ನ ನುಡಿ ಪುಸಿಯಲ್ಲ (ಸ-೪೭-೨)
- ಉಂಟು ಸೌಭಾಗ್ಯವೆಂಬ ಧೈರ್ಯವ ಬಿಟ್ಟು ವೈಕುಂಠವಾಸಿಯ ಭಜಿಸೊ ತುಂಟ ಜೀವನವೆ
- ಈ ಸಿರಿಯ ನಂಬಿ ಹಿಗ್ಗಲು ಬೇಡ (ಸ-೪೦-೧)
- ತುಂಟಕನೊಬ್ಬನ ತರೆದುದರಿಂದೆ ಬಂಟನಾಗಿ ಬಂದೆನೊ ರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-೧)

೧೯೦೩. ತುಂಡ (?) - ಉದ್ದಂಡಧಾರನು ತನ್ನ ತೆರದೋರಿ ... ತುಂಡವಿಕ್ರಮ ವರುಣನು
- ಸಿಂಗರದ ಸಿರಿಧರನೆ (ಬೆ-೧೬೭-೩)

೧೯೦೪. ತುಂಡ (ಕೊಕ್ಕು) - ತುಂಡದೊಳು ಚಂಡವುಳ್ಳವನ ಬಲವನು ಮುರಿದೆ
- ಸಿಂಗರದ ಸಿರಿಧರನೆ (ಬೆ-೧೬೭-೩)

೧೯೦೫. ತುಂಡ (ಚೂರು) - ಚಂಡಭಟರೆಲ್ಲ ಮುಂದೆ ಕತ್ತಿ ಹರಿಗೆಯ ಪಿಡಿದು ಖಂಡತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
- ಎಲ್ಲರೂ ಮಾಡುವುದು ಹೊಟ್ಟೆಗಾಗಿ (ಬೆ-೧೩೪-೪)

೧೯೦೬. ತುಂಡು - ಶರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು
- ಅಹುದಾದರಹುದೆನ್ನಿ (ಬೆ-೧೩೧-೨)
- ರಣದೊಳಗೆ ದೇಹವ ಖಂಡತುಂಡವ ಮಾಡಿ ರಣವನುತ್ತರಿಸಿ ಮರಣವ ತೋರಿದೆ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೧)

೧೯೦೭. ತುಂಬ - ಹೆಡಿಗೆ ತುಂಬ ಹೋಳಿಗೆ ಸುಟ್ಟು ಕುಡಿನೀರಿಗೆ ಹೋದೆ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೩)
- ಮಂಡೆತುಂಬ ಬಂಧು ಬಳಗ ಇಲ್ಲಿ ಇರುವರೊ
- ಏನು ಬರುವುದೋ ಸಂಗಡ (ಬೆ-೧೩೭-೧)
- ಡಂಭವ ಮಾಡಿಕೊಂಡು ತುಂಬ ಪಾಪ ವೊಳಗೆ ಹಂಬಲಿಸಿದರಿನ್ನು ಬೆಂಬಲಕಾರುಂಟು
- ಹೇಗೆ ನೀ ದಾಸನಾದೆ (ಬೆ-೨೨-೧೮)
- ಹೆಣ್ಣೇಕೆ ಪಾತಕಿಯು ಹೊಟ್ಟೆಯ ತುಂಬ ಉಣ್ಣರೀಕೆಯ ಮಕ್ಕಳು
- ನೆರೆದು ಗೋಪಿಯರೆಲ್ಲರು (ಬೆ-೧೦೩-೬)
- ಹೆಂಡಿರಿಲ್ಲಿ ಮಕ್ಕಳಿಲ್ಲಿ ಬಂಡಿತುಂಬ ಭಾಗ್ಯವಿಲ್ಲಿ
- ಏನು ಬರುವುದೋ ಸಂಗಡ (ಬೆ-೧೩೭-೧)

೧೯೦೮. ತುಂಬರು/ತುಂಬುರ - ರಂಭೆ ಊರ್ವಶಿಯರ ಮೇಳವ ಕಂಡೆ ತುಂಬರು

ಮುನಿ ನಾರದರನು ಕಂಡೆ
- ಇಷ್ಟು ದಿನ ಈ ವೈಕುಂಠ (ಬೆ-೨೮-೪)
- ಇಷ್ಟ ಓಲೈಸುವ ಗಾಯನದಲಿ ನಿಂತು ಗಟ್ಟಿ ಪಾಡುವ ತುಂಬುರ ನಾರದರ ಸಂಭ್ರಮದಿ
- ಸಿರಿಯ ಮದವೆ ಮುಕುಂದ (ಬೆ-೬೯-೩)
- ರಾಗದಲಿ ತುಂಬುರನೊ ಯೋಗದಲಿ ಸನಕನೋ
- ಮೆರೆಯದಿರು ಮೆರೆಯದಿರು (ಬೆ-೧೪೮-೩)
- ಹರ ಬ್ರಹ್ಮರು ನಲಿದಾಡುತಿರೆ ತುಂಬುರು ನಾರದರು ಪಾಡುತಿರೆ
- ಯಾದವರಾಯ ಬೃಂದಾವನದೊಳು (ಸ-೨೨೦-೨)
- ತಾಲ ದಂಡಿಗೆ ಪಿಡಿದು ತುಂಬುರು ನಾರದರು ಭೂಪಾಳಿ ದೇಶಾಕ್ಷಿ ನಾರಾಯಣಿ ಗುಜ್ಜರಿ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೫)

೧೯೦೯. ತುಂಬಿ (ದುಂಬಿ) - ತುಂಬಿವರ್ಣನ ತೆತ್ತವೆ ನಾಲ್ಕು ರವೆ ಎಂಟು ಜಾಂಬವರು ಮೆಚ್ಚುವರು ಜಾಣರಿಗಳವಲ್ಲ
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೨)

೧೯೧೦. ತುಂಬು - ಒಂಬತ್ತು ಎಜ್ಜದೊಳೊಸರುವ ಹೊಲಸದು ತುಂಬಿ ತುಳುಕುವ ಕೊಡವಾಗಿರಲು
- ಯಾತರವನೆಂದುಸುರಲಿ (ಸ-೨೧೮-೩)
- ಅಷ್ಟು ಇಷ್ಟು ಚಿಲ್ಲರೆ ಒಡವೆ ಪೆಟ್ಟಿಗೆಯಲಿ ತುಂಬಿತ್ತು
- ಒಡವೆ ಹೋಯಿತು ಮನ ಧೃಡವಾಯಿತು (ಸ-೬೯-೩)
- ಹೊಳಲು ತುಂಬುವ ತೆರದಿ ಎಳೆದೆಳೆದು ಪಾಪಾತ್ಮ ಬಳಲಿ ಇಳೆಯೊಳು ಬಿದ್ದನು
- ವಾಸುದೇವಾಯ ನಮೋ (ಬೆ-೯೦-೧೦)
- ತುಂಬಿ ಕಲೆಗಳನೊತ್ತಿ ನೊಸಲ ಬರೆಹವ ಬರೆವ ಅಂಬುಜೋದ್ಭವ ನಿನ್ನ ಹೆಮ್ಮಗನ್ನೆ ದೇವ
- ಜಗದಂತರ್ಯಾಮಿ ಎಂತೆಂದು (ಬೆ-೫೮-೨)
- ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ
- ಬಂದೆವಯ್ಯ ಗೋವಿಂದಶೆಟ್ಟಿ (ಬೆ-೧೫೧-೨)
- ನುಡಿ ನಡೆವ ಕಾಲದಲಿ ದಾನಮಾಡದೆ ಇರಲು ಅಡವಿಯೊಳು ಕೆರೆತುಂಬಿ ಬತ್ತಿದಂತೆ
- ಜಪವ ಮಾಡಿದರೇನು (ಬೆ-೧೨೩-೨)
- ಸದ್ಗುಣವೆಂಬ ಧನವ ತುಂಬಿಸೊ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೨)
- ಎಲುವ ಗಳುವಂ ಮಾಡಿ ಬಲುನರಗಳಂ ಬಿಗಿದು ಚೆಲುವ ತೊಗಲಂ ಪೊದಿಸಿ ಮಲ ಮಾಂಸವಂ ತುಂಬಿ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೨)
- ಒಂಬತ್ತು ಹೆಜ್ಜದ ತನುವಿನ ಹೊಲಸಿನೊಳ್ ತುಂಬು ತುಂಬಿ ದೇಹ ತುಳುಕುತಿದೆ
- ಏತರವನೆಂದು ಪೇಳಲಿ (ಬೆ-೧೨೨-೩)
- ತುಂಬಿ ಕಲೆಗಳನೊತ್ತಿ ನೊಸಲ ಬರೆಹವ ಬರೆವ ಅಂಬುಜೋದ್ಭವ ನಿನ್ನ ಹೆಮ್ಮಗನ್ನೆ ದೇವ
- ಜಗದಂತರ್ಯಾಮಿ ಎಂತೆಂದು (ಬೆ-೫೮-೨)
- ಸೋರೆಯೊಳು ಸುರೆ ತುಂಬಿ ಮೇಲೆ ಹೂವಿನ ಹಾರಹಾಕಿ ಗೀರು ಗಂಧ ಅಕ್ಷತೆಯ ಧರಿಸಿದಂತೆ ನೀ ಮೆರಸಿದಂತೆ
- ದಾಸನಾಗೋ ಭವಪಾಶ ನೀಗೋ (ಬೆ-೨೦-೫)
- ಚೆಲುವ ತೊಗಲನೆ ಪೊದಿಸಿ ಮಾಂಸ ಮಜ್ಜವ ತುಂಬಿ
- ನೊಂದೆನಾ ಹರಿಯೆನ್ನದೆ (ಬೆ-೧೩-೨)
- ಒಂಬತ್ತು ಹೆಜ್ಜದ ತನುವಿನ ಹೊಲಸಿನೊಳ್ ತುಂಬು ತುಂಬಿ ದೇಹ ತುಳುಕುತಿದೆ
- ಏತರವನೆಂದು ಪೇಳಲಿ (ಬೆ-೧೨೨-೩)
- ಸೂತಕಾಬ್ಧಿಯಲಿ ನವಮಾಸ ತುಂಬಿರೆ ತನ್ನ ಮಾತೆಯುದರದಿ ಬಂದು ಬೆರಸಿ ಬೆಳೆದು
- ತಾನಾರು ದೇಹವಾರು (ಬೆ-೧೪-೨)

೧೯೧೧. ತುಟಿ - ಇಂಪು ಸೊಂಪಿನ ಚಂದ್ರ

ಬಿಂಬೆ ಕೆಂಪು ತುಟಿ ನಾಸಿಕದ ರಂಭೆ
– ವರವ ಕೊಡು ಎನಗೆ ವಾಗ್ದೇವಿ (ಬೆ–೨_೨)
೧೯೧೨. **ತುಟಿಮೀರು** – ತುಟಿಮೀರ್ದ ಹಲ್ಲಂತೆ ದೂತ ಎಂದಿಗು ಬೇಡ ನಿಟಿಲನೇತ್ರನು ನಾನೆನುವ ಜಂಭ ಬೇಡ
– ಕೀರ್ತನೆಯ ಮಾಡಿ ಕೈವಲ್ಯ ಪಡೆವರು (ಸ–೮೫–೪)
೧೯೧೩. **ತುಟ್ಟತುದಿ** – ತುಟ್ಟತುದಿಯ ವೃಕ್ಷದಿ ನಿನ್ನ ಪುಟ್ಟನ ಕಂಡೆವೆ ನೋಡು
– ಸೈಯೇ ಇದು ಸೈಯೇ ಗೋಪಿ (ಬೆ–೧೦೪–೬)
೧೯೧೪. **ತುಡುಕು** – ಸ್ಮರನ ಶರತಾಪವನು ಪರಿಹರಿಸಲರಿಯದೆ ದುರುಳ ಕೀಚಕನು ದ್ರೌಪದಿಯ ತುಡುಕಿ
– ನೋಡಿ ಮರುಳಾಗದಿರು (ಬೆ–೧೨೭–೩)
– ಮರವೆಯಲಿ ಯಮನೆಂಬ ತೋಳ ತುಡುಕಿ
– ನಾವು ಕುರುಬರು (ಬೆ–೧೫೨–೧)
೧೯೧೫. **ತುಡುಕುತನ** (ಕಳ್ಳತನ) – ತೊಡೆದ ನವರ ಬಾಯನು ಬೆಣ್ಣೆಗಳಿಂದ ತುಡುಕುತನ ಗಳೊಳಿತೆ
– ನೆರೆದು ಗೋಪಿಯರೆಲ್ಲರು (ಬೆ–೧೦೩–೫)
೧೯೧೬. **ತುಡುಗು** (ಕಳ್ಳತನ) – ಬಲು ತುಡುಗ ಬಲು ತುಡುಗ ಬಿಡು ಎನ್ನ ಸೆರಗ
– ಮುಟ್ಟದಿರೊ ಎನ್ನನು (ಬೆ–೧೦೨–೧)
– ತುಡುಗುತಿಂದು ಮೀಸಲಳಿದು ಎಡೆಗೆಡಿಸಿ ಓಡಿಹೋದ ನೋಡು
– ಸೈಯೇ ಇದು ಸೈಯೇ ಗೋಪಿ (ಬೆ–೧೦೪–೩)
೧೯೧೭. **ತುತಿಸು** (ಸ್ತುತಿಸು) – ಒಲಿಸಿ ನಿನ್ನನು ತುತಿಸಿ ಮುಕುತಿಯನು ಪಡೆದುದಕೆ ಸಲೆ ಶ್ರುತಿಯು ಗಿರಿಜೆ ಅಜಮಿಳನು ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ–೫೦–೨)
೧೯೧೮. **ತುತ್ತುಮಾಡು** (ಕಬಳಿಸು) – ತುತ್ತು ಮಾಡುವನ ವೈರಿಯನೇರಿ ಜಗವನು ಸುತ್ತಿ ಬರುತಲಿಪ್ಪನ
– ರಾಜವದನೆ ಸುರರಾಜನ (ಬೆ–೯೭–೧)
೧೯೧೯. **ತುಪ್ಪ** – ಜೊನ್ನೆಯ ತುಪ್ಪ ಅನ್ನ ಒಲ್ಲದೆ ಎಲುವು ಮಾಂಸವನ್ನು ತಿಂಬ ಕುನ್ನಿಯಾದೆನಯ್ಯ ಕೃಷ್ಣ
– ಎಷ್ಟು ಪ್ರೀತಿಯೊ ಮನಕೆ (ಸ–೫೨–೫)
– ಅಪ್ಪಾಲು ಅತಿರಸ ತುಪ್ಪ ಕಜ್ಜಾಯವು ಒಪ್ಪುವ ಯಾಲಕ್ಕಿ ಶುಂಠಿ ಮೆಣಸು
– ಬಂದೆವಯ್ಯ ಗೋವಿಂದಶೆಟ್ಟಿ (ಬೆ–೧೫೧–೧)
– ಕಡೆಗೊಂದನ್ನ ಹೋಳಿಗೆಯಿಲ್ಲ ಕೊಡ ತುಪ್ಪ ಪಾಲ್ಮೊಸರು ಪಾಯಸ
– ಸೈಯೇ ಇದು ಸೈಯೇ ಗೋಪಿ (ಬೆ–೧೦೪–೩)
– ತುಪ್ಪ ಪಂಚಾಮೃತವಂದು ಅಡವಿ ಗಡ್ಡೆ ಗಳಿಂದು
– ಎನ್ನ ಕಂದ ಹಳ್ಳಿಯ ಹನುಮಾ (ಬೆ–೬_೧)
– ಹೆತ್ತ ತುಪ್ಪವನಿಕ್ಕಿ ಸಲಹಿದ ತಾಯ್ತಂದೆ ಅತ್ತು ಕರೆದುಳಿವರು ಮತ್ತೆ ಬೆನ್ನಲೆ ಬಾಹರೆ
– ಆರು ಸಂಗಡ ಬಾಹೋರಿಲ್ಲ (ಬೆ–೧೫–೧)
– ಅನ್ನ ತುಪ್ಪವಿರಲಿಕ್ಕೆ ಮದ್ಯಪಾನಗಳೇಕೆ
– ಮರೆಯದಿರು ಮರೆಯದಿರು (ಬೆ–೩೬–೩)
೧೯೨೦. **ತುಪ್ಪು** – ಕೊಟ್ಟು ತುಪ್ಪಿದವಗೆ ಕರಕಂಪನ
– ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ–೧೨೪–೪)
೧೯೨೧. **ತುಬಾಕಿ** – ಬಡಿದು ಬಡಿದು ಕಬ್ಬಿಣವ ಕಾಸಿ ತುಬಾಕಿ ಮಾಡಿ ಹೊಡೆವ ಗುಂಡು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
– ಎಲ್ಲರೂ ಮಾಡುವುದು ಹೊಟ್ಟೆಗಾಗಿ (ಬೆ–೧೩೪–೩)
೧೯೨೨. **ತುರಗ** – ಖುಲ್ಲ ಮನುಜರನು ಕೊಲ್ಲಬೇಕೆನುತಲಿ ಭಲ್ಲೆ ಹಿಡಿದು ತುರಗವನೇರಿ
– ತಾಳಲ್ಲಲ್ಲಲ್ಲೋ ಮಾಸಾಳಲ್ಲಲ್ಲಲ್ಲೋ (ಸ–೧೧೦–೧೦)
– ನರಪತಿಯ ಯದುವೀರ ಬೌದ್ಧನ ತುರಗ ವೇರಿದ ಆದಿಕೇಶವನ
– ಇಂದು ನೀ ಕರೆದುತಾರೆ (ಬೆ–೯೨–೩)
– ಕುಣಿದಾಡುತಿದೆ ಹರಿಯ ತಲೆ ತುರಗವೇರಿ

- ಬಲ್ಲವರು ಪೇಳಿರಿ (ಬೆ-೧೬೪-೩)
- ನಾಲ್ಕು ಯುಗವಾದಲ್ಲಿ ಕಡೆಯ ತುರಗವನೇರಿ ಸಾಕಾರವಾಗಿ ಮಲಗಿದ ಭಾವವೊ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೪)
- ಶೇಷನ ಹಾಸಿಗೆ ಗರುಡ ತುರಗವು ಪೀತ ವಾಸದುಡುಗೆಯು ಕೊರಳಲಿ ವೈಜಯಂತಿ
- ಸಿರಿಯ ಮದವೆ ಮುಕುಂದ (ಬೆ-೬೯-೨)
- ಆರುಮೂರು ತುರಗಗಳು ದಾರಿಯನು ಕೊಡವು
- ಏನಿದೆತ್ತಣ ಬಯಕೆ (ಬೆ-೧೩೬-೨)

೧೯೨೩. ತುರಗವಾಹನ (ಕಲ್ಕಿ) - ಪುರತ್ರಯ ವಧುಗಳ ಗೆಲಿದಗೆ ಮಂಗಳ ತುರಗವಾಹನನಿಗೆ ಜಯ ಮಂಗಳ
- ಅಂಬುಜದಳಾಕ್ಷಗೆ ಮಂಗಳ (ಬೆ-೧೭೦-೩)

೧೯೨೪. ತುರೀಯ (ಕೊನೆಯ) - ಕಲಿಯುಗ ದಲಿ ತುರೀಯಾಶ್ರಮವನೆ ಧರಿಸಿ ಕಲುಷದ ಮಾಯಿಗಳನು ಸೋಲಿಸಿ
- ಪರಮ ಪದವಿಯನೀವ ಗುರು ಮುಖ್ಯ ಪ್ರಾಣನ (ಬೆ-೭_೩)

೧೯೨೫. ತುರು - ತುರು ಹಿಂಡುಗಳ ತರತರ ದಲಿ ತನ್ನ ಕರದಿಂ ಬೋಳೈಸಿ ಸಂತೈಸುತ
- ಯಾದವರಾಯ ಬೃಂದಾವನದೊಳು (ಸ-೨೨೦-೩)
- ತುರುಗಾಯ್ದ ನಿರ್ವಾಣನ ಅಶ್ವಾರೂಢನ ಧರೆಯ ಕಾಯ್ದನ
- ಇಂದು ನೀ ಕರೆದುತಾರೆ (ಬೆ-೯೨-೩)
- ಕಿರು ನಕುಲ ಸಹದೇವ ತುರುಗಾಯ್ದರಂತೆ
- ಆರಿಗಾದರು ಪೂರ್ವಕರ್ಮಬಿಡದು (ಬೆ-೧೦೮-೪)
- ಆಳಿದೊಡೆಯನಿಗೆರಡನೆಣಿಸುವಾತಗೆ ಒಳ್ಳೆಮಾಳಿಗೆಯ ಮನೆಯು ತುರು ಧನ ಧಾನ್ಯವು
- ಕಲಿಯೇರಿ ಬಂತು (ಬೆ-೧೩೦-೩)
- ತುರುವ ಕಾಯ್ದ ಹಣ್ಣು ಉರಗನ ತುಳಿದಾ ಹಣ್ಣು
- ಹಣ್ಣು ಕೊಂಬುವ ಬನ್ನಿರಿ (ಬೆ-೧೫೭-೩)
- ಕರಿಯ ಹೊಳೆಯಲಿ ತುರುಗಳ ಕಾಯುತ ಉರಗನ ಮಡುವ ಧುಮುಕ್ಯಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೮)
- ಪರಿಪರಿ ವಿಧದಲಿ ರಾಗವ ನುಡಿಸುತ ತುರುಹಿಂಡುಗಳ ಕೂಡುತ ಪಾಡುತ
- ಯಾದವರಾಯ ಬೃಂದಾವನದೊಳು (ಸ-೨೨೦-೨)

೧೯೨೬. ತುರುಬು - ಮಂಡೆ ಬಾಚಿ ತುರುಬಿಟ್ಟಿವೆ ಮಸ್ತಕದಲ್ಲಿ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೧೧)

೧೯೨೭. ತುಳಸಿ - ಒಳ್ಳೆ ತುಳಸಿಯಿರೆ ಕಗ್ಗೊರಲೆಯೇಕೆ
- ಮರೆಯದಿರು ಮರೆಯದಿರು (ಬೆ-೩೬-೨)

೧೯೨೮. ತುಳಿ - ಕ್ಷತ್ರಿಯರ ಚಟುಲ ಛಲದಿ ಒಗೆದು ಕರುಳ ಬಗೆದು ತುಳಿದದಟರನು ಸಂಹರಿಸಿದ ಚೆಲವರಾಯ
- ಯಾದವಗಿರಿವಾಸನಹುದೋ (ಸ-೨೧೯-೨)
- ತುರುವ ಕಾಯ್ದ ಹಣ್ಣು ಉರಗನ ತುಳಿದಾ ಹಣ್ಣು
- ಹಣ್ಣು ಕೊಂಬುವ ಬನ್ನಿರಿ (ಬೆ-೧೫೭-೩)
- ಬಲಿದ ಕಾಳಿಂಗನನು ತುಳಿದ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-೨)
- ಕಾಕು ಶಕಟನ ತುಳಿದು ಕೊಂದ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-೧)
- ಎಂಟು ಏಳನು ಕಳಿದುದರಿಂದೆ ಬಂಟರೈವರ ತುಳಿದುದರಿಂದೆ
- ಇಷ್ಟು ದಿನ ಈ ವೈಕುಂಠ (ಬೆ-೨೮-೧)
- ದಿಟ್ಟ ಶೇಷನ ನೀ ತುಳಿದರೆ ಆಕೆ ಕಟ್ಟಿ ಬಾಸಿಗೆ ಶೇಷನ ನಿಲಿಸಿಹಳಯ್ಯ
- ನಿನಗಿಂತ ಕುಂದೇನೊ (ಬೆ-೮೭-೩)

೧೯೨೯. ತುಳುಕು - ಒಂಬತ್ತು ಎಜ್ಜದೊ ಳೊಸರುವ ಹೊಲಸದು ತುಂಬಿ ತುಳುಕುವ ಕೊಡವಾಗಿರಲು
- ಯಾತರವನೆಂದುಸುರಲಿ (ಸ-೨೧೮-೩)
- ಒಂಬತ್ತು ಹೆಜ್ಜದ ತನುವಿನ ಹೊಲಸಿನೊಳ್

ತುಂಬು ತುಂಬಿ ದೇಹ ತುಳುಕುತಿದೆ
– ಏತರವನೆಂದು ಪೇಳಲಿ (ಬೆ–೧೨೨–೩)
೧೯೩೦. **ತೂಂತಿಕೊಳ್ಳು** (ಚುಚ್ಚಿಕೊ) – ತೂಂತಿಕೊಂಡೆನ್ನ ಬೆನ್ನಲೊಸರುವ ರೋಹಿತಕೆ ಅಂತ್ಯಮುಖ ಗ್ರಹಗಳನು ಕಳಚಿ ಬಿಸುಟೆ
– ಸಾಲದೆ ನಿನದೊಂದು ದಿವ್ಯನಾಮ (ಬೆ–೧೭೪–೨)
೧೯೩೧. **ತೂಕ** – ಹುಟ್ಟು ಸಾವು ಎರಡು ಎಂಬ ಘಟ್ಟಿ ತೂಕದ ನಗವಿತ್ತು
– ಒಡವೆ ಹೋಯಿತು ಮನ ಧೃಡವಾಯಿತು (ಸ–೬೯–೩)
೧೯೩೨. **ತೂಗಿಸು** – ಕಟ್ಟಿ ತೂಗಿಸಿಕೊಳ್ಳದಿರಿ ಕರಟಕದಂತೆ ಗುಟ್ಟಿನಲ್ಲಿ ಗೋಪಾಲನ ಸ್ಮರಿಸೊ
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೩)
೧೯೩೩. **ತೂಗು** – ಆಗಮ ನಿಗಮಗಳರಸಿ ಕಾಣದ ವಸ್ತುವನು ತೂಗಿ ಪಡುವ ಪುಣ್ಯವೆಂತು ಪಡೆದಳಯ್ಯ
– ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ–೧೯೫–೬)
– ಧಾರಿಣಿಯ ಭಾರವನು ತಾಳಲಾರದೆ ದೇವಿ ಶ್ರೀರಾಮ ರಾಮೆಂದು ಶಿರವ ತೂಗುವಳಯ್ಯ
– ಕಲಿಯೇರಿ ಬಂತು (ಬೆ–೧೩೦–೪)
– ಕಾಲ ತೂಗಿ ನೋಡುತ್ತ ಗಜ ಉನ್ಮತ್ತ ಕಾಲಿನಿಂದಲಿ ಕೊಲುವ ರೂಪದಿ
– ಇಂದು ನೀ ಕರೆದುತಾರೆ (ಬೆ–೯೨–೧)
೧೯೩೪. **ತೂತು** – ಮರ್ಮವಿಲ್ಲದ ಮಾತು ಒಡಮೊಗೆಯ ತೂತು
– ಅಹುದಾದರಹುದೆನ್ನಿ (ಬೆ–೧೩೧–೨)
೧೯೩೫. **ತೂಳ** (ದೇವರ ಆವೇಶ) – ಗಾಳ ಗೂಳರೆಲ್ಲ ಕೂಡಿ ತೂಳದೇವರ ಮಾತ ಕೇಳಿ
– ಕಣಿಯ ಹೇಳಬಂದೆ ನಾನು (ಬೆ–೭೨–೩)
೧೯೩೬. **ತೃಣ** – ತೃಣವ ಹಿಡಿದು ಬರೆಯುತಿಪ್ಪ ಒಂದು ರೋಮ ಕೂಪದಲ್ಲಿ ಕುಣಿಕೆಯೊಳಗೆ ಜಗದ ಜೀವರಾಶಿ ಎಲ್ಲವ
– ಎರಡು ಸಾವಿರದ ಜಿಹ್ವೆಯುರಗ (ಸ–೪೮–೬)
– ಇಂತು ಅಣುರೇಣುತೃಣಕಾಷ್ಠದೊಳಗೆಲ್ಲ ಸಂತೋಷವಾಗಿಹುದು ನಿನ್ನ ಸ್ಮರಣೆ
– ಜಗದಂತರ್ಯಾಮಿ ಎಂತೆಂದು (ಬೆ–೫೮–೫)
– ತೃಣಕೆ ಬಾಯಿತ್ತನ ಮೇಲೇರಿ ಬಪ್ಪನ ಶ್ರೀರಾಮನೆನ್ನಿರಿ
– ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ–೮೧–೩)
– ಅಣುರೇಣುತೃಣಗಳಲಿ ಪರಿಪೂರ್ಣನೈ ನೀನು
– ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ–೬೩–೨)
– ಅಣುರೇಣುತೃಣದೊಳು ಪರಿಪೂರ್ಣ ನಾದನ ಶ್ರೀರಾಮನೆನ್ನಿರಿ
– ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ–೮೧–೩)
೧೯೩೭. **ತೃಪ್ತಿ** – ಇಷ್ಟಲ್ಲದಿನ್ನೆನಗೆ ತೃಪ್ತಿ ಇನ್ನೆಂತಹುದೀ ಕಷ್ಟ ಶರೀರದೊಳು ತೊಳಲ ಲಾರೆನು ಹರಿಯೆ
– ಎಂತಹುದೊ ನಿನ್ನಯ ಭಕುತಿ (ಸ–೪೧–೩)
– ವನಜಜಾಂಡದ ಕೋಟಿಯುದರಂಗೆ ಆವುದನು ಉಣಿಸಿ ತೃಪ್ತಿಯ ಮಾಡಲಿ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೩)
೧೯೩೮. **ತೃಪ್ತಿಪಡಿಸು** – ವೇದೋಕ್ತ ಪೂಜೆ ಯಲಿ ತೃಪ್ತಿಪಡಿಸದಿರೆ ಆದುದೇನು ಅದರಿಂದ ಫಲವಾವುದು
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೬)
೧೯೩೯. **ತೃಷೆ** – ಹಸಿವು ತೃಷೆಯು ಶೋಕ ಮೋಹ ಅಸುವಗೊಂಬ ಜನನ ಮರಣ
– ಎಷ್ಟು ಪ್ರೀತಿಯೊ ಮನಕೆ (ಸ–೫೨–೧)
– ಅನಿಮಿಷರಿಗಮೃತವನ್ನೆರೆದವನ ತೃಷೆಯ ನೀರಿನ್ನೊಳೆಂತು ಸಂತವಿಡಲಿ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೩)
೧೯೪೦. **ತೆಂಕಲು** – ಬೇರೆ ಹನ್ನೆರಡು ಕಣ್ಣು ಕಿವಿಗಳುಂಟು ಸೇರಿ ತೆಂಕಲಾಗೆ

– ಮುಂದೆ ದಯವಿರಲಿ ಶ್ರೀಹರಿಯೆ (ಸ–೨೧೪–೧)
– ಮಿಳಿತ ಮಾನಿಸ ಪಿಂಡ ಪೂರ್ವಕರ್ಮ ದಿಂದ ನೆಲಕೆ ಬೀಳಲು ಅದು ಸಲಹಿ ರಕ್ಷಿಪುದೆ
– ಮಗನಿಂದೆ ಗತಿಯುಂಟೆ (ಬೆ–೧೪೫–೨)
– ಆ ಸುಟ್ಟು ಸುಡುಗಾಡಿನಲಿ ಪಿಂಡಗಳನಿಟ್ಟು ಬಹು ಕಟ್ಟಲೆಯ ಮಾಡಿಸಿದರೈ
– ನೊಂದೆನಾ ಹರಿಯೆನ್ನದೆ (ಬೆ–೧೩–೪)

**೨೭೪೮. ಪಿಂಡಾಂಡ** (ಮಾನವ ದೇಹ) – ಸಂದೇಹವ ಮಾಡದಿರು ಅರಿವು ಎಂಬ ದೀಪ ಹಿಡಿದು ಇಂದು ಕಾಣೊ ದೇಹದಲಿ ಪಿಂಡಾಂಡ ಹಾಗೆ ಬ್ರಹ್ಮಾಂಡ
– ದಾಸನಾಗೋ ಭವಪಾಶ ನೀಗೋ (ಬೆ–೨೦–೪)
– ಅಕ್ಕರದಿ ಪಿಂಡಾಂಡಗಳ ಕಟ್ಟಿ ಬಲಿಸುವ ಮಕರಾಂಕನೆಂಬವನು ನಿನ್ನ ಕಿರುಮಗ ದೇವ
– ಜಗದಂತರ್ಯಾಮಿ ಎಂತೆಂದು (ಬೆ–೫೮–೩)

**೨೭೪೯. ಪಿಡಿ** (ಹಿಡಿ) – ಕಣ್ಣಿಲ್ಲದಾತನು ಕಂಡು ಪಿಡಿದ ಮೃಗ ಕೈಯಿಲ್ಲದಾತನೆಚ್ಚ
– ಮುತ್ತುಗಳ ಹಣ್ಣು ಕಾಯಾದ ಬಳಿಕ (ಸ–೨೯–೪)
– ಮಣ್ಣಲಿ ಹೊರಳುವ ಕಾಲಿಲ್ಲದಾತನು ಗಣ್ಯವಿಲ್ಲದೆ ಪಿಡಿದ
– ಮುತ್ತುಗಳ ಹಣ್ಣು ಕಾಯಾದ ಬಳಿಕ (ಸ–೨೯–೪)
– ಸುರಮುನಿಯನುಜನ ಪಾದವ ಪಿಡಿದನ ಗೋವಿಂದ ಎನ್ನಿರೋ
– ಮಂದರಧರ ಪಾವನ ಇಂದಿರಾರಮಣ (ಸ–೨೦೦–೧)
– ತಂದೆಯ ಮುಂದೆ ಪತ್ನಿಯ ಪಿಡಿದೆಳೆದು ಅಂಜಿಸಲು
– ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ–೧೪೫–೧)
– ನಾಸದೊಳೊರ್ವನ ಪೊತ್ತು ಮುರಿದು ಮುನೀಶರ ಶಾಪವ ಪಿಡಿದು ಕೊಂದಾತನು
– ಈತನೇನೆ ನಿನ್ನ ಮಗನು (ಸ–೩೮–೧)
– ಪುಂಡಪೋಕರನ್ನು ಮೀರಿ ದುಂಡು ಕುಚಗಳನ್ನು ಪಿಡಿದು
– ಬಾಲಕನೆಂದೆತ್ತಿಕೊಂಡೆನೆ (ಸ–೧೮೩–೨)
– ಅಂತರಂಗದೊಳಗೆ ಅಷ್ಟ ಜ್ಯೋತಿಯನಿಟ್ಟು ದಂತಿ ಎಂಟನು ಪಿಡಿದು ತರಿದು ಬಿಸುಟು
– ನಿಜವರಿತು ಲಿಂಗವನು ಪೂಜೆ ಮಾಡುವರು (ಸ–೧೪೨–೪)
– ಪೊಡವಿಯ ಈರಡಿ ಮಾಡಿದ ದೇವನ ಕುಡಿಬೆರಳನೆ ಕರದಲಿ ಪಿಡಿದು
– ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ–೧೯೫–೩)
– ಆತ್ಮವೆಂಬುದರೊಳಗೆ ಅಮೃತ ಚಿಲುಮೆಯ ತೆಗೆದು ನೀತಿ ಮಾರ್ಗವೆನ್ನುವ ಕೊಡನ ಪಿಡಿದು
– ನಿಜವರಿತು ಲಿಂಗವನು ಪೂಜೆ ಮಾಡುವರು (ಸ–೧೪೨–೧)
– ಪಿಡಿದಿರೆ ದಂಡಿಕಾ ವೇಷ್ಟಿ ಮೃದಿಕಾ ನಿಡುಶಿಖಿ ಯಜ್ಞೋಪವೀತದಿಂದ
– ರಾಮಾನುಜರೇ ನಮೋ ನಮೋ (ಬೆ–೪–೧)
– ದುಂಡುನಾಮವ ಬರೆದು ಭಂಡತನದಿ ಜಗದಿ ದಂಡಿಗೆ ಬೆತ್ತ ಪಿಡಿವನು ಹೆಂಡಿರ ಕಾಯ್ವನು
– ಹೇಗೆ ನೀ ದಾಸನಾದೆ (ಬೆ–೨೨–೧೯)
– ಧರೆ ನಡುಗುವ ಹಾವನು ನಾ ಪಿಡಿವೆನೆ ತರಳನು ತಡೆಗಾರನೆ
– ನೆರೆದು ಗೋಪಿಯರೆಲ್ಲರು (ಬೆ–೧೦೩–೮)
– ಮಿಗೆ ಫಣಿಯ ಫಣದಾತಪತ್ರವಿರುವವಗೆ ನೆರಳಿಗೆ ಕೊಡೆಯನೇಂ ಪಿಡಿಯಲಿ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೪)
– ಕೈಪಿಡಿಯೆ ಸಲ್ಲೆನೆ ಸಲ್ಲೆನೆ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೨)
– ಕಂಠ ಪಿಡಿದ ಬ್ರಹ್ಮನ ನುಂಗಿತೆಲೊ ದೇವ
– ಹಲವು ಜೀವನವ ಒಂದೆಲೆ ನುಂಗಿತು (ಬೆ–೧೫೮–೨)
– ಉರಿಯೊಳು ಜನಿಸಿದವನ ನಿಜ ತಂಗೆಯ ಸೆರಗ ಪಿಡಿದ ಖಳನಣ್ಣನ ತಂಗೆಯ
– ರಮಣಿ ಕೇಳೆಲೆ ಮೋಹನ (ಬೆ–೯೬–೩)
– ಮಿಸುಕದಂತೆ ಬಂದು ಸೆಳೆದಪ್ಪಿಕೊಂಡು ಕಕ್ಕಸ ಕುಚಗಳ ಪಿಡಿದ

– ನೆರೆದು ಗೋಪಿಯರೆಲ್ಲರು (ಬೆ–೧೦೩–೩)
– ಗರುಡನ ಮಾತೆಯಣ್ಣನ ಮುಖ ಪಿಡಿದನ ನಾರಾಯಣ ಎನ್ನಿರೊ
– ನಾರಾಯಣ ಎನ್ನಿ ನಾರದವರದನ (ಬೆ–೭೬–೨)
– ಸವಿದು ಬೇರನು ಬಾಲಗೊಲಿದನ ಅವನಿಕುಬ್ಜನ ಕೊಡಲಿ ಪಿಡಿದನ
– ಇಂದು ನೀ ಕರೆದುತಾರೆ (ಬೆ–೯೨–೨)
– ಕಳದೊಳು ತಲೆಯ ಚೆಂಡಾಡಿದ ಧೀರನ ಬಳಿ ವಾಘೆಯನು ಪಿಡಿದನ
– ಏಣನಯನೆ ಏಣಭೋಜಮಧ್ಯಳೆ (ಬೆ–೯೯–೧)
– ಪಿಡಿದು ಒಂಟೊಂಟಿಯಲಿ ಒಬ್ಬ ನೋಡದೆ ನಾನು ಕೊಡುವೆನೆಂದ
– ಸೈಯೇ ಇದು ಸೈಯೇ ಗೋಪಿ (ಬೆ–೧೦೪–೧೦)
– ಇಕ್ಕುಳವ ಕೈಯಲ್ಲಿ ಪಿಡಿದು ಕಾದ ಕಬ್ಬಿಣವನ್ನು ತೆಗಿಸಿ ಹೊಕ್ಕು ಮುಂದಕೆ ಎಳಸಿ ಹೊಮ್ಮುವ ಗತಿ ಕಾಣೊ
– ಎಳ್ಳು ಕಾಳನಷ್ಟು ಭಕ್ತಿ (ಬೆ–೧೨–೩)
– ವರ ರುದ್ರವೀಣೆಗಳ ಪಿಡಿದು ಸನಕಾದಿಗಳು ಹರಷದಲಿ
– ಪೂಸರನ ಜನಕನೇ (ಬೆ–೧೬೮–೨)
– ತಾಲ ದಂಡಿಗೆ ಪಿಡಿದು ತುಂಬುರು ನಾರದರು ಭೂಪಾಳಿ ದೇಶಾಕ್ಷಿ ನಾರಾಯಣಿ ಗುಜ್ಜರಿ
– ತಂಗದಿರನನಿಮಿಷ ತಾರಕೆಗಳು (ಬೆ–೧೭೯–೫)
– ಕಡುಕೋಪದಿಂ ಖಳನು ಖಡುಗವನು ಪಿಡಿದು ನಿನ್ನೊಡೆಯನೆಲ್ಲಿಹನೆಂದು ನುಡಿಯೆ
– ಬಾಗಿಲನು ತೆರೆದು ಸೇವೆಯನು (ಬೆ–೪೬–೨)
– ನರನ ಹಯರಥದ ವಾಘೆಯ ಸೂತ್ರವಿಡಿದು
– ಬೊಂಬೆಯಾಟವನಾಡಿಸಿದ (ಬೆ–೭೯–೧)
– ಯಾತನೆಯ ಯೋನಿಮುಖ ಮಾರ್ಗ ವಿಡಿದು
– ಎಲ್ಲಿಂದ ಬಂದೆ ಮುಂದೆತ್ತ ಪಯಣ (ಬೆ–೧೩೫–೧)
– ಗಾರುಡಿಯ ಮತ ಬಿಟ್ಟು ನಾದ ಬ್ರಹ್ಮನ ಪಿಡಿದು ಸಾರಿಸಾರಿ ಮುಕ್ತಿಯನ್ನು ಶಮನದಿಂದ ಮತ್ತೆ ಸುಮನದಿಂದ
– ದಾಸನಾಗೋ ಭವಪಾಶ ನೀಗೋ (ಬೆ–೨೦–೫)
– ಕಿಡಿಕಿಡಿಸೆ ನುಡಿಯಡಗಲೊಡನೆ ಮುಡಿ ವಿಡಿದು
– ಕಂಡೆ ನಾ ತಂಡತಂಡದ ಹಿಂಡು ದೈವ (ಬೆ–೮೪–೧)
– ಚಂಡಭಟರೆಲ್ಲ ಮುಂದೆ ಕತ್ತಿ ಹರಿಗೆಯ ಪಿಡಿದು ಖಂಡತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
– ಎಲ್ಲರೂ ಮಾಡುವುದು ಹೊಟ್ಟೆಗಾಗಿ (ಬೆ–೧೩೪–೪)
– ಪಟ್ಟೆನಾಮವನಿಟ್ಟು ಪತ್ರೆ ಕೈಯಲಿ ಪಿಡಿದು ಗುಟ್ಟಿನಲಿ ಜಪಿಸುವ ಗುರುತರಿಯದೆ
– ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ–೧೩೮–೧)
– ನಾಗಿಣಿಯರಮರಲೋಕದ ನರ್ತಕಿಯರು ಬಾಗಿಲೊಳು ಮಂಗಳೋದಕವಿಡಿದು
– ತಂಗದಿರನನಿಮಿಷ ತಾರಕೆಗಳು (ಬೆ–೧೭೯–೭)
– ರೇಣುಕೆಯ ಬಸುರಿನಲಿ ಜನಿಸಿ ಪಿತನಾಜ್ಞೆಯನು ಮಾಣಬಾರದು ಎಂಬ ಮತವ ಪಿಡಿದು
– ನೋಡಯ್ಯ ನಿನ್ನ ದಾಸರ (ಬೆ–೮೫–೬)
– ಗಂಡರೈವರ ಮುಂದೆ ದ್ರುಪದನಂದಿನಿ ಸೆರಗಲಂಡ ದುಶ್ಶಾಸ ಪಿಡಿದು
– ವಾಸುದೇವಾಯ ನಮೋ (ಬೆ–೯೦–೧)
– ಧರೆ ಮಿತ್ರ ಬುಧ ಜನರ ಅಗ್ನಿಸಾಕ್ಷಿಯ ಮಾಡಿ ಕರವಿಡಿದು ಧಾರೆಯನೆರೆಸಿಕೊಂಡ
– ಆರು ಸಂಗಡ ಬಾಹೋರಿಲ್ಲ (ಬೆ–೧೫–೪)
– ಧರೆಯ ದಾನವ ಬೇಡಿ ನೆಲವ ಮೂರಡಿ ಮಾಡಿ ಪರಶುವಿಡಿದು ಕ್ಷತ್ರಿಯರ ಸವರಿ
– ನಿನ್ನ ನಾನೇನೆಂದೆನೊ ರಂಗಯ್ಯ (ಬೆ–೯೧–೨)
– ತಮತಮಗೆ ಪಿಡಿದೆಳೆಯೆ ತಲ್ಲಣಿಸಿ ಫಣಿರಾಜ ಸಮವಿಷದ ಕರ್ಬೊಗೆಯನುಗುಳುತಿರಲು
– ನೋಡಯ್ಯ ನಿನ್ನ ದಾಸರ (ಬೆ–೮೫–೨)
– ಕಮಲವನು ಕರದಲ್ಲಿ ಪಿಡಿದವನ ಬೇಗದಲಿ

- ಕಾವನಯ್ಯನ ಕಳುಹು (ಬೆ-೧೫೩-೨)
- ತೀರ್ಥ ಪಿಡಿದವರು ತಿರುನಾಮಧಾರಿಗಳೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-ಪ)
- ನೆರೆದು ಗೋಪಿಯರೆಲ್ಲರು ಕೃಷ್ಣಯ್ಯನ ಕರವನು ಪಿಡಿದುಕೊಂಡು
- ನೆರೆದು ಗೋಪಿಯರೆಲ್ಲರು (ಬೆ-೧೦೩-ಪ)
- ಹೆಚ್ಚಿನ ಶಂಖವ ಪಿಡಿದರೆ ಆಕೆ ನಿಚ್ಚ ಶಂಖದ ಕಂಠಳಾದಳಯ್ಯ
- ನಿನಗಿಂತ ಕುಂದೇನೊ (ಬೆ-೮೭-೧)
- ಪರಮ ವೈಷ್ಣವರ ಕೈಲಿ ದಾನವ ಪಿಡಿದನ ಗೋವಿಂದ ಎನ್ನಿರೊ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೧)

೨೭೫೦. ಪಿತ/ಪಿತೃ - ಪಿತ ಮಾತೆಯರ ಸಲಹದವಗೆ ಗಂಡಾಮಾಲೆ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೨)
- ಪಿತನ ಮಾತನು ಶಿರದೊಳಗಾಂತು ನಡೆದನ ಗೋವಿಂದ ಎನ್ನಿರೊ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೨)
- ಆನೆವಾಹನ ಪಿತನ ತಾಯನಳೆದೋನು ಭಾನುಸುತಗೆ ಶಾಪವನಿತ್ತವನು
- ಈತನೇನೆ ನಿನ್ನ ಮಗನು (ಸ-೩೮-೨)
- ಕಬ್ಬುಬಿಲ್ಲನ ಪಿತನ ಏಕಾಂತ ಭಾವದಿ ನೆರೆನಂಬು ಎಚ್ಚರಿಕೆ
- ಮಾಡು ದಾನ ಧರ್ಮ (ಸ-೨೦೪-೫)
- ಎರವಿನ ಮಾತಾಪಿತರನುಜರೆಂಬ ಉರಿ ಕಾವು ಕ್ಷಯವೆಂಬ ಸರಿಗಳನು ವಂದಿಸುವೆನು
- ಎಂತಹುದೊ ನಿನ್ನಯ ಭಕುತಿ (ಸ-೪೧-೪)
- ಕಾಯಜನ ಪಿತ ನಿನ್ನ ಅಡಿಯ ಬಿಡಲಾಗದು
- ತೊರೆದು ಜೀವಿಸಬಹುದೆ (ಬೆ-೫೫-೧)
- ಭರದಿ ಹಾರೈಸುತಿಹರು ಜಲಕ್ರೀಡೆಗೇಳಯ್ಯ ಸ್ಮರನ ಪಿತನೊಲಿದುಪ್ಪವಡಿಸಯ್ಯ ಹರಿಯೆ
- ಪೂಸರನ ಜನಕನೇ (ಬೆ-೧೬೮-೨)
- ನಿಶಿವೆಸರಸುರನ ಅಸುವ ತೊಲಗಿಸಿದೆ ಕುಸುಮಶರನ ಪಿತ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೧)
- ಮಾತಾಪಿತೃ ಗುರು ದೈವ ದ್ರೋಹದಿ ಭೂತಳವು ನಡುನಡುಗುತಿಹುದು
- ಕಲಿ ಹೆಚ್ಚಿ ಬಂದಿತಲ್ಲ (ಸ-೭೮-೨)
- ಅತ್ತೆಯೇ ಸೊಸೆಯಾಗಿ ಸೊಸೆಯು ಅತ್ತೆಯು ಆಗಿ ಪುತ್ರ ಪಿತನಾಗಿ ಪಿತ ಪುತ್ರನಾಗಿ
- ಕಲಿಯೇರಿ ಬಂತು (ಬೆ-೧೩೦-೧)
- ಜನಕ ಹಿತದವನೆಂದು ನಂಬಬಹುದೇ ಹಿಂದೆ ತನಯ ಪ್ರಹ್ಲಾದನಿಗೆ ಪಿತ ಮುನಿದನು
- ಆರು ಹಿತವರು ಎಂದು ನಂಬಬೇಡ (ಬೆ-೩೩-೧)
- ಎಣ್ಣೆಗೊಪ್ಪರಿಗೆಯೊಳು ಬಿದ್ದು ಸ್ತುತಿಸಿದನಲ್ಲ ಚಿಣ್ಣ ಪಿತನಾ ಬಾಧೆಗೊದರಿದವನಲ್ಲ
- ಕಾಯೊ ಕರುಣಾಕರನೆ (ಬೆ-೫೯-೧)
- ಆನೆವಾಹನ ಪಿತನ ತಾಯನಳೆದವನು ಭಾನುಸುತಗೆ ಶಾಪವನಿತ್ತು ಜರೆದವನು
- ಸೀತಾಪತಿ ರಘುನಾಥ (ಬೆ-೧೦೦-೨)
- ಬಗೆಗೊಳಿಸಿ ಪ್ರಹ್ಲಾದ ಪಿತನೊಡಲ ನಿನ್ನ ಕೂರುಗುರಿನಿಂ ಬಗಿಸಿದಾತಂಗೆ ಮುಕುತಿ ಯನೀವೆ
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೧)
- ರೇಣುಕೆಯ ಬಸುರಿನಲಿ ಜನಿಸಿ ಪಿತನಾಜ್ಞೆ ಯನು ಮಾಣಬಾರದು ಎಂಬ ಮತವ ಪಿಡಿದು
- ನೋಡಯ್ಯ ನಿನ್ನ ದಾಸರ (ಬೆ-೮೫-೬)
- ದನುಜೆಯಾಳ್ದನಣ್ಣನಣ್ಣನ ಪಿತನ ಮುತ್ತಿ
- ಈತನೀಗ ವಾಸುದೇವನು (ಬೆ-೭೫-೧)
- ಅತಿಶಯ ನರಹರಿ ವಾಮನ ರೂಪಿನ ಪಿತನ ಮೋಹದ ರಾಣಿಯ
- ಹರಿಮುಖಿ ಹರಿವಾಣಿ (ಬೆ-೯೮-೩)
- ಮಗನು ತೆತ್ತಿಗನೆನಲೆ ಕಂಸ ತನ್ನಯ ಪಿತನ ನಿಗಳ ಬಂಧನದಿಂದ ಬಂಧಿಸಿದನು
- ಆರು ಹಿತವರು ಎಂದು ನಂಬಬೇಡ (ಬೆ-೩೩-೨)
- ಬಾಯೊಳಗಿಹಳ ಗಂಡನ ನಿಜ ತಮ್ಮನ ತಾಯ ಪಿತನ ಮಡದಿಯ ಧರಿಸಿದನ
- ರಮಣಿ ಕೇಳೆಲೆ ಮೋಹನ (ಬೆ-೯೬-೧)

- ನೆತ್ತಿಯಿಂದಿಳಿದಳ ಹೆತ್ತ ಮಗನ ಮೊಮ್ಮನೆತ್ತಿದಾತನ ಪಿತನ
- ರಾಜವದನೆ ಸುರರಾಜನ (ಬೆ-೯೭-೧)
- ಶ್ರೀಕಾಂತ ನೀನಿತ್ತ ವರವು ಸ್ಥಿರವೆಂಬುದಕೆ ನಾಕೇಶಜಿತನ ಪಿತನನುಜ ಹೊಣೆಯೊ
- ನಿನ್ನ ಮಹ ಮಹಿಮೆಗೆ (ಬೆ-೫೦-೩)
- ಹರಿಯ ಮಗನ ಶಿರ ಹರಿದನ ತಂದೆಯ ಹಿರಿಯ ಮಗನ ತಮ್ಮನ ಪಿತನ
- ಮಂಗಲಂ ಜಯ ಮಂಗಲಂ (ಬೆ-೧೭೨-೩)
- ಪಿತನು ಸಾಗರರಾಜ ಹಿತದಕ್ಕ ಶ್ರೀದೇವಿ ಅತಿ ಬೀಗನಾದವ ನಾರಾಯಣ
- ಆರು ಸಮಯಕ್ಕೊದಗಲಿಲ್ಲ (ಬೆ-೩೨-೩)
- ಅತ್ತೆಯೇ ಸೊಸೆಯಾಗಿ ಸೊಸೆಯು ಅತ್ತೆಯು ಆಗಿ ಪುತ್ರ ಪಿತನಾಗಿ ಪಿತ ಪುತ್ರನಾಗಿ
- ಕಲಿಯೇರಿ ಬಂತು (ಬೆ-೧೩೦-೧)
- ಲಕ್ಷ್ಮೀ ಮನೋಹರನೆ ಇಕ್ಷುಚಾಪನ ಪಿತನೆ
- ವಾಸುದೇವಾಯ ನಮೋ (ಬೆ-೯೦-೭)
- ಅಂಬುಜೋದ್ಭವ ರುದ್ರರ ಕಂಡೆ ಶಂಬರಾರಿ ಪಿತನೆ ರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-೪)
- ಗತಿಯಿಲ್ಲದರಿಗೆ ಸದ್ಗತಿಯು ನೀನೆ ದೇವ ರತಿಪತಿಯ ಪಿತನೆ ಕಾಯೊ
- ವಾಸುದೇವಾಯ ನಮೋ (ಬೆ-೯೦-೩)

೨೭೫೧. **ಪಿತಾಮಹ** (ತಂದೆಯ ತಂದೆ) - ಹಿಂದಿನಾ ಕುಲ ಸ್ವಾಮಿ ಗುರು ಪಿತಾಮಹ ನೀನೆ
- ವಾಸುದೇವಾಯ ನಮೋ (ಬೆ-೯೦-೮)

೨೭೫೨. **ಪಿನಾಕಿಸಖ** (ವಿಷ್ಣು) - ಪಿನಾಕಿಸಖ ನಾದಿಕೇಶವನೆ ಉಡುಪಿಯ ವಾಸ ಸಾಕಿ ಸಲಹೈ ಎನ್ನ ಕೃಷ್ಣ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮_೩)

೨೭೫೩. **ಪಿಶಾಚಿ** - ತಮ್ಮ ಹವಣನರಿಯದೆ ಗರ್ವ ಪಿಶಾಚಿಗಳು ಎಮ್ಮ ಮನೆಯೊಡೆವಂತೆ ಕಲ್ಲಲಿಟ್ಟು
- ಸಾಲದೆ ನಿನದೊಂದು ದಿವ್ಯ ನಾಮ (ಬೆ-೧೭೪-೩)

೨೭೫೪. **ಪಿಸುಣ** (ಚಾಡಿಕೋರ) - ಪಿಸುಣ ನಿಗಿಂತ ಅಧಿಕಹೀನರುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೪)

೨೭೫೫. **ಪೀಡಿಸು** - ಪತಿವ್ರತೆಯರ ಪೀಡಿಸಿದವಗೆ ಅತಿಸಾರ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೨)
- ವ್ಯಾಧಿರೂಪಗಳಿಂದ ಪೀಡಿಸುತ ತನುವ ತೊತ್ತುಳಿಗೈದು ನೆಲಕಿಕ್ಕಿ ತೀಡಿ ಬಸವಳಿದ ಬಳಿಕ
- ಅಣುಮಹತ್ತಾದ ದೇವ (ಬೆ-೭೧-೧)

೨೭೫೬. **ಪೀತವಸನ/ಪೀತವಾಸ** (ವಿಷ್ಣು) - ಪೀತವಸನ ನೀನೊಲಿದು ಉಪ್ಪವಡಿಸು ಹರಿಯೆ
- ಸಿಂಗರದ ಸಿರಿಧರನೆ (ಬೆ-೧೬೭-೧)
- ಹರಿಯು ನೀನೆಂಬುದಕೆ ಸರಿಯು ಕೌಸ್ತುಭ ರತ್ನ ವರಪೀತವಸನ ಕ್ಷೀರಾಬ್ಧಿ ಹೊಣೆಯೊ
- ನಿನ್ನ ಮಹ ಮಹಿಮೆಗೆ (ಬೆ-೫೦-೧)
- ಸುರುಚಿರೋಜ್ಜ್ವಲ ಪೀತವಾಸನಿಗೆ ಉಡುಗೊರೆಯ ಅರಿವೆ ಏನನು ಪೊದಿಸಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೨)

೨೭೫೭. **ಪೀತವಾಸ/ಪೀತಾಂಬರ** (ಹಳದಿಯ ರೇಷ್ಮೆ ಬಟ್ಟೆ) - ಶೇಷನ ಹಾಸಿಗೆ ಗರುಡ ತುರಗವು ಪೀತವಾಸದುಡುಗೆಯು ಕೊರಳಲಿ ವೈಜಯಂತಿ
- ಸಿರಿಯ ಮದವೆ ಮುಕುಂದ (ಬೆ-೬೯-೨)
- ನರರಂಗಕೆ ಬಹುದು ರಕ್ಷಣ ಮಾಡುವ ಕಾಶಿಪೀತಾಂಬರ ಮಕರ ಕುಂಡಲಾಭರಣನ ನೆನೆ ಮನವೆ - ಬೆರೆಯದಿರು ಬೆರೆಯದಿರು
- ಬೆರೆಯದಿರು ಬೆರೆಯದಿರು (ಬೆ-೧೪೪-೧)
- ಪೊಸ ಪೀತಾಂಬರ ಉಡಿಸಿ ನವರತ್ನವಂ ತೊಡಿಸಿ ವಸುಧೆಯೊಳು ಮಿಗಿಲಾಗಿ ನಿಲಿಸಿದಳೋ ನಮಿಸಿ
- ಯಾಕೆಲೊ ರಂಗ ನಿನಗಿಂತ ನಟನೆಯ ಮಾತು (ಸ-೨೧೬-೨)
- ಪೊಂಬಟ್ಟೆ ಪೀತಾಂಬರವನುಟ್ಟು ಮೆರೆವಂಥ

ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೨)

೨೭೫೮. ಪೀನಾಶಿ (ಮೂಗು ಕೊಳೆತು ಹೋಗುವ ರೋಗ) - ಹಿರಿಯರನು ಜರೆದವಗೆ ಪೀನಾಶಿ ರೋಗವು
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೧)

೨೭೫೯. ಪೀರ್ - ಜಲಧಿಯನು ಪೀರ್ದ ಮಹಾಬಲದ ಬಲವಂತನು
- ಸಿಂಗರದ ಸಿರಿಧರನೆ (ಬೆ-೧೬೭-೪)
- ಜಲಧಿಯನ್ನು ಪೀರ್ದ ಮುನಿಯ ಜನನಿ ಪೆಸರ್ಗೆ ಕಿವಿಯನಾಂತ
- ನಂಬಬೇಡಿ ಸಿರಿಯು ತನ್ನದೆ (ಬೆ-೧೧೫-೧)

೨೭೬೦. ಪೀಲಕ (ದಪ್ಪ ಇರುವೆ, ಗೊದ್ದ?) - ಹರಿಯೆಂಬ ಶಬ್ದವ ಕೇಳಿ ಪೀಲಕನು ಹರನ ಹುಟ್ಟಲಿ ಹೆಟ್ಟಿದಂತೆಂಬಿರಿ
- ಶಂಕರ ನಾರಾಯಣ ಬಿಡು (ಬೆ-೧೭೫-೩)

೨೭೬೧. ಪುಂಡ - ಪುಂಡಪೋಕರನ್ನು ಮೀರಿ ದುಂಡು ಕುಚಗಳನ್ನು ಪಿಡಿದು
- ಬಾಲಕನೆಂದೆತ್ತಿಕೊಂಡೆನೆ (ಸ-೧೮೩-೨)
- ಪುಂಡರಾ ಪಾಂಡುನಂದನರು ಮತ್ತದರೊಳು ಕಂಡೋರ್ವಳ್ಳೆವರು ಭೋಗಿಪರು
- ನಡತೆ ಹೀನನಾದರೇನಯ್ಯ (ಸ-೧೨೭-೧)
- ಲಂಡರಿಗೆ ಎದೆಗೊಡುವ ಪುಂಡ ಆನೆ
- ಆನೆಯ ನೋಡಿರಯ್ಯ (ಬೆ-೧೫೬-೧)
- ಪುಂಡನು ನಿನ್ನಣುಗ ಕಾಗೆನೆಲೆಯ ಆದಿಕೇಶವ ರಾಯ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೧೧)

೨೭೬೨. ಪುಂಡರೀಕ - ಅಂಬರೀಷರಾಯ ಬಲ್ಲ ಆದಿ ಪುಂಡರೀಕ ಬಲ್ಲ ಸಂಭ್ರಮದಿ ಮನು ಬಲ್ಲ ಸಹದೇವ ಬಲ್ಲ
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-೪)

೨೭೬೩. ಪುಂಡರೀಕಾಕ್ಷ - ಖಂಡಿಸಿದರು ರಣದೊಳು ಗುರುಹಿರಿಯರ ಪುಂಡರೀಕಾಕ್ಷನ ಒಲುಮೆಯೊಂದಲ್ಲದೆ
- ನಡತೆ ಹೀನನಾದರೇನಯ್ಯ (ಸ-೧೨೭-೧)
- ಪರಮಾತ್ಮ ಪರಿಪೂರ್ಣ ಪುಂಡರೀಕಾಕ್ಷ ರಕ್ಷಿಸು ಎಂದು ಮೊರೆಯಿಟ್ಟಳಂಡಜತುರಂಗಗಾಗ
- ವಾಸುದೇವಾಯ ನಮೋ (ಬೆ-೯೦-೧)
- ಭಂಡರಂದದಿ ಬತ್ತಲೆ ಬಹುದಾವಾಟ ಪುಂಡರೀಕಾಕ್ಷನ ನೆನೆ ಕಾಣೊ ಮನವೆ
- ಗೋವಿಂದ ಗೋವಿಂದ ಎನ್ನಲರಿಯದೆ (ಬೆ-೧೬-೨)

೨೭೬೪. ಪುಂಡ್ರಕ (ಹಣೆಯ ಮೇಲೆ ಹಚ್ಚಿಕೊಳ್ಳುವ ನಾಮ) - ಮುಖ ಮಾರ್ಜನವ ಮಾಡಿ ಉದ್ಧರಿಸು ಊರ್ಧ್ವ ಪುಂಡ್ರಕವನ್ನು ಸಕಲ ಮಧುಪರ್ಕ
- ಪೂಸರನ ಜನಕನೇ (ಬೆ-೧೬೮-೪)

೨೭೬೪. ಪುಟ್ಟಿಸು - ಕಲ್ಲೊಳು ವಿಷಯ ಪುಟ್ಟಿಸಿದನಾ ಶುಭವಲ್ಲದ ದಿವಸದೊಳಿರಾ ನೋಡಿ
- ಚೆಲ್ವ ಕಂಗಳ ಚೆಲ್ವಕಾರ (ಸ-೯-೧)
- ಪುಟ್ಟಿಸಲು ಬೇಡವಿನ್ನು ಪುಟ್ಟಿಸಿದಕೆ ಪಾಲಿಸಿನ್ನು
- ಈಶ ನಿನ್ನ ಚರಣ ಭಜನೆ (ಬೆ-೬೫-೨೩)
- ಸಕಲೈಶ್ವರ್ಯದ ಶ್ರೀದೇವಿ ನಿನ್ನರಸಿ ಬಹು ಮುಕುತಿಯಿಂದಲಿ ಲೋಕ ಪುಟ್ಟಿಸುವ
- ಸಿರಿಯ ಮದವೆ ಮುಕುಂದ (ಬೆ-೭೯-೧)
- ಎಲ್ಲ ದೇವರ ಪುಟ್ಟಿಸಿ ನೆಲೆಗೊಳಿಸಿದ ಫುಲ್ಲನಾಭನು ಪರದೈವ ನಂಬಣ್ಣ
- ಶಂಕರನಾರಾಯಣ ಬಿಡು (ಬೆ-೧೭೫-೮)
- ವೇದಮುಖದವನ ಅತಿ ಮೋದದಲಿ ಪುಟ್ಟಿಸಿದ ಆದಿಮೂರುತಿ ಆವನು
- ಆತನೇ ಪರಮಾತ್ಮ ಪರತತ್ತ್ವ (ಬೆ-೭೪-೩)
- ಪುಟ್ಟಿಸಲು ಬೇಡವಿನ್ನು ಪುಟ್ಟಿಸಿದಕೆ ಪಾಲಿಸಿನ್ನು
- ಈಶ ನಿನ್ನ ಚರಣ ಭಜನೆ (ಬೆ-೬೫-೨೩)

೨೭೬೬. ಪುಟ್ಟು - ಹರಿಯ ನೆನೆಯಲಿಲ್ಲ ಹರುಷದಿ ಗರುವ ಪುಟ್ಟಿತಲ್ಲ

- ವ್ಯರ್ಥವಾಯಿತಲ್ಲ ಜನ್ಮ ಸಾರ್ಥಕಾಗಲಿಲ್ಲ (ಸ-೨೩೧-೧)
- ಓಂಕಾರದೊಳಗೆ ಪುಟ್ಟಿ ಓಂಕಾರದೊಳಗೆ ಬೆಳೆದು ಓಂಕಾರದೀ ಜಗವ ಎತ್ತಿ ಮೆರೆವುದೋಂ ಎಂದು
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೫)
- ನಡು ಬೆರಳುಂಗುರದಿಂದ ಕೈಯ ಬೆಡಗ ನೋಡಿದ ಜನರಿಗೆ ಪುಟ್ಟಿತಾನಂದ
- ಕೈಯ ತೋರಿದ ಬಗೆಯ (ಸ-೯೧-೨)
- ಕಲಿಗೆ ಬೆದರುವರಲ್ಲ ಕಾಲನ ಬಾಧೆಗಳಿಲ್ಲ ಸಲೆ ನರಳಿ ಪುಟ್ಟುವ ಗಸಣೆಯಿಲ್ಲ
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೫)
- ಕೆಸರೊಳು ತಾವರೆ ಪುಟ್ಟಲು ಅದ ತಂದು ಕುಸುಮನಾಭನಿಗೆ ಅರ್ಪಿಸರೇನಯ್ಯ
- ಕುಲ ಕುಲ ಕುಲವೆನ್ನುತಿಹರೊ (ಬೆ-೧೨೦-೧)
- ಗೋಕುಲದೊಳು ಪುಟ್ಟಿ ಗೊಲ್ಲರೆಲ್ಲರ ಕೈಯ ಸಾಕಿಸಿಕೊಂಡ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೪)
- ಕಲ್ಲೊಳಗೆ ಪುಟ್ಟಿ ಕೂಗುವ ಮಂಡುಕಂಗಳಿಗೆ ಅಲ್ಲಿ ಹೋಗಿ ಆಹಾರವಿತ್ತವರದಾರು
- ತಲ್ಲಣಿಸದಿರು ಕಂಡೆಯಾ ತಾಳು ಮನವೆ (ಬೆ-೩೪-೩)
- ವಸುದೇವನುದರದಿ ಪುಟ್ಟಿದನೆ ಪಲ್ಮಸೆವ ದನುಜರೊಡೆಗುಟ್ಟಿದನೆ
- ಗೋವಿಂದ ಹರಿ ಗೋವಿಂದ (ಬೆ-೫೬-೩)
- ಗಿಳಿ ನಾಂಬಿಯ ಪೆಸರಿನವರೊಳು ಮುಗಿಲ ಹೊಳೆಯ ಹೊಟ್ಟೆಯಲಿ ಪುಟ್ಟಿದವರೊಳು
- ಶೇಷಶಯನ ನಿನ್ನ ಭಾಗವತರ (ಬೆ-೨೭-೩)
- ಕಟ್ಟಾಳು ಕಡುಜಾಣನಾಗಿ ಪುಟ್ಟಿದರಿಲ್ಲ ಬೆಟ್ಟಗಳನು ಕಿತ್ತಿ ಇಟ್ಟರಿಲ್ಲ
- ಕಷ್ಟಪಟ್ಟರೂ ಇಲ್ಲ (ಬೆ-೧೧೧-೩)
- ಚಿತ್ರಾನಕ್ಷತ್ರದಲಿ ಪುಟ್ಟಿದಾತನ ಸೊಸೆ ಮೃತ್ಯುವೆಂದೆಣಿಸಿ ಹೊರಡಿಸಿದಾತನ
- ಬಲ್ಲವರು ನೀವು ಪೇಳಿರಯ್ಯ (ಬೆ-೧೫೦-೧)

೨೭೬೭. ಪುಣ್ಯ - ಮುನ್ನ ಮಾಡಿದ ಪುಣ್ಯ ಬೆನ್ನತ್ತಿ ಬರುವುದು ಮುಂದೆ ನೋಡೆಚ್ಚರಿಕೆ
- ಮಾಡು ದಾನ ಧರ್ಮ (ಸ-೨೦೪-೪)
- ಸಂಖ್ಯೆಯಿಲ್ಲದಾಭರಣಗಳ ತೊಡಿಸಿ ಯಲಂಕರಿಸುವ ಪುಣ್ಯವೆಂತು ಪಡೆದಳಯ್ಯ
- ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ-೧೯೫-೫)
- ಅಡಿಯಿಡು ಮಗನೆ ಮೆಲ್ಲಡಿಯಿಡು ಎನುತಲಿ ನಡೆಗಲಿಸುವ ಪುಣ್ಯವೆಂತು ಪಡೆದಳಯ್ಯ
- ಮಗನೆಂದಾಢಿಸುವಳು ಮೊಗನೋಡಿ ನಗುವಳು (ಸ-೧೯೫-೩)
- ಆಗಮ ನಿಗಮಗಳರಸಿ ಕಾಣದ ವಸ್ತುವನು ತೂಗಿ ಪಡುವ ಪುಣ್ಯವೆಂತು ಪಡೆದಳಯ್ಯ
- ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ-೧೯೫-೬)
- ನೀಲದುಡುಗೆಯುಟ್ಟ ಬಾಲನೆ ಬಾರೆಂದು ಪಾಲುಣಿಸುವ ಪುಣ್ಯವೆಂತು ಪಡೆದಳಯ್ಯ
- ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ-೧೯೫-೧)
- ಪಕ್ಷಿವಾಹನ ನೀನು ಅಂಜಬೇಡ ಎನುತಲಿ ರಕ್ಷೆ ಇಡುವ ಪುಣ್ಯವನೆಂತು ಪಡೆದಳಯ್ಯ
- ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ-೧೯೫-೪)
- ಪುಣ್ಯ ತೀರಿದ ಮೇಲೆ ಪರಲೋಕ ಸಾಧನವೆ
- ಬಾಯಿ ನಾರಿದ ಮೇಲೆ (ಬೆ-೧೪೨-೧)
- ಮಕ್ಕಳ ಪಡೆವುದು ಪುಣ್ಯ ಅದು ಕೇಳಿರಿಯಣ್ಣ
- ಅಹುದಾದಡಹುದೆನ್ನಿ (ಬೆ-೧೩೨-೨)
- ಮನವಚನದಲಿ ಮಾಡಿದ ಪುಣ್ಯ ಪಾಪವ ನಿನಗರ್ಪಿಸುವೆ ಕಾಲಕಾಲದಲಿ
- ಯಮದೂತರಿನ್ನೇನ ಮಾಡುವರು (ಬೆ-೪೪-೩)
- ಅರ್ಥವಿಷಯಂಗಳ ಫಲವನರಿತು ಪುಣ್ಯ ತೀರ್ಥಯಾತ್ರೆಗಳ ಮಾಡುವುದ ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೭)
- ಹಿಂಗದೆ ಜಗವ ಪಾವನವ ಮಾಡುವ ಪುಣ್ಯ

ಗಂಗೆಯೆಂಬವಳೀಗ ನಿನ್ನ ಮಗಳು ದೇವ
- ಜಗದಂತರ್ಯಾಮಿ ಎಂತೆಂದು (ಬೆ-೫೮-೪)
- ಚರಣದಿ ಪಾಷಾಣ ಹೆಣ್ಣುಮಾಡಿದ ಪುಣ್ಯಚರಿತ ಯಾದವಪತಿ ಶರಣೆಂದೆನಲ್ಲದೆ
- ನಿನ್ನ ನಾನೇನೆಂದೆನೊ ರಂಗಯ್ಯ (ಬೆ-೯೧-೨)
- ಸನ್ನುತದಲಿ ಪರಹಿತಾರ್ಥ ಮಾಡಿ ಪುಣ್ಯ ಪಡೆಯೊ ನೀನು
- ಏನು ಬರುವುದೋ ಸಂಗಡ (ಬೆ-೧೩೭-೨)
- ನರಲೋಕದಿ ಯಮನ ಬಾಧೆಯ ಕಳೆಯಲು ವರ ಪುಣ್ಯ ಕಥೆಗಳ ಕೇಳುತಲಿ
- ದಾನ ಧರ್ಮವ ಮಾಡಿ ಸುಖಿಯಾಗು (ಬೆ-೧೩೯-೫)
- ಪುಣ್ಯವಿಲ್ಲದವನ ಪ್ರೌಢಿಮೆ ಮೆರೆದರೇನು
- ಆರು ಬಾಳದರೇನು (ಬೆ-೩೦-೧)
- ಬಂದವನಾವನಾದರು ಕರೆದಡೆ ಪುಣ್ಯವೆಂದವರ ಮನೆಗಳಿಗೆ ಪೋಗಿ
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೨)

೨೭೬೮. ಪುಣ್ಯದಾಯಕ - ತ್ರಾಹಿ ತ್ರಾಹಿ ಯೆಂದು ತ್ರೈಲೋಕ್ಯದೊಡೆಯ ಪುಣ್ಯ ದಾಯಕನ ಹೊಂದಿ ನೀ ಧನ್ಯನಾಗೊ ಮುಕ್ತ ಮಾನ್ಯನಾಗೊ
- ದಾಸನಾಗೋ ಭವಪಾಶ ನೀಗೋ (ಬೆ-೨೦-೩)

೨೭೬೯. ಪುಣ್ಯಫಲ - ಇಷ್ಟ ಸಂಪತ್ತನ್ನು ಬಡವರಾ ಕರೆತಂದು ಕೊಟ್ಟು ಮಾಡಿದ ಪುಣ್ಯಫಲ ತನ್ನದೊ
- ಈ ಸಿರಿಯ ನಂಬಿ ಹಿಗ್ಗಲು ಬೇಡ (ಸ-೪೦-೩)

೨೭೭೦. ಪುತ್ಥಳಿ - ಪುತ್ಥಳಿ ಬೊಂಬೆಯ ಚಿತ್ರದಿ ಬಣ್ಣಿಸಿ ಮುತ್ತುಕೊಟ್ಟರೆ ಮಾತನಾಡೀತೆ
- ಕೇಶವನೊಲುಮೆಯು ಆಗುವ ತನಕ (ಸ-೮೯-೩)

೨೭೭೧. ಪುತ್ರ - ದಂಡವ ತೆರಿಸುವ ಪುತ್ರ ಹಗೆಗಳಿಗವ ಮಿತ್ರ
- ಅಹುದಾದಡಹುದೆನ್ನಿ (ಬೆ-೧೩೨-೩)
- ಸತ್ಯನೊಬ್ಬ ಪುತ್ರ ಶಾಂತನೊಬ್ಬ ದುರ್ವೃತ್ತಿ ನಿಗ್ರಹನೊಬ್ಬ ಸಮಚಿತ್ತನೊಬ್ಬ
- ಮಗನಿಂದೆ ಗತಿಯುಂಟೆ (ಬೆ-೧೪೫-೪)
- ಭಕುತರೊಳು ಘಂಟಕರ್ಣನು ಜಯ ಸುವರ್ಣಕ ಪುತ್ರ
- ಸಿಂಗರದ ಸಿರಿಧರನೆ (ಬೆ-೧೬೭-೨)
- ನಿಂದಳುತ ಜ್ಯೇಷ್ಠರು ಕನಿಷ್ಠ ಭ್ರಾತರು ಪುತ್ರ ಬಂಧು ಮಿತ್ರರು
- ಅಣುಮಹತ್ತಾದ ದೇವ (ಬೆ-೭೧-೨)
- ಆ ಶೌಂಡಲ್ಯ ಪರಾಶರ ಎನಿಪನು ವೇಶೆಯ ಪುತ್ರ ವಸಿಷ್ಠಮುನಿ
- ಕುಲ ಕುಲ ಕುಲವೆನ್ನುತಿಹರೊ (ಬೆ-೧೨೦-೨)
- ಅತ್ತೆಯೇ ಸೊಸೆಯಾಗಿ ಸೊಸೆಯು ಅತ್ತೆಯು ಆಗಿ ಪುತ್ರ ಪಿತನಾಗಿ ಪಿತ ಪುತ್ರನಾಗಿ
- ಕಲಿಯೇರಿ ಬಂತು (ಬೆ-೧೩೦-೧)
- ಗೋತ್ರಭೇದಿಸುತನ ಪುತ್ರನ ಹೆಂಡಿರ ಮಾತುಳನಾದವನ
- ತೋರೆ ಬೇಗನೆ ಸಖಿ (ಬೆ-೯೪-೨)
- ಅತ್ತೆಯ ಸೊಸೆ ಬೈವಳು ಪುತ್ರರು ತಮ್ಮ ಹೆತ್ತ ತಾಯಿಯ ಬಿಡುವರು
- ಕಲಿ ಹೆಚ್ಚಿ ಬಂದಿತಲ್ಲ (ಸ-೭೮-೧)
- ಲೋಲಲೋಚನೆಯ ಮಾತೆಯ ಪುತ್ರ ನಣುಗನ ಮೇಲುಶಕ್ತಿಗೆ ಉರವಾಂತು
- ರಮಣಿ ಕೇಳೆಲೆ ಮೋಹನ (ಬೆ-೯೬-೨)

೨೭೭೨. ಪುತ್ರಿ - ಸತಿಯು ಸುತರು ಪುತ್ರಿ ಮಿತ್ರರತಿಶಯದೊಳು ತಂದೆ ತಾಯಿ ಅತಿ ವಿನೋದಗೈವ ಭಾವ
- ಯಾರಿಗಾರು ಬಹರು ಸಂಗಡ (ಸ-೨೨೧-೨)

೨೭೭೩. ಪುರ - ಪುರ ಅಗ್ರಹಾರ ಕೆಡಿಸಿದವಗೆ ರಾಜರೋಗವೆಂದು ಅರಿವುದು ಸಕಲ ಜನರು
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೧)
- ಸಿಂಧುವನೆ ದಾಟಿ ಮುದ್ರಿಕೆಯಿತ್ತು ದಾನವರ ವೃಂದ ಪುರ ದಹಿಸಿ ಚೂಡಾಮಣಿಯ ತಂದವನ
- ಪರಮ ಪದವಿಯನೀವ ಗುರು ಮುಖ್ಯ ಪ್ರಾಣನ (ಬೆ-೭-೧)

– ಗಗನದ ಪುರವ ಪೊಕ್ಕನ ತೇಜಿರೂಢನ
– ಇಂದು ನೀ ಕರೆದುತಾರೆ (ಬೆ–೯೨–೩)
– ಸೀತೆಯನು ವಂದಿಸುತೆ ಉಂಗುರವನಿತ್ತವಗೆ ದೈತ್ಯಪುರವನು ಭರದಲುರಿಸಿದವಗೆ
– ಜಯಮಂಗಲಂ ನಿತ್ಯ (ಬೆ–೧೭೧–೧)
– ಸೇತುವೆ ದಾಟಿ ಲಂಕೆಗೆ ಪೋಗಿ ಹನುಮಂತ ಖ್ಯಾತಿಯಲಿ ರಾವಣನ ಪುರವನಳಿಸಿ
– ಪ್ರಾಚೀನ ಕರ್ಮವಿದು (ಬೆ–೧೦೭–೧)
– ಒಡನೆ ತನ್ನಯ ಪುರಕೆ ಹೊಡೆತಂದ ಧೀರನ ಒಡೆಯನ ತೋರೆನಗೆ
– ಏಣನಯನೆ ಏಣ ಭೋಜಮಧ್ಯಳೆ (ಬೆ–೯೯–೩)
– ಧರಣಿಜಾತನ ಶಿರವರಿದು ನಾರಿಯರನು ಪುರಕೆ ತಂದವನ ತೋರೆ
– ರಾಜವದನೆ ಸುರರಾಜನ (ಬೆ–೯೭–೨)
– ಮೂರುಪುರದಬಲೆಯರ ವ್ರತಗಳನೆ ಕೆಡಿಸಲಿಕೆ ಬೇರೊಂದು ಅಶ್ವತ್ಥವೃಕ್ಷವಾಗಿ
– ನೋಡಯ್ಯ ನಿನ್ನ ದಾಸರ (ಬೆ–೮೫–೯)
– ನೀಲಮೇಘಶ್ಯಾಮ ಭಾಗ್ಯಪುರದಲಿ ನಿಂದ
– ಕಾವನಯ್ಯನ ಕಳುಹು (ಬೆ–೧೫೩–೩)
– ರಾಜವದನೆ ಸುರರಾಜನ ಪುರದೊಳು ರಾಜಿಸುತಿಹ ಕುಜವ
– ರಾಜವದನೆ ಸುರ ರಾಜನ (ಬೆ–೯೭–ಪ)
– ಅಂಭೋಜನಾಭನನು ಭಾವದಲಿ ನೆನೆದರೆ ಇಂಬುಂಟು ವೈಕುಂಠಪುರದೊಳಗೆ ಅಯ್ಯ
– ನೇಮವಿಲ್ಲದ ಹೋಮವೇತಕಯ್ಯ (ಬೆ–೧೭–೨)

೨೭೭೪. ಪುರಜನ – ಪುರಜನರು ಹಾಯೆನಲು ಸುರರು ಹೂಮಳೆಗರೆಯೆ
– ಕಂಡೆ ನಾ ತಂಡತಂಡದ ಹಿಂಡು ದೈವ (ಬೆ–೮೪–೩)
– ಪುರಜನರು ಕೇಡು ಕೌರವಂಗೆಂದು ಮಾತಾಡಿ ನಿಶ್ಚೈಸಿಓಡಿ ಮನೆಗಳ ಪೊಕ್ಕರು
– ವಾಸುದೇವಾಯ ನಮೋ (ಬೆ–೯೦–೧೨)

೨೭೭೫. ಪುರತ್ರಯ (ಈಶ್ವರನಿಂದ ನಾಶ ಮಾಡಲ್ಪಟ್ಟ ಮೂರು ನಗರಗಳು) – ಪುರತ್ರಯ ವಧುಗಳ ಗೆಲಿದಗೆ ಮಂಗಳ ತುರಗವಾಹನನಿಗೆ ಜಯ ಮಂಗಳ
– ಅಂಬುಜದಳಾಕ್ಷಗೆ ಮಂಗಳ (ಬೆ–೧೭೦–೩)

೨೭೭೬. ಪುರಪತಿ (ನಗರಾಧ್ಯಕ್ಷ) – ಪೇರಣ ಪುರಪತಿ ಸಿರಿ ಭೂಭಾರೋತ್ತಾರಣ ಗುಣನಿಧಿ ಗೋವಿಂದ
– ಪರಮಪುರುಷ ಹರಿ ಗೋವಿಂದ (ಬೆ–೩೯–೮)

೨೭೭೭. ಪುರವಾಸ – ಬೇಲೂರು ಪುರವಾಸ ನೆಲೆಯ ಆದಿಕೇಶವನ ಆಳಾಗು ಎಚ್ಚರಿಕೆ
– ಮಾಡು ದಾನ ಧರ್ಮ (ಸ–೨೦೪–೭)

೨೭೭೮. ಪುರಾಣ – ಕಥೆ ಪುರಾಣಗಳ ಹಳಿದವಗೆ ಕಾಸಶ್ವಾಸ
– ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ–೧೨೪–೨)
– ನಾಲುಕು ವೇದ ಪುರಾಣ ಶಾಸ್ತ್ರ ಪಂಚಾಂಗ ಹೇಳಿಕೊಂಡು ಕಾಲ ಕಳೆಯುವುದೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
– ಎಲ್ಲರೂ ಮಾಡುವುದು ಹೊಟ್ಟೆಗಾಗಿ (ಬೆ–೧೩೪–೨)
– ವೇದ ಶಾಸ್ತ್ರ ಪುರಾಣ ಶ್ರುತಿ ತರ್ಕ ಮಹದಾದಿ ಸಾಧನದ ಶ್ವಾನ ನಮ್ಮಜ್ಜನ ಹಿಂಡಿನೊಳು
– ನಾವು ಕುರುಬರು (ಬೆ–೧೫೨–೪)
– ಸವಿನುಡಿ ವೇದ ಪುರಾಣ ಶಾಸ್ತ್ರಂಗಳ ಕಿವಿಯಿಂದ ಕೇಳುವ ಕಥೆ ನಿನ್ನದು
– ತನು ನಿನ್ನದು ಜೀವನ ನಿನ್ನದು (ಬೆ–೫೭–೧)

೨೭೭೯. ಪುರುಷೋತ್ತಮ (ವಿಷ್ಣು) – ಪರಮ ಪುರುಷ ಪುರುಷೋತ್ತಮ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೩)
– ಕಿಂಕರನ ಜನಕ ಅನಿರುದ್ಧ ಪುರುಷೋತ್ತಮ ನಾಮಂಗಳಂ ಬಿಡದೆ
– ಅಭ್ಯಾಸವನು ಮಾಡಬೇಕು (ಬೆ–೩೮–೩)
– ಸತ್ತವನಂತೆ ಬಿದ್ದಿಹುದಾವ ನೀತಿ ಪುರುಷೋತ್ತಮನ ನಾಮ ಸ್ಮರಣೆಯ ಮಾಡೊ
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೫)
– ಕ್ಷಿತಿಯೊಳಗೆ ಕಾಗೆನೆಲೆಯಾದಿಕೇಶವನಾದ

ಪತಿತಪಾವನ ಪರಮ ಪುರುಷೋತ್ತಮನನು
- ನಂಬು ನಾರಾಯಣನ (ಬೆ-೫೩-೩)
- ಪ್ರೇಮ ಇರಿಸು ನಿನ್ನ ಚರಣದಲ್ಲಿ ಪುರುಷೋತ್ತಮಾ
- ಈಶ ನಿನ್ನ ಚರಣ ಭಜನೆ (ಬೆ-೬೫-೧೬)

**೨೭೮೦. ಪುಲ್ಲ** - ಎಲ್ಲ ಒಡವೆ ಹೋಯಿತಾದರು ಪುಲ್ಲಳಾಗಿ ಮೆರೆಯುತಾಳೆ
- ಒಡವೆ ಹೋಯಿತು ಮನ ಧೃಡವಾಯಿತು (ಸ-೬೯-೪)

**೨೭೮೧. ಪುಷ್ಪ** - ತೋಯಜವೆಂಬ ಪುಷ್ಪದ ಪೆಸರವರೊಳು ತಾಯ ಸೊಸೆಗೆ ಮಕ್ಕಳಿತ್ತವರೊಳು
- ಶೇಷಶಯನ ನಿನ್ನ ಭಾಗವತರ (ಬೆ-೨೭-೨)
- ಅರಳು ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳ ಸುರರು ತಂದಿದ್ದಾರೆ ಬಲು ಭಕುತಿಯಿಂದ
- ಏಳು ನಾರಾಯಣ (ಸ-೫೯-೨)

**೨೭೮೨. ಪುಷ್ಪವಾಟ** (ಹೂದೋಟ)- ಮೊಗ್ಗಿದುವು ಮಧುಪಸಂಕುಲ ಪುಷ್ಪವಾಟಿಯೊಳು ಜಗ್ಗಿದುವು ಜಡಿವ ತೆರದಿ ವರ ಕವಿಗಳೆದೆಯ ಮಧುರೋಕ್ತಿಯೆನಿಸಿ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೨)

**೨೭೮೩. ಪುಷ್ಪಗಂಧಿ** - ಪುಷ್ಪಗಂಧಿಯರೊಡನೆ ಒಪ್ಪಿತವು ಆಗಲಿಲ್ಲ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೮)

**೨೭೮೪. ಪುಷ್ಪಮಾಲೆ** (ಹೂವಿನ ಹಾರ) - ಮೀಸಲಳಿಯದ ಪುಷ್ಪಮಾಲೆ ಧರಿಸಿ ಜಗದೀಶನೆಂಬ ಬಿರುದ ಪೊಗಳಿಸಿಕೊಳುತಿಪ್ಪೆ
- ಸಿರಿಯ ಮದವೆ ಮುಕುಂದ (ಬೆ-೬೯-೨)

**೨೭೮೫. ಪುಸಿ** (ಸುಳ್ಳು) - ಕಾಸಿಗಾಸೆಯ ಪಟ್ಟು ಸಹಸ್ರ ಲಕ್ಷದ ಪುಸಿಯ ಬೇಸರಿಸದೆ ಬೊಗಳಿದೆ ವರದಾ
- ಮೊರೆಹೊಕ್ಕೆ ಹರಿ ನಿಮ್ಮ ಚರಣಕಮಲವ (ಸ-೨೧೩-೬)
- ಪುಸಿಯನಾಡುವ ಪುರುಷಗೆ ರಕ್ತಕಾಳಿ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೩)
- ಎನ್ನ ನುಡಿ ಪುಸಿಯಲ್ಲ ಈ ಜಗದೊಳು
- ಎನ್ನ ನುಡಿ ಪುಸಿಯಲ್ಲ (ಸ-೪೭-೫)
- ಮುಸುಕುವುದು ವಿಶ್ವಾಸಘಾತಕಗೆ ನರರೋಗ ಪುಸಿಯಲ್ಲವಿದು ಕೇಳಿ ಜನರು
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೩)
- ಜಗದಂತರ್ಯಾಮಿ ಎಂತೆಂದು ನಿನ್ನ ನಿಗಮ ಸಾರುವ ಮಾತು ಪುಸಿಯೆ ಕೋನೇರಿ ತಿಮ್ಮ
- ಜಗದಂತರ್ಯಾಮಿ ಎಂತೆಂದು (ಬೆ-೫೮-೫)

**೨೭೮೬. ಪುಸಿಗ** (ಸುಳ್ಳು ಹೇಳುವವನು) - ಹಸುಮಗುವನು ಕಂಡು ಮುದ್ದಿಸಲೊಲ್ಲದೆ ಪುಸಿಗ ಕಳ್ಳನೆಂದು ಕಟ್ಟುವಿರಿ
- ಇಂದು ಸೈರಿಸಿರಿ ಶ್ರೀಕೃಷ್ಣನ (ಬೆ-೧೦೫-೨)

**೨೭೮೭. ಪುಸ್ತಕ** - ಪುಸ್ತಕವ ಬಿಚ್ಚಿ ಪೌರಾಣ ಶಾಸ್ತ್ರಂಗಳ ವಿಸ್ತರಿಸಿ ಹರಿಯ ಕಲ್ಯಾಣ ಗುಣ ಚರಿತೆಯನು
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೧)

**೨೭೮೮. ಪುಳು** (ಹುಳು) - ಇಂಬಿಲ್ಲವಿದರೊಳು ಇದು ಪುಳುವಿನ ಕೊಂಡ ಇಂಥ ಡಂಭಕ ನನಗೆ ಇನ್ನೇತರ ಕುಲವೊ
- ಏತರವನೆಂದು ಪೇಳಲಿ (ಬೆ-೧೨೨-೩)

**೨೭೮೯. ಪೂ/ಪೂವು** (ಹೂವು) - ಕೆರೆ ಕಟ್ಟೆ ಪೂದೋಟಗಳ ರಚಿಸುವನೆ ದ್ರೋಹಿ
- ಸಹಜವಿದು ಈ ನುಡಿಯು (ಬೆ-೧೪೯-೩)
- ಸಿಂಧುರಗಮನೆಯರ ಸಿರಿಮುಡಿಯೊಳಿಪ್ಪ ಪೂಗಂಧವಾಸಿಸುವ ನಾಸಿಕದಿಂದ್ರಿಯಕೆ
- ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-೨)
- ಅನವರತ ನಾಭಿಯೊಳು ಶತಪತ್ರವಿಹಗೆ ಮಿಕ್ಕಿನ ಪೂವ ಮುಡಿಸಲೆಂತ್ಯೆ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೧)

**೨೭೯೦. ಪೂಗಣೆ** (ಮನ್ಮಥನ ಬಾಣ) - ಪೂಗಣೆಯ ಗೆಲಿಯದಿಹ ನರ ಗೋಖುರ

– ಎನ್ನ ನುಡಿ ಪುಸಿಯಲ್ಲ (ಸ–೪೭–೩)
೨೬೯೧. ಪೂಜಿಸು – ಅಂತರ್ಯದ ಸಂತತ ಭೇರಿ ಶಬ್ದವ ಕೇಳಿ ಅಂತರಾತ್ಮ ಲಿಂಗವ ಪೂಜಿಪರ ತೋರು
– ನಿಜವರಿತು ಲಿಂಗವನು ಪೂಜೆ ಮಾಡುವರು (ಸ–೧೪೨–೪)
– ಶೇಷನನ್ನು ಪೂಜಿಸೆಂದ ಶ್ರೀಶ ಬಾಡದ ಆದಿಕೇಶವ
– ಬಾಲಕನೆಂದೆತ್ತಿಕೊಂಡೆನೆ (ಸ–೧೮೩–೩)
– ಆತನೇ ಪರಮಾತ್ಮ ಪರತತ್ತ್ವ ಪ್ರಣವ ನೆಂದರಿತು ಪೂಜಿಸಬಾರದೆ
– ಆತನೇ ಪರಮಾತ್ಮ ಪರತತ್ತ್ವ (ಬೆ–೭೪–ಪ)
– ಕುರಿಕೋಣ ನೈವೇದ್ಯ ಧೂಪ ದೀಪಗಳಿಂದ ಪರಮ ಭಕ್ತಿಯ ಮಾಡಿ ಪೂಜಿಸುವರಯ್ಯ
– ಕಲಿಯೇರಿ ಬಂತು (ಬೆ–೧೩೦–೧೦)
೨೬೯೨. ಪೂಜೆ – ನಿಜವರಿತು ಲಿಂಗವನು ಪೂಜೆ ಮಾಡುವರಾರು
– ನಿಜವರಿತು ಲಿಂಗವನು ಪೂಜೆ ಮಾಡುವರು (ಸ–೧೪೨–ಪ)
– ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು
– ವರಕವಿಗಳ ಮುಂದೆ ನರಕವಿಗಳ ವಿದ್ಯೆ (ಸ–೨೩೨–ಪ)
– ಹರಿಯ ಪೂಜೆ ಮಾಡದವನ ಜನುಮ ವೇತಕೆ
– ಸತ್ಯವಂತರ ಸಂಗವಿರಲು (ಬೆ–೧೨೪–೧)
– ಮೊದಲು ನಿನ್ನ ಪದ ಪೂಜೆ ಮುದದಿ ಮಾಡುವೆನ್ನೆ ನಾನು
– ಈಶ ನಿನ್ನ ಚರಣ ಭಜನೆ (ಬೆ–೬೫–೫)
– ಎಕ್ಕನಾತಿ ಎಲ್ಲಮ್ಮ ಮಾರಿ ದುರ್ಗಿ ಚೌಡಿ ಯರ ಅಕ್ಕರೆಯಿಂದಲಿ ಪೂಜೆಮಾಡಲೇಕೆ
– ದಾನ ಧರ್ಮವ ಮಾಡಿ ಸುಖಿಯಾಗು (ಬೆ–೧೪೯–೧)
– ಲಿಂಗ ಪೂಜೆಯ ಬಲ ನಿಶ್ಚಿಂತನಾಗಿಹ ಬಲ ಹಿಂಗದೆ ಹರನು ಬಾಗಿಲ ಕಾಯ್ದ ಬಲವು
– ಆವ ಬಲವಿದ್ದರೇನು (ಬೆ–೧೩೩–೪)
– ಭವಿ ಮಾಡಿದ ಲಿಂಗ ಬಚ್ಚಿಟ್ಟು ಪೂಜೆಯ ಗೊಂಬ ಕವಿಗಳು ಶರಣರು ಕೇಳಿ ಸಭೆಯೊಳು
– ಶಂಕರನಾರಾಯಣ ಬಿಡು (ಬೆ–೧೭೫–೧)
– ವೇದೋಕ್ತ ಪೂಜೆಯಲಿ ತೃಪ್ತಿಪಡಿಸದಿರೆ ಆದುದೇನು ಅದರಿಂದೆ ಫಲವಾವುದು
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೬)
– ತಿಳಿದುದಿಲ್ಲವು ಷೋಡಶೋಪಚಾರದ ಪೂಜೆಗಳಲೊಂದು ಪರಿಯಾದರೂ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೫)
– ಹರಿ ಹರರ ಪೂಜೆಗಳು ಹಗರಣಗಳಾದವು ಉರಿಮೋರೆ ಚಾಮುಂಡಿ ಶಕ್ತಿಗಳಿಗೆ
– ಕಲಿಯೇರಿ ಬಂತು (ಬೆ–೧೩೦–೧೦)
– ಲೋಕೇಶನಿಗೆ ಒಲಿದು ಪೂಜೆಗೊಂಬುವ ಪಾದ
– ಭಜಿಸಿ ಬದುಕೆಲೊ ಮನುಜ (ಬೆ–೩೫–೧)
೨೬೯೩. ಪೂತನಿ – ಉರೆ ಪೂತನಿಯ ಹೀರಿ ಮಾವ ಕಂಸನ ಕೊಂದ ಸಿರಿಯಾದಿಕೇಶವನ ವೆಂಬ ಮದ ಸೊಕ್ಕಿದಾನೆ
– ಆನೆ ಬರುತಾದೆ ನೋಡಮ್ಮ (ಸ–೧೫–೫)
– ವನದೇಶದಿ ಧುರಕೆ ನಿಂದವನೆಂದೆನೆ ಪೂತನಿ ಮೊಲೆಯ ಹರಿದು ಕೊಂದವನೆಂದು ಸ್ತುತಿಸಿದೆ ನಲ್ಲದೆ
– ನಿನ್ನ ನಾನೇನೆಂದೆನೊ ರಂಗಯ್ಯ (ಬೆ–೯೧–೨)
– ಪೂತನಿಯ ಮೈಯ ಸೋಕಿದನೆ ಮಹಾ ಘಾತದ ಮೊಲೆಯುಂಡು ತೇಗಿದನೆ
– ಗೋವಿಂದ ಹರಿ ಗೋವಿಂದ (ಬೆ–೫೬–೪)
– ಶಕಟ ಕುಕ್ಕುಟ ಧೇನುಕಾಸುರರ ಪೂತನಿಯ ಬಕ ವತ್ಸಹಕ ವೃಷಾಸುರ ಮುಖ್ಯರ
– ನೋಡಯ್ಯ ನಿನ್ನ ದಾಸರ (ಬೆ–೮೫–೮)
೨೬೯೪. ಪೂಬಾಣಜನಕ (ಕೃಷ್ಣ) – ಕಾಣುತಲೆ ಕರೆಕರೆದು ಕೊಟ್ಟೆಯೈ ನೀನು ಪೂಬಾಣಜನಕನೆ ರಾಮ ಶರಣೆಂಬೆನು
– ನೋಡಯ್ಯ ನಿನ್ನ ದಾಸರ (ಬೆ–೮೫–೬)

೨೭೯೫. ಪೂಮಳೆ (ಹೂವಿನ ಮಳೆ) - ಅರಸಿ ಜಯಜಯವೆಂದು ದ್ರೌಪದಿಯ ಸಿರಿ ಮುಡಿಗೆ ಸುರಿಸಿದರು ಪೂಮಳೆಗಳ
- ವಾಸುದೇವಾಯ ನಮೋ (ಬೆ-೯೦-೧೩)
೨೭೯೬. ಪೂಮಾಲೆ - ಕಟ್ಟಿದ ಪೂಮಾಲೆ ಕಸ್ತೂರಿ ನಾಮದ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೨)
೨೭೯೭. ಪೂರ್ಣ - ತಿರುಮಣ್ಣು ಶ್ರೀಚೂರ್ಣ ಪೂರ್ಣ ದ್ವಾದಶನಾಮ ಸಿರಿತುಳಸಿ ವನಮಾಲೆ ಕೊರಳಿನೊಳಗಿಪ್ಪವರ
- ಮುಟ್ಟಬೇಡಿ ಮುಟ್ಟಬೇಡಿ (ಬೆ-೨೬-೧)
- ಬಲ್ಲವರೆನಿಪರು ಬಲ್ಲವರರಿಯರು ಫುಲ್ಲ ಲೋಚನ ಪೂರ್ಣಬ್ರಹ್ಮನೆಂಬುದನು
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-ಪ)
- ಜೊಂಪುಮದನನ ಪೂರ್ಣಶಕ್ತಿ ಬೊಂಬೆ ಒಳ್ಳೆ ಸಂಪಿಗೆಯ ಮುಡಿಗಿಟ್ಟ ಶಾರದಾಂಬೆ
- ವರವ ಕೊಡು ಎನಗೆ ವಾಗ್ದೇವಿ (ಬೆ-೨_೨)
೨೭೯೮. ಪೂರ್ವ (ಹಿಂದಿನ) - ಧುರದೊಳಗೆ ಪೂರ್ವವೈರಿಯು ಶಿಖಂಡಿಯು ತೋರಿ ಸರಳಮಂಚದ ಮೇಲುಪಾಯದಲಿ ಮಲಗಿಸಿದೆ
- ನೀನಾವ ಬಾಂಧವನೊ (ಬೆ-೭೮-೨)
- ಆರಿಗಾದರು ಪೂರ್ವಕರ್ಮಬಿಡದು ವಾರಿಜ ಭವಭವರನು ಕಾಡುತಿಹುದು
- ಆರಿಗಾದರು ಪೂರ್ವಕರ್ಮಬಿಡದು (ಬೆ-೧೦೮-ಪ)
- ಆರಿಗಾದರು ಪೂರ್ವಕಲ್ಪನೆಯು ತಪ್ಪದು ಬೇರೆ ಬಯಸಿದರೆ ಬರಲರಿಯದಯ್ಯ
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೧೯-)
- ಮಿಳಿತ ಮಾನಿಸ ಪಿಂಡ ಪೂರ್ವಕರ್ಮ ದಿಂದ ನೆಲಕೆ ಬೀಳಲು ಅದು ಸಲಹಿ ರಕ್ಷಿಪುದೆ
- ಮಗನಿಂದೆ ಗತಿಯುಂಟೆ (ಬೆ-೧೪೫-೨)
- ಹಗೆಯರು ಮುನ್ನಿನ ಪೂರ್ವದ್ವೇಷವ ತಾಳಿ ಮಿಗೆ ಸ್ನೇಹ ಮೆಚ್ಚಿಸಿ ಕುರುಪತಿಗೆ
- ಬಂದಿದೆ ದೂರು ಬರಿದೆ (ಬೆ-೮೬-೧)
- ಬಡತನವು ಸಾಕೆಂದು ಸಿರಿತನವ ಬಯಸಿ ದರೆ ಪಡೆದದ್ದು ಪೂರ್ವದಲಿ ಬೆನ್ನಬಿಡದು
- ತನ್ನ ಪ್ರಾಪ್ತಿಯ ಫಲವ (ಬೆ-೧೧೨-೨)
೨೭೯೯. ಪೂರ್ವಜನ್ಮ - ಪೂರ್ವಜನ್ಮದಲಿ ನಾ ಮಾಡಿದಾ ಭವದಿಂದ ಉರ್ವಿಯೊಳು ಜನಿಸಿದೆನೊ ಕೃಷ್ಣಾ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮_ಪ)
೨೮೦೦. ಪೂರ್ವಾಚಲ/ಪೂರ್ವಾದ್ರಿ - ಬಿಸಿಗದಿರ ಪೂರ್ವಾಚಲವನಡರಿ ಬಂದ
- ಸಿಂಗರದ ಸಿರಿಧರನೆ (ಬೆ-೧೬೭-೧)
- ಪೂರ್ವಾದ್ರಿಯೊಳು ಪ್ರಭಾಕರನುದಿಸೆ ಹರುಷದಲಿ
- ಪೂಸರನ ಜನಕನೇ (ಬೆ-೧೬೮-೧)
೨೮೦೧. ಪೂಸರ (ಮನ್ಮಥ) - ಪೂಸರನ ಜನಕನೇ ಶತಕೋಟಿತರಣಿಪ್ರಕಾಶ ಅಗಣಿತ ಕೋಟಿಬ್ರಹ್ಮಾಂಡನಾಯಕನೆ
- ಪೂಸರನ ಜನಕನೇ (ಬೆ-೧೬೮-ಪ)
೨೮೦೨. ಪೂಸಿಕೊಳ್ಳು - ರಕ್ತಕುಸುಮ ಗಂಧಮಾಲೆ ಕಸ್ತೂರಿಯನು ಪೂಸಿಕೊಂಡು
- ಎಷ್ಟು ಪ್ರೀತಿಯೊ ಮನಕೆ (ಸ-೫೨-೩)
೨೮೦೩. ಪೂಸು (ಸವರು) - ತನುವಿನಾ ಪರಿಮಳವು ಘಮಘಮಿಪನಿಗೆ ಸುಚಂದನ ವೆಂತು ನಾ ಪೂಸಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೧)
೨೮೦೪. ಪೃಥ್ವಿ - ಪೃಥ್ವಿಯ ತಲೆಯನು ಪರೆಮಾಡಿ ತಾಳಿದಳುತ್ಯಾನಮಮ್ಮನ ತಂದೆಯ ಮೆಲುವನ
- ನಮಗೆಲ್ಲ ಮನೆಗಳಯ್ಯ (ಸ-೧೩೨-೨)
- ಅರ್ಥದಾಸೆಯಲಿ ಪೃಥ್ವಿಯೊಳಗೆ ಸುತ್ತಿ ಮತ್ತನಾಗಿ ಬಲು ಕೃತ್ಯಗಳನು ಮಾಡಿ
- ವ್ಯರ್ಥವಾಯಿತಲ್ಲ ಜನ್ಮ ಸಾರ್ಥಕಾಗಲಿಲ್ಲ (ಸ-೨೩೧-ಅ)
- ಪೃಥ್ವಿಯೊಳಗೆ ಕಾಗೆನೆಲೆಯಾದಿಕೇಶವಗೆ ಮರ್ತ್ಯದೊಳನ್ಯದೇವರು ಸರಿಯುಂಟೆ
- ಹೆತ್ತ ತಾಯಿಗಿಂತ ಅತ್ಯಧಿಕ (ಬೆ-೧೨೮-೩)
- ಸತ್ಯಕ್ಕೆ ಕುರುಹೇನು ಪೃಥ್ವಿಗೆ ಕಡೆಯೇನು

- ಬಲ್ಲವರು ಪೇಳರ್‍ಯೆ (ಬೆ-೧೬೩-೩)
- ಪೃಥ್ವಿಯೊಳು ಕಾಗಿನೆಲೆಯಾದಿಕೇಶವ ನಿನ್ನ ಭಕ್ತಿಯಿಲ್ಲದ ನರಗೆ ಮುಕ್ತಿಯಹುದೆ
- ಬಾಯಿ ನಾರಿದ ಮೇಲೆ (ಬೆ-೧೪೨-೩)
- ನೆಗ್ಗಿದುವು ನಿಜ ಕುಲಾದ್ರಿಗಳಲಿ ಭಾನುವಿನ ಕಿರಣ ನುಗ್ಗಿ ಪೃಥ್ವಿಯೊಳು ಪಸರಿಸಿತು
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೨)
- ಪೃಥ್ವಿಗೆ ಸದ್ಗುರುವಾಗಬೇಕಾದರೆ ಶಿವ ಶಿವ ಎನ್ನಿರೊ
- ಶಿವ ಶಿವ ಶಿವ ಎನ್ನಿರೊ (ಬೆ-೩-೭)

೨೮೦೫. ಪೆಂಪು - ಸಾಕಾರ ರೂಪ ಸರ್ವೋತ್ತಮ ನೀ ಕರುಣಾಕರನೆಂಬ ಪೆಂಪುಂಟಾದಡೀಗೆನ್ನ
- ಕಡಹಾಯಿಸೊ ಕಮಲಲಲೋಚನನೆ (ಬೆ-೬೨-೧)

೨೮೦೬. ಪೆಗಲು - ವ್ಯಗಧರವ್ಯೆರಿಯ ಪೆಗಲೇರಿ ಬರುವಂಥ ಜಗದಧಿಪತಿಯಾದನ
- ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೧)
- ಪೆಗಲೊಳು ಕೊಂಬು ಕೋಲನೆ ಪಿಡಿದು ಗೊಲ್ಲರೊಡಗೂಡಿ ನಮ್ಮೆಲ್ಲರ ಗೋವುಗಳ ಕಾಯ್ದ
- ಮಗುವು ಕಾಣೀರಯ್ಯ (ಸ-೧೯೯-೪)

೨೮೦೭. ಪೆಟ್ಟಿಗೆ - ಅಷ್ಟು ಇಷ್ಟು ಚಿಲ್ಲರೆ ಒಡವೆ ಪೆಟ್ಟಿಗೆಯಲಿ ತುಂಬಿತ್ತು
- ಒಡವೆ ಹೋಯಿತು ಮನ ಧೃಡವಾಯಿತು (ಸ-೬೯-೩)

೨೮೦೮. ಪೆಡೆ - ಶ್ರೀಲೋಲನೆನಿಪ ಪಟ್ಟದಾನೆ ದುಷ್ಟ ಕಾಳಿಂಗನ ಪೆಡೆಯ ಮೆಟ್ಟು ತುಳಿದಾನೆ
- ಆನೆ ಬಂದಿದೆ ಇದಿಗೋ ಮದ್ದಾನೆ (ಸ-೧೪-೨)
- ಆ ಕಾಳಿಂಗನ ಪೆಡೆಯ ತುಳಿದು ಜಡಿಯ ಲವನ ಮಡದಿಯರು ಬೇಡಿಕೊಳ್ಳೆ ಕಡಲಿಗಟ್ಟಿ
- ಮಗುವು ಕಾಣೀರಯ್ಯ (ಸ-೧೯೯-೩)

೨೮೦೯. ಪೆಣ್/ಪೆಣ್ಣು - ಗಟ್ಟಿಂಯಾಗಿ ಮುನಿಪೆಣ್ಗೆ ಕೊಟ್ಟಿದ್ದ ಶಾಪವನು ಬಿಟ್ಟೋಡಿಸಿದ ನಾವನು
- ಆತನೇ ಪರಮಾತ್ಮ ಪರತತ್ತ್ವ (ಬೆ-೭೪-೨)
- ಸಣ್ಣ ಸೀರೆಯ ನಲುವೆಣ್ಣುರೂಪಾದನ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ (ಬೆ-೮೦-೧)
- ಮಿಂಡಿ ಪೆಣ್ಣನು ಸಭೆಯಲ್ಲಿ ಸೀರೆ ಸುಲಿಯಲು ಗಂಡರ್‍ಯೆವರು ನೋಡಿ ಏನು ಮಾಡುತಿರ್ದರಯ್ಯ
- ಬಂಧುಗಳದಾರಿಗಾರಿದ್ದರೇನು (ಸ-೧೭೩-೨)
- ದುರ್ಗಂಧ ಪೆಣ್ಣಿಗೆ ಚಂದನ ಕಂಪನಿತ್ತಂಥ ಬಾಂಧವರೊಳಗಿರಿಸು ಕಂಡೆಯ ಎನ್ನನು
- ಶೇಷಶಯನ ನಿನ್ನ ಭಾಗವತರ (ಬೆ-೨೭-೧)

೨೮೧೦. ಪೆಣ - ಬಿಟ್ಟು ಪ್ರಾಣವು ಪೋಗೆ ಪೆಣನೆಂದು ಮೂಲೆಯೊಳು ಕಟ್ಟಿ ಕುಳ್ಳಿರಿಸಿ ಹೊಟ್ಟೆಯ ಹೊಯ್ದುಕೊಂಡಳುತ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೧)
- ಪೆಣನ ಭೋಜನಮಾಡಿದವರ ವಾಸವ ಪೊಕ್ಕನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೩)

೨೮೧೧. ಪೆರತು - ತರಣಿ ಶತಕೋಟಿತೇಜನ ಮುಂದೆ ಹೇಗೆ ನಾ ಪೆರತೊಂದು ದೀಪವಿಡಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೨)

೨೮೧೨. ಪೆರು (ಹಡೆ, ಹೆರು) - ಗಂಡುವೆಣ್ಣಿನ ರೂಪುವೆತ್ತು ರಾಜಿಸುವವನು
- ಸಿಂಗರದ ಸಿರಿಧರನೆ (ಬೆ-೧೬೭-೩)
- ಮಂದೆಗಾಯ್ದವನ ಮನ್ಮಥನ ಪೆತ್ತವನ ತಂದೆ ಶ್ರೀ ಬಾಡದಾದಿಕೇಶವನ
- ಕರೆತಾರೆ ಕಾಮಿನಿಕಮಲಜಪಿತನ (ಬೆ-೯೩-೫)
- ಜಲಜಸಂಭವನ ಪೆತ್ತವನಾರು
- ಆತನ ಪಾಡುವೆ ಅನವರತ (ಬೆ-೭೦-೨)
- ತಾಮರಸಾಂಘ್ರಿಯಿಂ ಹೇಮಗರ್ಭದಲಿದ್ದ ವ್ಯೋಮಗಂಗೆಯ ಪೆತ್ತೆ ಗೋವಿಂದ

– ಪರಮಪುರುಷ ಹರಿ ಗೋವಿಂದ
(ಬೆ–೩೯–೫)
– ವಾಣಿಯರಸನ ಪೆತ್ತ ವೈಕುಂಠಪತಿ ನೀನು
– ಏನೆಂದು ಕೊಂಡಾಡಿ ಸ್ತುತಿಸುವೆನೊ
(ಬೆ–೬೩–೨)
– ಬಲ್ಲವರು ಪೇಳಿರಿ ಲೋಕದ ಈ ಪದನು ಫುಲ್ಲಶರನನು ರಂಗ ಪೆತ್ತ ಮಹಿಮೆಯನು
– ಬಲ್ಲವರು ಪೇಳರಿ (ಬೆ–೧೬೪–ಪ)
– ಗಂಗೆಯನು ಉಂಗುಟದಿ ಪೆತ್ತ ಮೂರುತಿಯೆ
– ಸಿಂಗರದ ಸಿರಿಧರನೆ (ಬೆ–೧೬೭–ಪ)
– ದಶದಿಕ್ಕಿನೊಳು ಘಂಟೆ ಘಣಿರೆಂದು ಬರುತ್ತಿದೆ ಕುಸುಮಶರನ ಪೆತ್ತ ಮದ್ದಾನೆ
– ಆನೆ ಬರುತಾದೆ ನೋಡಮ್ಮ (ಸ–೧೫–೨)
– ಮದವೆತ್ತ ರಕ್ಕಸರು ಮಹಿಯೊಳಗೆ ಹೆಚ್ಚಲು ತ್ರಿದಶಾಂತ ನಡನಡನೆ ನಡುಗುತಿರಲು
– ನೋಡಯ್ಯ ನಿನ್ನ ದಾಸರ (ಬೆ–೮೫–೧೦)
– ಮಾಯಕಾರನು ಒಬ್ಬ ಕಾಯ ಬಡಲಿಗನೊಬ್ಬ ಕಾಯಗಿರಿವೆತ್ತವರು ಮೂವರವರು
– ಮೂವರೇರಿದ ಬಂಡಿ (ಬೆ–೧೬೦–೨)
– ಮುತ್ತಯ್ಯನ ತಾಯ ಪೆತ್ತ ದೇವನ ಎನ್ನ ಒತ್ತಿಗೆ ಕರೆದು ತಾರೆ ಹೇ ಸಖಿಯೆ
– ತೋರೆ ಬೇಗನೆ ಸಖಿ (ಬೆ–೯೪–೨)

**೨೮೧೩. ಪೆರು (ಪಡೆ, ಹೊಂದು)**– ಘೋರ ತನವೆತ್ತ ತ್ರಿಪುರದ ಕೀಲ ಪರಿದ ಮದನಾರಿಸಖ ಬುದ್ಧನೇ ಶರಣೆಂಬೆನು
– ನೋಡಯ್ಯ ನಿನ್ನ ದಾಸರ (ಬೆ–೮೫–೯)

**೨೮೧೪. ಪೆರ್ಮುಡಿ (ದೊಡ್ಡ ತುರುಬು)** – ಸಡಗರದಿಂದ ವಾರಿಧಿಯ ದಾಂಟಿ ಪೆರ್ಮುಡಿಯ ಮಾಣಿಕವ ರಾಘವಗಿತ್ತ ಹನುಮ
– ಅರಸಿನಂತೆ ಬಂಟನೊ (ಬೆ–೫_೧)

**೨೮೧೫. ಪೆಸರ್/ಪೆಸರು** – ದುಷ್ಕೃತದಿ ಸುತನ ಪೆಸರ್ಗೊಂಡವನ ಕಾಯ್ದೆಯೊ ತ್ರಿವಿಕ್ರಮಾಂಕಿತ ವೀರನಾರಾಯಣಾ
– ನಾರಾಯಣಾ ನಮೋ (ಬೆ–೫೧–೨)
– ಜಲಧಿಯನ್ನು ಪೀರ್ದ ಮುನಿಯ ಜನನಿ ಪೆಸರ್ಗೆ ಶಿವಿಯನಾಂತ
– ನಂಬಬೇಡಿ ಸಿರಿಯು ತನ್ನದೆ
(ಬೆ–೧೧೫–೧)
– ವ್ಯಾಸನ ಜನನಿಯ ವಾಸನೆ ತಾಳ್ದನು ದೇಶದೊಳಗೆ ಬಲು ಪೆಸರುಳ್ಳವನು
– ಈತನೇನೆ ನಿನ್ನ ಮಗನು (ಸ–೩೮–೧)
– ನಿಶಿವೆಸರಸುರನ ಅಸುವ ತೊಲಗಿಸಿದೆ ಕುಸುಮಶರನ ಪಿತ ಗೋವಿಂದ
– ಪರಮಪುರುಷ ಹರಿ ಗೋವಿಂದ
(ಬೆ–೩೯–೧)
– ತೋಯಜವೆಂಬ ಪುಷ್ಪದ ಪೆಸರವರೊಳು ತಾಯ ಸೊಸೆಗೆ ಮಕ್ಕಳಿತ್ತವರೊಳು
– ಶೇಷಶಯನ ನಿನ್ನ ಭಾಗವತರ
(ಬೆ–೨೭–೨)
– ಹನ್ನೆರಡನೆಯ ತಾರೆಯ ಪೆಸರಾಕೆಯ ಕನ್ನೆಯಯ್ಯನ ಮನೆಯ
– ರಾಜವದನೆ ಸುರರಾಜನ (ಬೆ–೯೭–೩)
– ವರುಷವೈದರ ಪೆಸರವನ ತಾಯನುಜನ ಧರಿಸಿದಾತನ ಸಖನ
– ರಾಜವದನೆ ಸುರರಾಜನ (ಬೆ–೯೭–೨)
– ಸುರರ ವಾದ್ಯದ ಪೆಸರವನ ಬಸುರಲಿ ಬಂದ ಉರಗನತ್ತೆಯ ಮಗನ
– ಏಣನಯನೆ ಏಣಭೋಜಮಧ್ಯಳೆ
(ಬೆ–೯೯–೪)
– ಚೆನ್ನಾಗಿ ಧರಣಿಯನು ತಂದು ಸಲೆ ರಕ್ಷಿಸಿದೆ ಹನ್ನೆರಡು ಪೆಸರವನೆ ಶರಣೆಂಬೆನು
– ನೋಡಯ್ಯ ನಿನ್ನ ದಾಸರ (ಬೆ–೮೫–೩)
– ಗಿಳಿ ನಾಯಿಯ ಪೆಸರಿನವರೊಳು ಮುಗಿಲ ಹೊಳೆಯ ಹೊಟ್ಟೆಯಲಿ ಪುಟ್ಟಿದವರೊಳು
– ಶೇಷಶಯನ ನಿನ್ನ ಭಾಗವತರ
(ಬೆ–೨೭–೩)
– ಬಪ್ಪುವ ಎಂಟನೆಯ ನಾಮದ ಪೆಸರಿನೊಳ್ ಇಪ್ಪ ಕಡೆಯ ಬೀಡಲಿ
– ಏಣನಯನೆ ಏಣಭೋಜಮಧ್ಯಳೆ
(ಬೆ–೯೯–೨)

**೨೮೧೬. ಪೆಸರುಗೊಳ್ಳು (ನಾಮಸ್ಮರಣೆ ಮಾಡು)**
– ಪೆಸರಗೊಳುತ ಬಂದು ಮೊರೆಹೊಕ್ಕ ವಿಭೀಷಣಗೆ ಶಶಿ ರವಿಪರ್ಯಂತ ಪಟ್ಟಗಟ್ಟಲಿಲ್ಲವೆ
– ಬ್ರಹ್ಮಲಿಖಿತವ ಮೀರಿ ಬಾಳ್ವರು
(ಬೆ–೨೫–೪)

– ಪೆಸರುಗೊಂಡರೆ ಮಗನ ಅಜಮಿಳನ ಸಲಹಿದೆಯೊ ವಸುದೇವನಸುತನೆ ಸಲಹೊ
– ವಾಸುದೇವಾಯ ನಮೋ (ಬೆ–೯೦–೬)
– ಬೆಟ್ಟದಾತ್ಮಜೆ ಬೆನಕ ಪೆಸರ್ಗೊಂಡು ತನ ನಾಮ ಗುಟ್ಟಿನಲಿ ನೆನೆಸಿದುದಾವನು
– ಆತನೇ ಪರಮಾತ್ಮ ಪರತತ್ತ್ವ (ಬೆ–೭೪–೨)

೨೮೧೭. ಪೆಸರ್ವಕ್ಕಿ (?)– ಎಸೆವ ರೋಪಣಾಸಿ ಪೆಸರ್ವಕ್ಕಿ ಝೇಂಕರ ಮಾಡೆ
– ಸಿಂಗರದ ಸಿರಿಧರನೆ (ಬೆ–೧೬೭–೧)

೨೮೧೮. ಪೇರ್ (ದೊಡ್ಡ) – ಜಗವರಿಯೆ ಪೇರುರವಿರಿದ ಪ್ರಹಲ್ಲಾದವರದ ಅಹೋಬಲ ನರಸಿಂಹನೆ
– ಏನು ಕಾರಣ ಬಾಯ ತೆರೆದಿ (ಬೆ–೧೫೫–೧)

೨೮೧೯. ಪೇರಣಪುರ (ದ್ವಾರಕೆ?) – ಪೇರಣ ಪುರಪತಿ ಸಿರಿ ಭೂಭಾರೋತ್ತಾರಣ ಗುಣನಿಧಿ ಗೋವಿಂದ
– ಪರಮಪುರುಷ ಹರಿ ಗೋವಿಂದ (ಬೆ–೩೯–೮)

೨೮೨೦. ಪೇಳು – ಏನೆಂದು ಪೇಳಲಿ ಎಲ್ಲ ದಿಕ್ಕುಗಳಲಿ ತಾನೇ ತಾನಾಗಿ ಮದ ಸೊಕ್ಕಿದಾನೆ
– ಆನೆ ಬರುತಾದೆ ನೋಡಮ್ಮ (ಸ–೧೫–೮)
– ಏನು ಪೇಳಲೇನು ಎನಗೆ ಹೀನ ಬಿಡದು ಮುನ್ನ
– ವ್ಯರ್ಥವಾಯಿತಲ್ಲ ಜನ್ಮ ಸಾರ್ಥಕಾಗಲಿಲ್ಲ (ಸ–೨೩೧–೨)
– ಕಾಯಬೇಕು ಸುಗ್ರೀವನನೆನುತಲಿ ತೋಯಜಾಕ್ಷಗೆ ಪೇಳಿ
– ಎಷ್ಟು ಪೊಗಳಲಿ ನಾನು (ಸ–೫೩–೧)
– ಚಿತ್ರದ ಹೂವಿನ ಹವಳ ಕಾಯಾಗುವ ಅರ್ಥವು ತಿಳಿದು ಪೇಳಿ
– ಮುತ್ತುಗಳ ಹಣ್ಣು ಕಾಯಾದ ಬಳಿಕ (ಸ–೨೦೯–೧)
– ಎನ್ನ ಮಾತನು ಕೇಳು ಮುನಿಸು ಕೃತ್ಯವ ಸೀಳು ಇನ್ನ್ಯಾಕೆ ಯೋಚನೆ ಫಲವ ಪೇಳು
– ಯಾಕೆಲೊ ರಂಗ ನಿನಗಿಂತ ನಟನೆಯ ಮಾತು (ಸ–೨೧೬–೩)
– ಮೂರು ರೂಪವ ತಾಳಿ ಮಹಾಯೋಗ್ಯರುಗಳಿಗೆ ಸಾರ ತತ್ತ್ವವ ಪೇಳ್ದೆ
– ಎಷ್ಟು ಪೊಗಳಲಿ ನಾನು (ಸ–೫೩–೩)
– ದ್ರೋಹಿಗಳ ವಿವರವನು ನಾ ಪೇಳ್ವೆನಯ್ಯ
– ದ್ರೋಹಿಗಳ ವಿವರವನು ನಾ ಪೇಳ್ವೆನಯ್ಯ (ಸ–೧೨೩–ಪ)
– ಪೇಳಲೆನ್ನಳವೆ ಬಾಡದಾದಿ ಕೇಶವನೊಲವಿ ನಾಳು ಸಂಗಡ ಬರಲು ಆವ ಭಯವಿಲ್ಲ
– ಪಥ ನಡೆಯದಯ್ಯ (ಬೆ–೯_೩)
– ಶರಧಿಯೊಳಿರುತಿರ್ಪ ಚರಜೀವಗಳ ಗುಣಾಕರಿಸಿ ಇಷ್ಟೆಂದು ಪೇಳಲುಬಹುದು
– ಕ್ಷಮಿಸುವುದೆನ್ನ ತಪ್ಪುಗಳ (ಬೆ–೬೧–೧)
– ಆಢಕದೊಳಗಂಬರವನಳೆದು ಲೆಕ್ಕ ಕೂಡಿದ ಮಿತಿಯ ಪೇಳಲುಬಹುದು
– ಕ್ಷಮಿಸುವುದೆನ್ನ ತಪ್ಪುಗಳ (ಬೆ–೬೧–೨)
– ಏತರವನೆಂದು ಪೇಳಲಿ ಜಗನ್ನಾಥ ಮಾಡಿದ ನನ್ನ ನರರೂಪಕಾಯವ
– ಏತರವನೆಂದು ಪೇಳಲಿ (ಬೆ–೧೨೨–ಪ)
– ಇಂಥಿಂಥವರಿಗೆಲ್ಲ ಈ ಪಾಟವಿರಲಾಗಿ ಭ್ರಾಂತ ಮನುಜರಿಗೆ ಪೇಳಲಿನ್ನೆಷ್ಟು
– ಆರು ಸಮಯಕ್ಕೊದಗಲಿಲ್ಲ (ಬೆ–೩೨–೫)
– ದೇವ ಜಾನಕಿರಮಣ ಪೇಳು ರಘುಪತಿಯೆ
– ಆವ ಸಿರಿಯಲಿ ನೀನು ಎನ್ನ ಮರೆತೆ (ಬೆ–೬೭–)
– ಏನಿದೆತ್ತಣ ಬಯಕೆ ಎಲೊ ಮಂಕುಜೀವ ನೀನು ಅರಿತರೆ ಪೇಳು ನಿಜವನೆನಗೆ
– ಏನಿದೆತ್ತಣ ಬಯಕೆ (ಬೆ–೧೩೬–ಪ)
– ಕೊಟ್ಟು ಪೇಳುವ ದಾತ ಅವ ಹೀನಜಾತ
– ಅಹುದಾದರಹುದೆನ್ನಿ (ಬೆ–೧೩೧–೫)
– ನ್ಯಾಯವಾದರೆ ದುಡುಕು ನಿನ್ನದೊ ಮತ್ತನ್ಯಾಯವಾದರೆ ಪೇಳುವರಾರು
– ನನ್ನಿಂದ ನಾನೇ ಜನಿಸಿ ಬಂದೆನೆ (ಬೆ–೫೪–೫)
– ಮಹಿಯೊಳಗೆ ಪೇಳುವೆನು ವಿಹಿತವಾಕ್ಯಗಳ
– ಸಹಜವಿದು ಈ ನುಡಿಯು (ಬೆ–೧೪೯–ಪ)
– ಮರೆಯ ಮಾತೇಕಿನ್ನು ಅರಿತು ಪೇಳುವೆನು
– ತೊರೆದು ಜೀವಿಸಬಹುದೆ (ಬೆ–೫೫–ಪ)
– ಏನು ಕಾರಣ ಬಾಯ ತೆರೆದಿ ಪೇಳೆಲೊ

ದಾನವಾಂತಕ ಅಹೋಬಲ ನಾರಸಿಂಹನೆ
- ಏನು ಕಾರಣ ಬಾಯ ತೆರೆದಿ (ಬೆ-೧೫೫-ಪ)
- ಯಮದೂತರಿನ್ನೇನ ಮಾಡುವರು ಪೇಳೊ ರಮೆಯರಸನೆ ನಿನ್ನ ಅರಿಕೆಯುಳ್ಳವರಿಗೆ
- ಯಮದೂತರಿನ್ನೇನ ಮಾಡುವರು (ಬೆ-೪೪-ಪ)

೨೮೨೧. ಪೊಂ (ಚಿನ್ನ) - ಸ್ವಾರಿ ಹೊರಟರೆ ಛತ್ರ ಭೇರಿಯು ನಗಾರಿಗಳು ಭೋರೆಂಬ ಪೊಂಗಹಳೆ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೫)

೨೮೨೨. ಪೊಂಗು (ಉತ್ಸಾಹಿಸು) - ಅಂಗಳ ದೊಳಗಿಪ್ಪ ಮಂಗಳ ಮೂರ್ತಿ ಪಾದಂಗಳ ಹಿಂಗದೆ ಪೊಂಗಿ ಭಜಿಸದಲೆ
- ಹೇಗೆ ನೀ ದಾಸನಾದೆ (ಬೆ-೨೨-೧೩)

೨೮೨೩. ಪೊಂದು - ನಂದತೀರ್ಥರ (ಆನಂದತೀರ್ಥರ) ಮತದೊಳಗೆ ಬಂದವರೆಲ್ಲ ಎಂದಿಗಾದರು ಪರಮಾನಂದ ಪೊಂದುವರು
- ಅರಿತು ಭಜಿಪರ್‍ಯಾರಯ್ಯ ರಂಗಯ್ಯ ನಿನ್ನ (ಸ-೮-೧)

೨೮೨೪. ಪೊಂಬಟ್ಟೆ (ಚಿನ್ನದ ಜರಿಯ ಬಟ್ಟೆ)
- ಪೊಂಬಟ್ಟೆ ಪೀತಾಂಬರವನುಟ್ಟು ಮೆರೆವಂಥ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೨)
- ಬಿಳಿದು ಪೊಂಬಟ್ಟೆ ನಾನಾ ವಿಚಿತ್ರದ ಬಣ್ಣ
- ವಾಸುದೇವಾಯ ನಮೋ (ಬೆ-೯೦-೧೦)

೨೮೨೫. ಪೊಗರು - ಮಾಕಾಂತ ಕರೆಸಿದರೆ ಬಾರದಿಹ ಪೊಗರು
- ಯಾಕೆಲೊ ರಂಗ ನಿನಗಿಂತ ನಟನೆಯ ಮಾತು (ಸ-೨೧೬-ಅ)

೨೮೨೬. ಪೊಗಳು - ಎಷ್ಟು ಪೊಗಳಲಿ ನಾನು ಎನ್ನೊಡೆಯ ನಿಮ್ಮ ವಿಶಿಷ್ಟ ಮಹಿಮೆಗಳನು
- ಎಷ್ಟು ಪೊಗಳಲಿ ನಾನು (ಸ-೫೩-ಪ)
- ಎರಡು ಸಾವಿರದ ಜಿಹ್ವೆಯುರಗ ಪೊಗಳಿದ ಹರಿಯೆ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-ಪ)
- ರಾಮ ಎಂದವನೆ ಧನ್ಯನೆಂದು ಶ್ರುತಿತತಿಗಳು ಪೊಗಳುತಿರೆ
- ರಾಮ ನಾಮವ ನೆನೆ ಮನವೆ (ಸ-೨೨೬-ಅ)
- ನಾನಾ ಪರಿಯಲಿ ಪೊಗಳುವ ಗೀತ ನಾನೆಂದ ವರ ಮುರಿದ ಪ್ರಖ್ಯಾತ
- ನಾರಾಯಣನೆ ಈತ (ಸ-೧೩೮-ಅ)
- ಗರಳಕಂಧರನು ಬೆರಳೆತ್ತಿ ಪೊಗಳಲು ತರಳ ಗೊಲಿದು ನಿಂದೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೪)
- ಹರಿನಾಮವನು ಪಾಡಿ ಪೊಗಳುವುದ ಕರುಣಿಸಯ್ಯ
- ಅಣುಮಹತ್ತಾದ ದೇವ (ಬೆ-೭೧-೧)
- ಹರಿಯ ನಾಮಾವಳಿಯ ಪೊಗಳುತಲಿ ದಿವಿಜೇಂದ್ರ
- ವಾಸುದೇವಾಯ ನಮೋ (ಬೆ-೯೦-೧೩)
- ಕಾಲ ಗೆಜ್ಜೆಯ ಕಟ್ಟಿ ಮೇಲೆ ಕರತಾಳ ತಟ್ಟಿ ಶ್ರೀಲೋಲನ ಗುಣ ಪೊಗಳದಲೇ ನೀ
- ಹೇಗೆ ನೀ ದಾಸನಾದೆ (ಬೆ-೨೨-೭)
- ಪಕ್ಷಿವಾಹನನ ಗುಣ ಲೆಕ್ಕಿಸಿ ಪೊಗಳದೆ ಬೆಕ್ಕಸ ಬೆರಗಾಗಿ ಅಕ್ಕಿಗೆ ತಿರುಗುವವ
- ಹೇಗೆ ನೀ ದಾಸನಾದೆ (ಬೆ-೨೨-೨೦)
- ಮೀಸಲಳಿಯದ ಪುಷ್ಪಮಾಲೆ ಧರಿಸಿ ಜಗದೀಶನೆಂಬ ಬಿರುದ ಪೊಗಳಿಸಿಕೊಳುತಿಪ್ಪೆ
- ಸಿರಿಯ ಮದವೆ ಮುಕುಂದ (ಬೆ-೬೯-೨)
- ಶ್ರೀಶ ನೆಲೆಯಾದಿಕೇಶವ ನಿಮ್ಮ ಪಾದವನು ಲೇಸಾಗಿ ಸ್ಮರಿಸಿ ಪೊಗಳುವರು ಹರಿಯೇ
- ಬಳು ನಾರಾಯಣ (ಸ-೫೯-೩)

೨೮೨೭. ಪೊಗಿಸು - ಹೊಳೆಗೂಡಿನೊಳು ಪೊಗಿಸಿ ತಲೆ ಹುಳಿತ ನಾಯಂತೆ ಮನೆ ಮನೆಯ ತಿರುಗಿ ಪೋಗಿ
- ನೊಂದೆನಾ ಹರಿಯೆನ್ನದೆ (ಬೆ-೧೩-೨)

೨೮೨೮. ಪೊಗು - ಆ ಜಮುನೆ ಪೊಕ್ಕು ಮೋಜು ಮಾಡ್ದಾ
- ನಾರಾಯಣನೆ ಈತ (ಸ-೧೩೮-೧)
- ನಾಡಿ ಹಲವು ಕಟ್ಟದನಕ ಬ್ರಹ್ಮನಾಡಿಯೊಳು ಪೊಕ್ಕು ಮುಳುಗಾಡದನಕ

- ಸದರವಲ್ಲವೊ ನಿಜಯೋಗ (ಸ-೨೪೩-೨)
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು ಕರ್ಮವೆಂದಿನಿಪ ಕಾನನವ ಪೊಕ್ಕು
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೩-೩)
- ಪೋದನೆಲ್ಲೆನುತ ಶರನಿಧಿಯೊಳಗೆ ಪೊಕ್ಕು ಮತ್ತಾದಿತ್ಯನಂ ಕೊಂದು ತಿಕ್ಕಿಮುಕ್ಕೆ
- ನೋಡಯ್ಯ ನಿನ್ನ ದಾಸರ (ಬೆ-೮೫-೧)
- ಒಡೆಯ ಅಂಬುಧಿಯೊಳು ಪೊಕ್ಕು ವೇದವ ತಂದು ತಡೆಯದೆ ಅಜಗಿತ್ತನೆಂದೆನುತ
- ಅರಸಿನಂತೆ ಬಂಟನೊ (ಬೆ-೫_೧)
- ಗಗನದ ಪುರವ ಪೊಕ್ಕನ ತೇಜಿರೂಢನ
- ಇಂದು ನೀ ಕರೆದುತಾರೆ (ಬೆ-೯೨-೩)
- ಸ್ವರ್ಣ ಖಚಿತವಾದ ರಥದೊಳು ಪೊಕ್ಕನ ನಾರಾಯಣ ಎನ್ನಿರೊ
- ನಾರಾಯಣ ಎನ್ನಿ ನಾರದವರದನ (ಬೆ-೭೬-೩)
- ಅನಿಮಿಷರಂದದಿ ವನವಾಸವ ಪೊಕ್ಕನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೧)
- ಪೇಣನ ಭೋಜನಮಾಡಿದವರ ವಾಸವ ಪೊಕ್ಕನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೩)
- ಮೂರೊಂದು ಮಾತಿನ ಸಾರವನೇ ಕದ್ದು ವಾರಿಧಿಯನೆ ಪೊಕ್ಕನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೫)
- ನೀರ ಪೊಕ್ಕವನೆಂದೆನೆ ಬೆನ್ನಿನ ಮೇಲೆ ಭಾರ ತಾಳ್ದವನೆಂದೆನೆ
- ನಿನ್ನ ನಾನೇನೆಂದೆನೊ ರಂಗಯ್ಯ (ಬೆ-೯೧-೧)
- ಪುರಜನರು ಕೇಡು ಕೌರವಂಗೆಂದು ಮಾತಾಡಿ ನಿಶ್ಚೈಸಿಓಡಿ ಮನೆಗಳ ಪೊಕ್ಕರು
- ವಾಸುದೇವಾಯ ನಮೋ (ಬೆ-೯೦-೧೨)

೨೮೯. **ಪೊಟ್ಟೆಗುಡುಮ** (ಬೊಜ್ಜು ಹೊಟ್ಟೆಯವನು) - ಕೆಟ್ಟ ಕೂಗನೆ ಕೂಗಿ ಹೊಟ್ಟೆಯನು ಹೊರುವಂಥ ಪೊಟ್ಟೆಗುಡುಮಗಳೆಲ್ಲ ಪರಮ ವೈಷ್ಣವರೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೧)

೨೮೩೦. **ಪೊಡವಿ** - ಪೊಡವಿಗೊಡೆಯ ಶ್ರೀಹರಿಲೀಲೆಯಿದು
- ಕೊಡಲು ನೀನಾರು (ಸ-೯೨-೪)
- ಪೊಡವಿಯ ಈರಡಿ ಮಾಡಿದ ದೇವನ ಕುಡಿಬೆರಳನೆ ಕರದಲಿ ಪಿಡಿದು
- ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ-೧೯೫-೩)
- ಪೊಡವಿಯ ಕೊಟ್ಟರೆ ಅಳೆಯುತಿದೆ ತನ್ನ ಕೊಡಲಿಯೊಳು ಭೂಪರ ಕಡಿಯುತಿದೆ
- ಮಗುವಿನ ಮರುಳದು ಬಿಡದಲ್ಲ (ಸ-೧೯೮-೨)
- ಕಂಬವನೊಡೆದು ಪೊಡವಿಲಿ ಮೂಡೇನೆಂದ
- ನಾರಾಯಣನೆ ಈತ (ಸ-೧೩೮-೩)
- ಪೊಡವಿಭಾರವ ಹೊತ್ತು ಮೃಡಗೆ ಭೂಷಣನಾಗಿ ಹೆಡೆಯೊಳಗೆ ಮಾಣಿಕ್ಯವಿರಿಸಿಕೊಂಡು
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೯೯-೩)
- ನುಡಿಯ ಕದ್ದೊಯ್ದವನ ಒರಸಿ ಸುಧೆಯನು ತರಿಸಿ ಪೊಡವಿಯನು ಧರಿಸಿ
- ಪೂಸರನ ಜನಕನೇ (ಬೆ-೧೬೮-೫)
- ಪೊಡವಿಯಲಿ ಕಾಗೆನೆಲೆಯಾದಿಕೇಶವನೊಲುಮೆ ಪಡೆದವರಿಗಿನ್ನು ಸಕಲಾರ್ಥ ಪದವುಂಟು
- ಕಲಿಯೇರಿ ಬಂತು (ಬೆ-೧೩೦-೧೧)
- ಪೊಡವಿಯೊಳು ಅಣ್ಣನಾಜ್ಞೆಯ ಮೀರಿ ನಡೆಯುತಿಹ ಒಡಹುಟ್ಟಿದವಗೆ ಕೈವಲ್ಯವುಂಟೇ
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೨)
- ಪೊಡವಿಗಧಿಕ ಕಾಗೆನೆಲೆಯ ಒಡೆಯ ವೆಂಕಟೇಶ ನಿನ್ನ ಅಡಿಗಳಿಂದ ಸಲಹೊ ಎನ್ನ ಕನಕನೊಡೆಯನೆ -

ಕಣಿಯ ಹೇಳಬಂದೆ ನಾನು (ಬೆ-೭೨-೫)
- ಬಿಡಿಸೊ ಎನ್ನ ಬಂಧ ಪಾಶವ ಪೊಡವಿಗೊಡೆಯ ನಾರಸಿಂಹ ಮಾಧವ ಹೇ ಬಿಸರು

ಹಾಕ್ಷ ಒಡೆಯ ಬಾಡದಾದಿಕೇಶವ
- ಸಾಕು ಸಾಕು ಮನುಜ ಸೇವೆಯು (ಬೆ-೪೨-೩)
- ಜಗದೇಕ ಪೊಡವಿಗೊಡೆಯನ ರಾಣಿ ಪರಮ ಕಲ್ಯಾಣಿ
- ಏಕೆ ನಡುಗಿದೆ ತಾಯೆ (ಸ-೫೬-ಪ)

**೨೮೩೧. ಪೊಡವಿಪತಿ/ಪೊಡವಿಪಾಲಕ** - ಪೊಡವಿಪತಿ ಕೇಳು ಶ್ರೀ ಆದಿಕೇಶವನೆ ಹಿಂಗಡೆಯಲ್ಲಿ ಮನೆಯ ಕಟ್ಟಿಸಬಾರದೆ
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೫)
- ರಘುಪತಿ ಕೃಷ್ಣನೆ ಪೊಡವಿಪತಿ ವೈಕುಂಠವೆನಿಪ ಶೇಷಾದ್ರಿಯೊಳು ಸಡಗರದಿ
- ಪೂಸರನ ಜನಕನೇ (ಬೆ-೧೬೮-೫)
- ಪೊಡವಿಪಾಲಕರ ವಂಶವನು ಒಬ್ಬನೆ ಕಡಿದು ಕೊಡಲಿಯನು ಬಿಸುಟ ಮಲಗಿದ ಭಾವವೊ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೨)

**೨೮೩೨. ಪೊಡೆ** (ಹೊಟ್ಟೆ) - ಧೂಮಜ್ವಾಲೆಗಳೊಡನೆ ಭುಗಿಭುಗಿಲು ಭಿಟಿಲೆನುತ ಆ ಮಹಾ ರಕ್ಕಸನ ಪೊಡೆಯ ಸೀಳಿ
- ನೋಡಯ್ಯ ನಿನ್ನ ದಾಸರ (ಬೆ-೮೫-೪)

**೨೮೩೩. ಪೊದಿಸು** - ಎಲುವ ಗಳುವಂ ಮಾಡಿ ಬಲುನರಗಳಂ ಬಿಗಿದು ಚೆಲುವ ತೊಗಲಂ ಪೊದಿಸಿ ಮಲ ಮಾಂಸವಂ ತುಂಬಿ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೨)
- ಸುರುಚಿರೋಜ್ಜ್ವಲಪೀತವಾಸನಿಗೆ ಉಡುಗೊರೆಯ ಅರಿವೆ ಏನನು ಪೊದಿಸಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೨)
- ಚೆಲುವ ತೊಗಲನೆ ಪೊದಿಸಿ ಮಾಂಸ ಮಜ್ಜವ ತುಂಬಿ
- ನೊಂದೆನಾ ಹರಿಯೆನ್ನದೆ (ಬೆ-೧೩-೨)

**೨೮೩೪. ಪೊರಮಡು** (ಹೊರಡು) - ಕಲಿ ಭೀಮಸೇನನ ನುಡಿಕೇಳಿ ಪೊರಮಟ್ಟು ಕುಲವ ಕೊಂದವನು ಕೌರವನೋ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೬)

**೨೮೩೫. ಪೊರು** (ಹೊರು) - ಆಗಮವ ತಂದಿಹನೆ ರಂಗ ಬೇಗದಿ ಗಿರಿಯ ಪೊತ್ತಿಹನೆ
- ರಂಗನೆಂಥವನೆಂಥವನೆಲೆ ತಂಗಿ (ಸ-೨೨೨-೧)
- ನಾಸದೊಳೊರ್ವನ ಪೊತ್ತು ಮುರಿದು ಮುನೀಶರ ಶಾಪವ ಪಿಡಿದು ಕೊಂದಾತನು
- ಈತನೇನೆ ನಿನ್ನ ಮಗನು (ಸ-೩೮-೧)
- ಮೈಮೇಲ್ಭಾರವ ಪೊತ್ತು ನೋಡ್ದಾ
- ನಾರಾಯಣನೆ ಈತ (ಸ-೧೩೮-೧)
- ಇಲ್ಲದ ಬಯಲ ನಿಂದೆಯ ಪೊತ್ತು ಶುಕಾಮಲ್ಲರೊಡನೆ ಕಾದಿ ಮಲೆತ ಸಾಲ್ವರ ಕೊಂದು ಮಡದಿಗೆ ರತ್ನ ತಂದುದರಿಂದ
- ಚೆಲ್ವ ಕಂಗಳ ಚೆಲ್ವಕಾರ (ಸ-೯೯-೧)
- ತಿಳಿದು ಕೂರ್ಮರೂಪಾಗಿ ಮಂದರವನು ಪೊತ್ತು ಉಳಿಸಿದೆ ಲೋಕವನುನ್ನತ ಪರಾಕ್ರಮಿ
- ಯಾದವಗಿರಿವಾಸನಹುದೋ (ಸ-೨೯೯-೧)
- ಕರದಿ ಕಂಬಿಯ ಪೊತ್ತು ಅಲ್ಲಿ ನಿಂದಿರುವೆ
- ಬಂಟನಾಗಿ ಬಾಗಿಲಕಾಯ್ವೆ (ಬೆ-೪೫-೧)
- ನಾಸಿಕದೊಳೊರ್ವಳ ಪೊತ್ತು ಮೆರೆದನು ಮುನೀಶರ ಶಾಪವಡೆಯೆ ಕೊಂದಾತನ
- ಸೀತಾಪತಿ ರಘುನಾಥ (ಬೆ-೧೦೦-೧)
- ನಗವ ಬೆನ್ನಲಿ ಪೊತ್ತು ನಡುಗಿ ತೆರೆದೆಯೊ ಬಾಯ
- ಏನು ಕಾರಣ ಬಾಯ ತೆರೆದಿ (ಬೆ-೧೫೫-೧)
- ಶ್ರುತಿಯನುದ್ಧರಿಸಿ ಭೂಮಿಯ ಪೊತ್ತು ಅಡವಿಯ ಪಥದೊಳು ತಿರುಗಿದನ
- ಹರಿಮುಖ ಹರಿವಾಣಿ (ಬೆ-೯೮-೩)
- ಶತಕ್ರತುವಿನ ಸಿರಿ ಹತವಾಗೆ ಧರೆಯ ಪೊತ್ತಾತನ ನಿಲಿಸಿದೆಯೊ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೨)
- ತಮನೊಡನೆ ಹೋರಿ ಬೆಟ್ಟವನು ಬೆನ್ನಲಿ ಪೊತ್ತು ರಮಣಿ ಧರೆಯನು ತಂದ ಆಯಾಸವೊ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೧)
- ನಗರಾಜ ವೈರಿಯ ಮಗನ ಬೀಗನ ನಗವ ಬೆನ್ನಲಿ ಪೊತ್ತು ಜಗವನಾಳುವವನ
- ಕರೆತಾರೆ ಕಾಮಿನಿಕಮಲಜಪಿತನ (ಬೆ-೯೩-೨)

- ಎಂಥ ಕೀರುತಿ ಪೊತ್ತುವೆರಡು ಪಾದ ಶ್ರೀಕಾಂತ ಬಾಡದ ರಂಗ ಕರುಣಿ ದೇವೋತ್ತುಂಗ
- ಎಂಥ ಕೀರುತಿ ಪೊತ್ತುವೆರಡು ಪಾದ (ಬೆ-೮೩-೪)
- ಗರುಡ ಶೇಷಾದಿಗಳು ಪೊತ್ತುಕೊಂಡಿಹ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-೩)
- ಸೋಮಕುಲದ ಭಾರವನ್ನು ಪೊತ್ತ ದೇವನು
- ಈತನೀಗ ವಾಸುದೇವನು (ಬೆ-೭೫-೨)
- ಕಾಲಿಲ್ಲದೆ ಆಡಿದ ವೇದ ತಂದಿತ್ತ ಕಾಲಿಲ್ಲದನ ಪೊತ್ತ ಅಮೃತವನಿತ್ತ
- ಇಂದು ನೀ ಕರೆದುತಾರೆ (ಬೆ-೯೨-೧)
- ಮನಸಿಜನರಿಯ ತಂದೆಯ ಭಕ್ಷಿಪನ ಪೊತ್ತನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೧)
- ಬೆಟ್ಟ ನೀನು ಪೊತ್ತರೆ ಕುಚದ ಬೆಟ್ಟಗಳೆರಡನು ತಾ ಪೊತ್ತಳೊ
- ನಿನಗಿಂತ ಕುಂದೇನೊ (ಬೆ-೮೭-೩)
- ಆಡಿ ಪೊತ್ತವನೊಬ್ಬ ನೋಡಿ ತಿರುಗಿದವನೊಬ್ಬ ಓಡಾಡಿದನು ಒಬ್ಬ ಈ ಮೂವರನು
- ಮೂವರೇರಿದ ಬಂಡಿ (ಬೆ-೧೬೦-೧)
- ಮಾಯಕಾರಗೆ ರೂಪ ಕಾಯ ಬಡಲಿಗ ಚೆಲ್ವ ಕಾಯಗಿರಿ ಪೊತ್ತವನು ಕಡು ಧರ್ಮಿಯು
- ಮೂವರೇರಿದ ಬಂಡಿ (ಬೆ-೧೬೦-೨)
- ಬೆಟ್ಟ ನೀನು ಪೊತ್ತರೆ ಕುಚದ ಬೆಟ್ಟಗಳೆರಡನು ತಾ ಪೊತ್ತಳೊ
- ನಿನಗಿಂತ ಕುಂದೇನೊ (ಬೆ-೮೭-೩)
- ಧೀರ ಸೋಮಕ ವೇದಚೋರನ ಮಡುಹಿದೆ ವಾರಿಧಿಗಿಳಿದ ಪರ್ವತವ ಪೊತ್ತೆ
- ನಿನ್ನ ನಾನೇನೆಂದೆನೊ ರಂಗಯ್ಯ (ಬೆ-೯೧-೧)
- ಶಿವನ ಉಪಟಳಕಳುಕಿ ಗೋಕುಲ ಶಿವನ ಕರದಲಿ ಪೊತ್ತೆ
- ಭವಭಯವಿನಾಶ ಭೋ (ಬೆ-೪೧-೨)
- ಚಳಿಯ ಮಗಳ ತಾಯಳಿಯನ ತನಯನ ಇಳುಹದೆ ಪೊತ್ತಿಹನ
- ಏಣನಯನೆ ಏಣಭೋಜಮಧ್ಯಳೆ (ಬೆ-೯೯-೧)
- ಭೇದವಿಲ್ಲದೆ ಸಕಲ ಜೀವರನು ಪೊತ್ತಿಹಳು ಭೂದೇವಿಯೆಂಬಾಕೆ ನಿನ್ನ ಅರ್ಧಾಂಗಿಯು
- ಜಗದಂತರ್ಯಾಮಿ ಎಂತೆಂದು (ಬೆ-೫೮-೧)

೨೮೩೬. **ಪೊರೆ** (ಕಾಪಡು) - ಸೃಷ್ಟಿಯೊಳು ಭೂಸುರರ ಪೊರೆ ಜಗಜಟ್ಟಿ ಆದಿಕೇಶವ ರಾಯನಂತೆ
- ಮಗುವಿನ ಮರುಳಿದು ಬಿಡದಲ್ಲ (ಸ-೧೯೮-೩)
- ಕ್ರೂರ ಖಳನ ತರಿದು ಆ ಪಾಂಡವರ ಅರಣ್ಯದಿ ಪೊರೆದ
- ಮರೆಯದಿರು ಹರಿಯ (ಸ-೨೦೩-೨)
- ಸಾರಿದರೆ ಪೊರೆವ ಕಂಸಾರಿ ನೀನಲ್ಲದಿನ್ನಾರು ಎನಗಾಪ್ತ ಬಂಧು
- ವಾಸುದೇವಾಯ ನಮೋ (ಬೆ-೯೦-೫)
- ಈರೇಳು ಲೋಕವ ಪೊರೆವ ದಯಾನಿಧಿ ಬಾರನೇತಕೆ ಮನೆಗೆ ಹೇ ಸಖಿಯೆ
- ತೋರೆ ಬೇಗನೆ ಸಖಿ (ಬೆ-೯೪-೬)
- ಸಂತತವು ಭಕ್ತ ಸಂಸಾರವನು ಪೊರೆವ ವೇದಾಂತನುತ ಕಾಗಿನೆಲೆಯಾದಿಕೇಶವ ರಾಯ
- ಬೊಂಬೆಯಾಟವನಾಡಿಸಿದ (ಬೆ-೭೯-೫)
- ಸಾಸಿರಕೋಟಿ ಸುರರ ಪೊರೆವ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೩)
- ತರುಣಿ ತನ್ನಿನಿಯನ ಮುಟ್ಟಲಂಜಿ ದೂರದಲಿ ಪೊರೆವರು ತನಗಾರು ಹೇಳೆಂಬಳು
- ಆರು ಸಂಗಡ ಬಾಹೋರಿಲ್ಲ (ಬೆ-೧೫-೪)
- ದಂತಿರಾಜನ ಪೊರೆದು ದಾನವಾಡಿಗೆ ಬಂದು ನಿಂತಾದಿಕೇಶವನೆ ಶರಣೆಂಬೆನು
- ನೋಡಯ್ಯ ನಿನ್ನ ದಾಸರ (ಬೆ-೮೫-೧೧)
- ಯಮಸುತನ ರಾಣಿಗಕ್ಷಯವಸನವನ್ನಿತ್ತೆ ಸಮಯದಲಿ ಅಜಮಿಳನ ಪೊರೆದೆ
- ಬಾಗಿಲನು ತೆರೆದು ಸೇವೆಯನು (ಬೆ-೪೬-೩)

೨೮೩೭ **ಪೊಸ** - ಪೊಸ ಪೀತಾಂಬರ ಉಡಿಸಿ ನವರತ್ನವಂ ತೊಡಿಸಿ ವಸುಧೆಯೊಳು

ಮಿಗಿಲಾಗಿ ನಿಲಿಸಿದಳೋ ನಮಿಸಿ
– ಯಾಕೆಲೊ ರಂಗ ನಿನಗಿಂತ ನಟನೆಯ ಮಾತು (ಸ-೨೧೬-೨)
– ಪೊಸ ಶಾಸ್ತ್ರಮ ಕೂಗೆ ಜಾರ ತಸ್ಕರ ತತಿಯು ಬಸವಳಿದು ಭಯದಿ ಪೋಗೆ
– ಸಿಂಗರದ ಸಿರಿಧರನೆ (ಬೆ-೧೬೭-೧)

**೨೮೩೮. ಪೋಕ** – ಪುಂಡಪೋಕರನ್ನು ಮೀರಿ ದುಂಡು ಕುಚಗಳನ್ನು ಪಿಡಿದು
– ಬಾಲಕನೆಂದೆತ್ತಿಕೊಂಡೆನೆ (ಸ-೧೮೩-೨)

**೨೮೩೯. ಪೋ/ಪೋಗು** (ಹೋಗು) – ಮಚ್ಛ್ಯ ರೂಪದಿಂದ ಪೋಗಿ ಅವನ ಕೊಂದ ಅಚ್ಯುತ ರಾಯನೆಂಬ ಮಾಸಾಳಮ್ಮ
– ತಾಳಲ್ಲಲ್ಲಲ್ಲಲ್ಯೊ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೧
– ಖಳ ಹಿರಣ್ಯಕ ಬಂದು ಎದುರಾರು ತನಗೆಂದು ಇಳೆಯ ಕದ್ದೊಯ್ದು ಪೋಗುತಿರೆ
– ಯಾದವಗಿರಿವಾಸನಹುದೋ (ಸ-೨೧೯-೧)
– ಮೃಗ ಚಕ್ರವರ್ತಿ ಬಹುವರನಾಗಿ ಪೋಗುತ್ತಿರೆ ಮಿಗೆ ಸತಿಸುತರೇನ ಮಾಡುತಿರ್ದರು
– ಬಂಧುಗಳದಾರಿಗಾರಿದ್ದರೇನು (ಸ-೧೭೩-೩)
– ಬಿಟ್ಟು ಪ್ರಾಣವು ಪೋಗೆ ಪೆಣನೆಂದು ಮೂಲೆಯೊಳು ಕಟ್ಟಿ ಕುಳ್ಳಿರಿಸಿ ಹೊಟ್ಟೆಯ ಹೊಯ್ದುಕೊಂಡಳುತ
– ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೧)
– ಶ್ರೀಲತಾಂಗಿಯರ ಲೋಲ ಮಾರನಾಟವಾಡಿ ಪೋದನೆ
– ಬಾಲಕನೆಂದೆತ್ತಿಕೊಂಡೆನೆ (ಸ-೧೮೩-೮)
– ದಿಂಡುರುಳಿಸಿ ಒಂದುಸರಲಿ ಬಂಡನುಂಡು ಹಾರಿ ಪೋದನೆ
– ಬಾಲಕನೆಂದೆತ್ತಿಕೊಂಡೆನೆ (ಸ-೧೮೩-೨)
– ಇಳಿದು ಪಾತಾಳಕೆ ಪರುವತ ಪೋಪುದ ಕಂಡು
– ಯಾದವಗಿರಿವಾಸನಹುದೋ (ಸ-೨೧೯-೧)
– ಗೆದ್ದು ಪೋಪ ಬುದ್ಧಿ ತೋರು ಪದ್ಮನಾಭನೆ
– ಈಶ ನಿನ್ನ ಚರಣ ಭಜನೆ (ಬೆ-೬೫-೧೦)
– ಸ್ವಸ್ಥದಿಂ ಕುಳಿತು ಕೇಳೆಂದಡಾ ಠಾವಿನಲಿ ಮಸ್ತಕಕೆ ವ್ಯಥೆ ತೋರಿ ಮನೆಗೆ ಪೋಪೆ
– ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೧)
– ಹಾದಿಗಾಣದೆ ತೊಲಗಿ ಪೋಪೆನೆಂದರೆ ಭಾವ ಬೂದಿಯೊಳಗಾಡಿ ಮುಳುಗಾಡುತಿಹೆನೊ
– ಕಡಹಾಯಿಸೊ ಕಮಲಲಲೋಚನನೊಲ್ಲೆ (ಬೆ-೬೨-೩)
– ಬಿಟ್ಟು ಪ್ರಾಣವ ಪೋಗೆ ಪೆಣನೆಂದು ಮೂಲೆಯಲಿ
– ನೊಂದೆನಾ ಹರಿಯೆನ್ನದೆ (ಬೆ-೧೩-೪)
– ಪೊಸ ಶಾಸ್ತ್ರಮ ಕೂಗೆ ಜಾರ ತಸ್ಕರ ತತಿಯು ಬಸವಳಿದು ಭಯದಿ ಪೋಗೆ
– ಸಿಂಗರದ ಸಿರಿಧರನೆ – (ಬೆ-೧೬೭-೧)
– ಕತ್ತಲೆಯಲಿ ಪೋಗಿ ಕುತ್ತಿದ್ದವನ ಮೈಯ ಸುತ್ತಿ ಬಾಧಿಸುತಿಪ್ಪನ
– ತೋರೆ ಬೇಗನೆ ಸಖಿ -(ಬೆ-೯೪-೨)
– ಬೆಂಗೊಂಡು ಪೋಗಿ ಅವನಂಗವ ಸೀಳಿ ವೇದಂಗಳ ತಂದವನ
– ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೩)
– ಭಂಗನೆ ಲಂಕೆಗೆ ಪೋಗಿ ನಮ್ಮ ರಂಗ ಹೆಂಗಸುಗಳ್ಳನ ಕೊಂದಾನ್ನಾ
– ದೇವಿ ನಮ್ಮ ದೇವರು ಬಂದರು (ಬೆ-೭೭-೭)
– ರಥದಿಂದಿಳಿದು ಪೋಗಿ ಕುರುವಂಶ ಸವರಿದ ಹಿತಶತ್ರುವಾರು ಶಲ್ಯನೊ ಪಾಂಡವರೊ
– ಬಂದಿದೆ ದೂರು ಬರಿದೆ (ಬೆ-೮೬-೫)
– ಕಂದನ ತಾಯಿಯು ಆಡಿಸುತಿರೆ ಪೋಗಿ ಕಂದ ಬಾವಿಯ ಕಂಡು ನೋಡುತಿರೆ
– ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೩)
– ಸೇತುವೆ ದಾಟಿ ಲಂಕೆಗೆ ಪೋಗಿ ಹನುಮಂತ ಖ್ಯಾತಿಯಲಿ ರಾವಣನ ಪುರವನಳಿಸಿ
– ಪ್ರಾಚೀನ ಕರ್ಮವಿದು (ಬೆ-೧೦೭-೧)
– ಬಂದವನಾವನಾದರು ಕರೆದಡೆ ಪುಣ್ಯವೆಂದ ವರ ಮನೆಗಳಿಗೆ ಪೋಗಿ
– ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ

(ಬೆ-೧೧-೨)
- ಹೊಳೆಗೂಡಿನೊಳು ಪೊಗಿಸಿ ತಲೆ ಹುಳಿತ ನಾಯಂತೆ ಮನೆ ಮನೆಯ ತಿರುಗಿ ಪೋಗಿ
- ನೊಂದೆನಾ ಹರಿಯೆನ್ನದೆ (ಬೆ-೧೩-೨)
- ಪೋದ ನಿಗಮಂಗಳನು ತಂದು ಸಲೆ ರಕ್ಷಿಸಿದೆ ಆದಿಮತ್ಸ್ಯವತಾರ ಶರಣೆಂಬೆನು
- ನೋಡಯ್ಯ ನಿನ್ನ ದಾಸರ (ಬೆ-೮೫-೧)
- ಪಡೆದ ಕ್ಷೇತ್ರವ ಬಿಟ್ಟು ಪೋಗಬಹುದು
- ತೊರೆದು ಜೀವಿಸಬಹುದೆ (ಬೆ-೫೫-೨)
- ಕವಿದುಕೊಂಡು ಇರುವ ಪಾಪ ಸವೆದು ಪೋಗುವಂತೆ ಮಾಡಿ
- ಈಶ ನಿನ್ನ ಚರಣ ಭಜನೆ (ಬೆ-೬೫-೬)
- ನಾರಸಿಂಹನ ದಿವ್ಯನಾಮವನು ನೆನೆದರೆ ಘೋರ ಪಾತಕವೆಲ್ಲ ತೊಲಗಿ ಪೋಗುವುದು
- ನೇಮವಿಲ್ಲದ ಹೋಮವೇತಕಯ್ಯ (ಬೆ-೧೭-೧)
- ದುಃಖವಾದಡೆ ದುಃಸ್ಥಿತಿಯಲಿರಲು ಅಂಬಕ ದಲಿ ಜಲ ಪೋಗುವದೇಕೋ
- ಬೆರೆಯದಿರು ಬೆರೆಯದಿರು (ಬೆ-೧೪೪-೧)

೨೮೪೦. **ಪೋಕರಿ** - ಹೊತ್ತರೆದ್ದು ಮುಖ ತೊಳೆದು ಮನೆಮನೆ ಪೋಕರಿ ಅಲೆಯುತಿದ್ದೆ
- ಛೀ ನಿನ್ನ ಮೋರೆ ಮೇಲೆ (ಸ-೧೦೦-೧)

೨೮೪೧. **ಪೋಟು** (ಸಾಟಿ) - ಕಟ್ಟಿದರ್ಘ ಕರೆವ ಎಮ್ಮೆ ಕೊಂಡುಕೊಂಡ ಸಾಲಕದನು ಪೋಟು ಮಾಡಿ
- ಯಾರಿಗಾರು ಬಹರು ಸಂಗಡ (ಸ-೨೨೧-೩)

೨೮೪೨. **ಪೋಣಿಸು**- ಜ್ಞಾನವೆಂಬೊ ದಾರ ದಲ್ಲಿ ಪೋಣಿಸುವ ಮುತ್ತು
- ಮುತ್ತು ಬಂದಿದೆ ಕೇರಿಗೆ (ಸ-೨೧೦-೩)

೨೮೪೩. **ಪೋಲ್** - ಚಂದಿರನ ನೆರೆಪೋಲ್ವ ಉನ್ನತೋನ್ನತನಾಗಿ ಕೊಂದು ತ್ರಿಪುರಾಸುರರ ಅವರ ಸತಿಯರ ಕೆಡಿಸಿ
- ಯಾದವಗಿರಿವಾಸನಹುದೋ (ಸ-೨೧೯-೩)
- ಹೀಗಾರ ಪೋಲ್ವೆ ಹೇಳೆಲೊ ಮಾನವಾ
- ಮೆರೆಯದಿರು ಮೆರೆಯದಿರು (ಬೆ-೧೪೮-೩)
- ಪರಮಾತ್ಮ ಕರಿಯ ಮೇಘವ ಪೋಲ್ವ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೩)
- ಸುತ್ತು ನೆರೆದಿಹ ಸಭೆಯ ಪರಿವಾರದವರೆಲ್ಲ ಹೆತ್ತುದಿಲ್ಲವೆ ಎನ್ನ ಪೋಲ್ವ ಹೆಮ್ಮಕ್ಕಳನು
- ವಾಸುದೇವಾಯ ನಮೋ (ಬೆ-೯೦-೪)
- ಲೋಕದೊಳಗೆನ್ನನ್ನು ಪೋಲ್ವ ಪಾಪಿಗಳನ್ನು ನೀ ಕಂಡು ಬಲ್ಲೆಯಾ ಕೃಷ್ಣ
- ಪೂರ್ವಜನ್ಮದಲ ನಾ ಮಾಡಿದಾ (ಬೆ-೮_೩)

೨೮೪೪. **ಪೋಷಕ** - ಭೂಸುರಪ್ರಿಯಭಜಕ ಪೋಷಕನೆ ರಕ್ಷಿಪುದು ಕೇಶವನೃಸಿಂಹರೊಲಿದು
- ವಾಸುದೇವಾಯ ನಮೋ (ಬೆ-೯೦-೫)

೨೮೪೫. **ಪೋಷಿಸು** - ಜನನಿಯ ಜಠರದಿ ನವಮಾಸವು ಘನದಿ ನೀ ಪೋಷಿಸುತಿರೆ ನಾನು
- ನನ್ನಿಂದ ನಾನೇ ಜನಿಸಿ ಬಂದೆನೆ (ಬೆ-೫೪-೧)

೨೮೪೬. **ಪೌಂಡ್ರಿಕ** - ಪೌಂಡ್ರಿಕನು ವಾಲ್ಮೀಕಿ ಭೃಗು ಕಶ್ಯಪ ವಸಿಷ್ಠ ಮುನಿ ನಿಕರವಿದೆ ರಕ್ಷಿಸುವುದೆನುತ
- ಪೂಸರನ ಜನಕನೇ (ಬೆ-೧೬೮-೪)

೨೮೪೭. **ಪೌತ್ರ** (ಮೊಮ್ಮಗ) - ದಾಸಿಯ ನಂದನ ನಾರದೆನಿಪನು ಕಾಶ್ಯಪಪೌತ್ರನ ಕುಲ ಪೇಳಿರಯ್ಯ
- ಕುಲ ಕುಲ ಕುಲವೆನ್ನುತಿಹರೊ (ಬೆ-೧೨೦-೨)

೨೮೪೮. **ಪೌರ** - ಪೌರತ್ರಯವ ಗೆಲುವ ಸಮಯದಲಿ ತಪಮಾಡಿ ನಾರಾಯಣಾಸ್ತ್ರವನು ಪಡೆದನೀಶ
- ಆರು ಬಲ್ಲರು ಹರಿಹರರ (ಬೆ-೮೨-೧)

೨೮೪೯. **ಪೌರಾಣ** - ಪುಸ್ತಕವ ಬಿಚ್ಚಿ ಪೌರಾಣ ಶಾಸ್ತ್ರಂಗಳ ವಿಸ್ತರಿಸಿ ಹರಿಯ ಕಲ್ಯಾಣ ಗುಣ ಚರಿತೆಯನು
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೧)
- ಶ್ರುತಿಶಾಸ್ತ್ರ ಪೌರಾಣಗಳನೋದುವನೆ ಶೂದ್ರ
- ಸಹಜವಿದು ಈ ನುಡಿಯು (ಬೆ-೧೪೯-೧)

೨೮೫೦. **ಪೌರುಷ** – ಪೌರತ್ರಯವ ಗೆಲುವ ಸಮಯದಲಿ ತಪಮಾಡಿ ನಾರಾಯಣಾಸ್ತ್ರವನು ಪಡೆದನೀಶ
– ಆರು ಬಲ್ಲರು ಹರಿಹರರ (ಬೆ–೮೨–೧)
೨೮೫೧. **ಪ್ರಕಟ** – ದೃಕುಯುಗದಿ ರವಿ ಶಶಿಯು ಎವೆಯಲಿ ನಕ್ಷತ್ರ ಪ್ರಕಟ ಜಿಹ್ವೆಯ ವಾಣಿ ಕರ್ಣದ್ವಯದಿ
– ವಿಶ್ವಲೋಕೇಶ ವಿಶ್ವಲೋಕೇಶ (ಸ–೨೩೪–೧)
– ಸುಕೃತ ಶರಣರು ನಿಮ್ಮ ನೆನೆವರ್‍ಯ ಶೇಷಗಿರಿ ಪ್ರಕಟವಾಸಾದಿಕೇಶವ ವೆಂಕಟೇಶ
– ಸಿರಿಯ ಮದವೆ ಮುಕುಂದ (ಬೆ–೬೯–೫)
– ಪ್ರಕಟದಿಂದರಿದು ಕರಿಯನು ಸೀಳಿ ತನಗೆ ಸಮ್ಮುಖರಾದ ಮಲ್ಲರನು ಇರಿದೊರಗಿಸಿ
– ನೋಡಯ್ಯ ನಿನ್ನ ದಾಸರ (ಬೆ–೮೫–೮)
೨೮೫೨. **ಪ್ರಕಟಿತ** – ಪ್ರಕಟಿತಾ ಶುಕ್ರವಾರ ದೊಳು ತನ್ನ ಭಕುತರಿಗುತ್ಸಾಹ ಸಂಧ್ಯಕಾಲ ದೊಳು
– ಕೈಯ ತೋರಿದ ಬಗೆಯ (ಸ–೯೧–೧)
೨೮೫೩. **ಪ್ರಕಟಿಸು** – ಉರ್ವಿಯೊಳ್ ತಮ ಸಾರಿ ಪ್ರಕಟಿಸುತ ಐದಿರಲು
– ಪೂಸರನ ಜನಕನೇ (ಬೆ–೧೬೮–೧)
೨೮೫೪. **ಪ್ರಕಾಶ** – ಪೂಸರನ ಜನಕನೇ ಶತ ಕೋಟಿತರಣಿಪ್ರಕಾಶ ಅಗಣಿತಕೋಟಿ ಬ್ರಹ್ಮಾಂಡ ನಾಯಕನೆ
– ಪೂಸರನ ಜನಕನೇ (ಬೆ–೧೬೮–ಪ)
– ಮರೆದಿರಲಾರೆನೆನ್ನ ಪ್ರಾಣವಲ್ಲಭ ದಿನಕರ ಕೋಟಿಕಿರಣ ಪ್ರಕಾಶವುಳ್ಳವನ
– ಕರೆತಾರೆ ಕಾಮಿನಿಕಮಲಜಪಿತನ (ಬೆ–೯೩–೮)
೨೮೫೫. **ಪ್ರಕಾಶೆ** (ಕಾಂತಿಯುಳ್ಳವಳು) – ರವಿ ಕೋಟಿ ತೇಜ ಪ್ರಕಾಶೆ ಮಹಾ ಕವಿಜನರ ಹೃತ್ಕಮಲವಾಸೆ
– ವರವ ಕೊಡು ಎನಗೆ ವಾಗ್ದೇವಿ (ಬೆ–೨_೩)
೨೮೫೬. **ಪ್ರಕೃತಿ** – ಅಖಿಳ ಸುವ್ರತ ಕ್ಷೋಣಿ ಯಿಂದಲಿ ಹಿರಿಯ ಪ್ರಕೃತಿರಹಿತಾಂಬರೀಷ
– ಸಿಂಗರದ ಸಿರಿಧರನೆ (ಬೆ–೧೬೭–೨)
೨೮೫೭. **ಪ್ರಖ್ಯಾತ** – ಶಶಿಧರಾನ್ವಯ ದೂತ ಸೌಮಿತ್ರಿಯ ವರೂಥ ಅಸಮಾಸ್ತ್ರಧೃತವೇದ ಅಮಿತ ಪ್ರಖ್ಯಾತ
– ಕದರಮಂಡಲಗಿಯ ಕರುಣಿ ಹನುಮ ರಾಯ (ಸ–೭೫–೨)
– ನಾನಾ ಪರಿಯಲಿ ಪೊಗಳುವ ಗೀತ ನಾನೆಂದವರ ಮುರಿದ ಪ್ರಖ್ಯಾತ
– ನಾರಾಯಣನೆ ಈತ (ಸ–೧೩೮–ಅ)
– ಆತ ತನ್ನಮಳ ಹಯವನೇರಿಕೊಂಡು ಪ್ರಖ್ಯಾತ ದುಂದುಭಿಯ ರಭಸದೊಡನೆ
– ತಂಗದಿರನನಿಮಿಷ ತಾರಕೆಗಳು (ಬೆ–೧೬೯–೪)
೨೮೫೮. **ಪ್ರಚಂಡ** – ಕಂಡೆನಾ ತಂಡತಂಡದ ಹಿಂಡು ದೈವ ಪ್ರಚಂಡ ರಿಪುಗಂಡ ಉದ್ದಂಡ ನರಸಿಂಹನ
– ಕಂಡೆ ನಾ ತಂಡತಂಡದ ಹಿಂಡು ದೈವ (ಬೆ–೮೪–ಪ)
– ಗಂಡುಗತ್ತರಿಯನ್ನು ಕೊರಳಿಗಿಟ್ಟರು ಇಲ್ಲ ಪ್ರಚಂಡನಾದರೂ ಇಲ್ಲ ಪರಿಹಾಸ್ಯವಲ್ಲ
– ಕಷ್ಟಪಟ್ಟರೂ ಇಲ್ಲ (ಬೆ–೧೧೧–೨)
೨೮೫೯. **ಪ್ರಜ್ವಲಿಸು** – ವಜ್ರ ವೈಡೂರ್ಯದ ತೊಲೆಗಳ ಕಂಡೆ ಪ್ರಜ್ವಲಿಪ ಮಹಾದ್ವಾರವ ಕಂಡೆ
– ಇಷ್ಟು ದಿನ ಈ ವೈಕುಂಠ (ಬೆ–೨೮–೩)
೨೮೬೦. **ಪ್ರಣಮ/ಪ್ರಣವ** (ಓಂಕಾರ) – ರಮಣಿಯರ ರಂಜಕದ ನುಡಿಯನು ಕೇಳಿ ಪ್ರಣಮವೆಂದು ತೋಷಿಸುವ ಕರ್ಣೇಂದ್ರಿಯಕೆ
– ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ–೧೧೮–೪)
– ಪ್ರಣವ ಗೋಚರನಾಗಿ ಲೀಲೆಯಿಂದಲಿ ಬಂದು ಹೆಣಕೆ ಪ್ರಾಣವನು ತಂದಿತ್ತ ಮಹಾ ತುಮನೆ
– ಸಾಲದೆ ನಿನದೊಂದು ದಿವ್ಯನಾಮ (ಬೆ–೧೭೪–೧)
– ಪ್ರಣವ ಒಂದು ಕೋಟಿ ನುಂಗಿ ಉಗುಳಿ ತಿಪ್ಪುದೋಂ ಎಂದು
– ಎರಡು ಸಾವಿರದ ಜಿಹ್ವೆಯುರಗ (ಸ–೪೮–೩)
– ಪ್ರಣವ ಒಂದರೊಳಗೆ ಒಂದು ಕೋಟಿ

ಯನ್ನು ತೋರಿ ಕಡೆಯ ಕುಣಿಕೆಯೊಳಗೆ ಎಂಟು ಕೋಟಿಯನ್ನು ತೋರುತ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೬)
- ಹಣೆಯ ಕಾಣದವರ ಕೀಲಿನೆಣಿಕೆಯಲ್ಲಿ ಹೊಲಬುದಪ್ಪಿ ಪ್ರಣವ ಒಂದು ಕೇಳುತಿಪ್ಪ ಪರಬ್ರಹ್ಮ ಓಂ ಎಂದು
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೬)
- ಆತನೇ ಪರಮಾತ್ಮ ಪರತತ್ತ್ವ ಪ್ರಣವ ನೆಂದರಿತು ಪೂಜಿಸಬಾರದೆ
- ಆತನೇ ಪರಮಾತ್ಮ ಪರತತ್ತ್ವ (ಬೆ-೭೪-ಪ)

೨೮೬೧. **ಪ್ರಣವಗೋಚರ** - ಪ್ರಣವಗೋಚರ ಕಾಗೆನೆಲೆಯಾದಿಕೇಶವನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೩)

೨೮೬೨. **ಪ್ರತಿ** - ಪ್ರತಿನಿತ್ಯ ಸಂಧ್ಯಾನ ಮಾಡು ವವನೇ ಪಾಪಿ
- ಸಹಜವಿದು ಈ ನುಡಿಯು (ಬೆ-೧೪೯-೧)

೨೮೬೩. **ಪ್ರತಿಪಾಲ** - ಶಿವನ ಭೋಜನದವನ ಸುತನಿಗೆ ಶಿವನ ಪ್ರತಿಪಾಲನೆಂಬ
- ಭವಭಯ ವಿನಾಶ ಭೋ (ಬೆ-೪೧-೨)

೨೮೬೪. **ಪ್ರತಿಮೆ** - ಹದ್ದುಕಾಗೆಗಳು ಕಾದಾಡಿ ದುವು ಮೃಗಜಾತಿ ಚಲಿಸಿದುವು ಶಿಲೆಪ್ರತಿಮೆ ರೂಥಿ ಗಡಗಡ ನಡುಗಿತು
- ವಾಸುದೇವಾಯ ನಮೋ (ಬೆ-೯೦-೧೨)
- ಧರಣೀಶರೆಂಬ ನರಪ್ರತಿಮೆಗಳನಳವಡಿಸಿ
- ಬೊಂಬೆಯಾಟವನಾಡಿಸಿದ (ಬೆ-೭೯-೧)

೨೮೬೫. **ಪ್ರತಿಲೆಂಕ** - ಆದರಿಸು ನಿನ್ನ ಲೆಂಕನ ಪ್ರತಿಲೆಂಕನ ಭೇದವೇತಕೆ ನಿನ್ನ ದಾಸ ನಾನು
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ-೧೪೫-೩)

೨೮೬೬. **ಪ್ರತಿವಾದಿಸು** - ಸಾಧಿಸಿ ತ್ರಿಪುರರ ಗೆಲಿದವನೆ ಪ್ರತಿವಾದಿಸಿ ಹಯವೇರಿ ನಲಿದವನೆ
- ರಾಮ ಗೋವಿಂದ ಹರೆ (ಬೆ-೪೦-೩)

೨೮೬೭. **ಪ್ರತಿಸೂರ್ಯ** - ಮೂಡಿದುವು ಪ್ರತಿಸೂರ್ಯ ಧೂಮಕೇತುಗಳು ಓಡಾಡಿದುವು ಗಗನದಲಿ
- ವಾಸುದೇವಾಯ ನಮೋ (ಬೆ-೯೦-೧೨)

೨೮೬೮. **ಪ್ರದಕ್ಷಿಣೆ** - ಚಪ್ಪಳೆ ಇಕ್ಕುತ ಪ್ರದಕ್ಷಿಣೆಯ ಮಾಡಿರೆಂದ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೮)
- ಗಾಣದೆತ್ತಿನಂತೆ ಕಣ್ಣ ಮುಚ್ಚಿ ಪ್ರದಕ್ಷಿಣೆಯ ಮಾಡಿ ಕಾಣದೆ ತಿರುಗುವೆನು ಎರಡು ಕಣ್ಣಿದ್ದು ನಾನು
- ಎಳ್ಳು ಕಾಳನಷ್ಟು ಭಕ್ತಿ (ಬೆ-೧೨-೨)
- ಅಣುರೇಣು ಪರಿಪೂರ್ಣ ಮೂರುತಿಗೆ ನಾ ಪ್ರದಕ್ಷಿಣೆಯೆಂತು ಸುತ್ತಿ ಬರಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೩)

೨೮೬೯. **ಪ್ರದ್ಯುಮ್ನ** - ಸಂಕರ್ಷಣ ವಾಸುದೇವ ಪ್ರದ್ಯುಮ್ನ ನಿಖಿಳಾಂಕ ಪಂಕೇರುಹ ಪತ್ರಾಯ ತಾಕ್ಷ
- ಅಭ್ಯಾಸವನು ಮಾಡಬೇಕು (ಬೆ-೩೮-೩)
- ಎನ್ನ ತಿದ್ದಿ ಹೃದಯ ಶುದ್ಧ ಮಾಡು ಪ್ರದ್ಯುಮ್ನನೆ
- ಈಶ ನಿನ್ನ ಚರಣ ಭಜನೆ (ಬೆ-೬೫-೧೪)

೨೮೭೦. **ಪ್ರಧಾನಿ** - ಅಂತಸ್ಥವಿಲ್ಲದ ಪ್ರಧಾನಿ ಮದ್ಯಪಾನಿ
- ಎನ್ನ ನುಡಿ ಪುಸಿಯಲ್ಲ (ಸ-೪೭-೨)

೨೮೭೧. **ಪ್ರಪಂಚ** - ಪಂಚಬಾಣನ ಪಡೆದ ನೆಲೆಯ ಆದಿಕೇಶವ ಈ ಪ್ರಪಂಚವನು ಬಿಡಿಸೆನ್ನ ವರದಾ
- ಮೊರೆಹೊಕ್ಕೆ ಹರಿ ನಿಮ್ಮ ಚರಣಕಮಲವ (ಸ-೨೧೩-೮)
- ತೆಗೆದು ಪ್ರಪಂಚವಾಸನೆಯ ಬಿಟ್ಟವರಿಗೆ ಮಗನಿದ್ದರೇನು ಇಲ್ಲದೆ ಹೋದರೇನು
- ಮಗನಿಂದೆ ಗತಿಯುಂಟೆ (ಬೆ-೧೪೫-೧)
- ಸಿದ್ಧಿಯಂ ಪೇಳ್ವೆ ಕರಣ ಪ್ರಪಂಚಕೆ ಇದು ಮದ್ದು
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೫)

೨೮೭೨. **ಪ್ರಪಂಚಕ** (ಐಹಿಕದಲ್ಲಿ ಆಸಕ್ತ) - ನಂಬಿಗೆಯು ಇಲ್ಲದ ಪ್ರಪಂಚಕನು ನಾನು

- ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ-೬೩-೩)

೨೮೭೩. ಪ್ರಪಂಚಧರ - ಪಂಚಭೂತಗಳೆಂಬ ಬಯಲ ಜಗಲಿಯೇರಿ ಪ್ರಪಂಚಧರ ಚಿಹ್ನೆಯನು ಕಾಣುವರ ತೋರು
- ನಿಜವರಿತು ಲಿಂಗವನು ಪೂಜೆ ಮಾಡುವರು (ಸ-೧೪೨-೨)

೨೮೭೪. ಪ್ರಭಾಕರ (ಸೂರ್ಯ) - ಪೂರ್ವಾದ್ರಿಯೊಳು ಪ್ರಭಾಕರನುದಿಸೆ ಹರುಷದಲಿ
- ಮೂಸರನ ಜನಕನೇ (ಬೆ-೧೬೮-೧)

೨೮೭೫. ಪ್ರಮಾಣ - ಧಾತುಗ್ರಂಥಗಳೆಲ್ಲ ತೋರಿಸಿ ವೇದಾಂತ ಪ್ರಮಾಣಗಳ ಹಾರಿಸಿ
-ಅಂಧಂತಮಸು ಇನ್ನಾರಿಗೆ (ಬೆ-೮೯-೧)

೨೮೭೬. ಪ್ರಮೇಹ - ಪಶುಗಳನು ಮರ್ದಿಸಿದವಗೆ ಪ್ರಮೇಹವು
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೩)

೨೮೭೭. ಪ್ರವರ್ತಕ - ರಜ ತಮ ಗುಣ ಪ್ರವರ್ತಕ ಮೂಲಾಂತರದಿಂದ ಯಜಮಾನತನದ ಅಹಂಕಾರ ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೧)

೨೮೭೮. ಪ್ರಸನ್ನ - ಬಾಡದಾದಿ ಪ್ರಸನ್ನ ಕೇಶವನೆ ಎನಗಾದ ದುರ್ಮತಿಯ ಪರಿಹರಿಸು ಎಲೆ ದೇವ
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ-೧೪೫-೩)
- ಭಿನ್ನ ನದಿಗಳು ಸನ್ಮೋಹನ ಶಕ್ತಿ ಪ್ರಸನ್ನ ಪಾದಾಬ್ಜದಿಂ ಶೂದ್ರರು
- ವಿಶ್ವಲೋಕೇಶ ವಿಶ್ವಲೋಕೇಶ (ಸ-೨೩೪-೩
- ನಿನ್ನ ಅವಯವದಲ್ಲಿ ಸಕಲವಂ ಪಡೆದ ಪ್ರಸನ್ನ ಕಾಗಿನೆಲೆಯ ಆದಿಕೇಶವರಾಯ
- ವಿಶ್ವಲೋಕೇಶ ವಿಶ್ವಲೋಕೇಶ (ಸ-೨೩೪-೩
- ಕಾಗಿನೆಲೆಯಾದಿಕೇಶವ ಖಳನ ಗರ್ಭವಿಚ್ಛನ ಪ್ರಹ್ಲಾದಗೆ ಪ್ರಸನ್ನವಾದುದರಿಂದ
- ಚೆಲ್ವ ಕಂಗಳ ಚೆಲ್ವಕಾರ (ಸ-೯೯-೩)
- ಬ್ರಹ್ಮಾಂಡ ಕೋಟಿ ತಿಮಿರವ ಗೆಲುವವನ ಒಮ್ಮೆ ನೆನೆಯಲು ಪ್ರಸನ್ನನಾದವನ
- ನೆನೆಯ ಬಾರದೆ ಮನವೆ ಪರಮಪಾವನನ (ಸ-೧೫೨-೨)
- ಮನ್ನಿಸಿ ಕಾಯುವ ಚೆನ್ನಾದಿಕೇಶವ ಪ್ರಸನ್ನನ ತೋರೆನಗೆ
- ರಾಜವದನೆ ಸುರರಾಜನ (ಬೆ-೯೭-೩)

೨೮೭೯. ಪ್ರಸಾದ - ಹರಿತೀರ್ಥ ಪ್ರಸಾದ ಎನ್ನ ಜಿಹ್ವೆಗೊದಗಿತು
- ಬದುಕಿದೆನು ಬದುಕಿದೆನು (ಸ-೧೭೧-೧)
- ಲಿಂಗದ ನೈವೇದ್ಯವ ಮುಟ್ಟದಂತಾಯಿತು ರಂಗನ ಪ್ರಸಾದ ಲೋಕವದು
- ಶಂಕರನಾರಾಯಣ ಬಿಡು (ಬೆ-೧೭೫-೫)
- ಶೇಷಗಿರಿಯ ಮೇಲೆ ಇಪ್ಪ ತಿಮ್ಮ ಶೆಟ್ಟಿ ದೇಶಕೆ ಪ್ರಸಾದವ ನಡಸುವ ಶೆಟ್ಟಿ
- ಬಂದೆವಯ್ಯ ಗೋವಿಂದಶೆಟ್ಟಿ (ಬೆ-೧೫೧-೩)
- ಸುಲಭದಲಿ ಶ್ರೀಪಾದ ತೀರ್ಥ ಪ್ರಸಾದವನು
- ನಾರಾಯಣೆನು ಮನವೆ (ಬೆ-೧೪೧-೨)
- ಬೋಧೆ ಹೇಳುವ ಹರಿದಾಸರ ಪಾದ ತೀರ್ಥ ಪ್ರಸಾದವನುಣಿಸೆನ್ನ
- ದೇಶಾಧಿಪತಿ ನರಹರಿಯೆ (ಬೆ-೨೧-೩)
- ಕನಕನೊಡೆಯನು ಕಾಗೆನೆಲೆಯಾದಿಕೇಶವನ ಜನಕೆ ನಿತ್ಯವು ಪ್ರಸಾದವನು ಕೊಡುತಿಹುದು
- ಬಲ್ಲವರು ಪೇಳರಿ (ಬೆ-೧೬೪-೩)
- ಇಂದು ನಿಮ್ಮ ಹರಿವಾಣ ಪ್ರಸಾದವುಂಟೆನಲಾಗಿ
- ಬಂದೆವಯ್ಯ ಗೋವಿಂದಶೆಟ್ಟಿ (ಬೆ-೧೫೧-೪)
- ತಿರುಮಂತ್ರ ತೀರ್ಥಪ್ರಸಾದಕೊಳಗಾದವರ ತಿರುಪತಿಯ ಯಾತ್ರೆಯನು ಮಾಡಿದ ಮಹಾತ್ಮರನು
- ಮುಟ್ಟಬೇಡಿ ಮುಟ್ಟಬೇಡಿ (ಬೆ-೨೬-೧)

೨೮೮೦. ಪ್ರಹ್ಲಾದ / ಪ್ರಹಲ್ಲಾದ - ಕರಿ ಧ್ರುವ ಪ್ರಹ್ಲಾದ ವಿಭೀಷಣರ ರಕ್ಷಿಸಿದೆ ಪರಂದೇವಿ ವಲ್ಲಭನೆ ವರದಾ
- ಮೊರೆಹೊಕ್ಕೆ ಹರಿ ನಿಮ್ಮ ಚರಣಕಮಲವ (ಸ-೨೧೩-೮)

- ಮಠದೊಳಗೆ ಪ್ರಹ್ಲಾದ ಹರನ ನಾಮ ಸ್ಮರಿಸದೆ ದಿಟದಿ ಹರಿಯ ನಾಮಾವಳಿಯ ನುತಿಪುದ ಕಂಡು
- ಯಾದವಗಿರಿವಾಸನಹುದೋ (ಸ-೨೯೯-೨)
- ಜಗವರಿಯೆ ಪೇರುರವಿರಿದ ಪ್ರಹಲ್ಲಾದವರದ ಅಹೋಬಲ ನರಸಿಂಹನೆ
- ಏನು ಕಾರಣ ಬಾಯ ತೆರೆದಿ (ಬೆ-೧೫೫-೧)
- ಬಗೆಗೊಳಿಸಿ ಪ್ರಹ್ಲಾದ ಪಿತನೊಡಲ ನಿನ್ನ ಕೂರುಗುರಿನಿಂ ಬಗಿಸಿದಾತಂಗೆ ಮುಕುತಿಯ ನೀವೆ
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೧)
- ವಿದುರ ಪ್ರಹ್ಲಾದ ರುಕ್ಮಾಂಗದ ವಿಭೀಷಣರು ಮದಗಜ ಅಜಾಮಿಳ ರುದ್ರ
- ಪೂಸರನ ಜನಕನೇ (ಬೆ-೧೬೮-೩)
- ಅಂಜನಾಸೂನು ಫಣಿಪತಿ ಗರುಡ ಪ್ರಹ್ಲಾದ ಕುಂಜರಾಧಿಪ ಬಲಿ ವಿಭೀಷಣ ಧ್ರುವ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೩)
- ಶುಕಯೋಗೀಶ್ವರ ಬಲ್ಲ ಸುಗುಣಿ ನಾರದ ಬಲ್ಲ ಭಕುತ ಪ್ರಹ್ಲಾದ ಬಲ್ಲ ಬಲಿ ಬಲ್ಲನು
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-೨)
- ಬಲಿ ನಂಬಿ ಪಾತಾಳ ಲೋಕಕರಸಾದನದೆ ಕುಲದ ಪ್ರಹ್ಲಾದನು ನಿಜವ ಕಂಡ
- ನಂಬು ನಾರಾಯಣನ (ಬೆ-೫೩-೧)
- ಮುಕ್ತಿ ಸಾಧನಕೆ ಪ್ರಹ್ಲಾದನೋ ನೀನು
- ಬೆರೆಯದಿರು ಬೆರೆಯದಿರು (ಬೆ-೧೪೩-೬)
- ಜನಕ ಹಿತದವನೆಂದು ನಂಬಬಹುದೇ ಹಿಂದೆ ತನಯ ಪ್ರಹ್ಲಾದನಿಗೆ ಪಿತ ಮುನಿದನು
- ಆರು ಹಿತವರು ಎಂದು ನಂಬಬೇಡ (ಬೆ-೩೩-೧)
- ಪ್ರೇಮದಲಿ ಪ್ರಹ್ಲಾದಗೊಲಿದು ಪಟ್ಟವನಿತ್ತೆ ಸಾಮಜಾರಿಯ ವದನ ಶರಣೆಂಬೆನು
- ನೋಡಯ್ಯ ನಿನ್ನ ದಾಸರ (ಬೆ-೮೫-೪)
- ಭೂಮಿ ನೆಗಹುದ ಬಲ್ಲ ಪುಟ್ಟ ಮಗು ಪ್ರಹ್ಲಾದಗೊಲಿದನಲ್ಲ
- ನಾರಾಯಣನೆ ಈತ (ಸ-೧೩೮-೨)
- ಬಂಧು ಹದುಳ ಪ್ರಹ್ಲಾದನ ಹೆದರಿಸಿದಸುರನ ಉದರವ ಬಗೆದಂಥದುಭುತ ಮಹಿಮನ
- ಮರೆಯದಿರು ಹರಿಯ (ಸ-೨೦೩-೧)
- ವಸುಧೆಯೊಳು ಕಲ್ಲಾಗಿ ಬಿದ್ದ ಸತಿಯಳ ಕಾಯ್ದೆ ಶಿಶುವು ಪ್ರಹ್ಲಾದಗೊಲಿದೆ
- ವಾಸುದೇವಾಯ ನಮೋ (ಬೆ-೯೦-೬)

೨೮೮೧. ಪ್ರಳಯ - ಪ್ರಳಯ ಕೋಟಿ ಪ್ರಾಣಿಗಳಿಗೆ ಹೊಳವುಗಾಣಲೀಸದಂತೆ ಬೆಳೆದು ಹೋಗುವ ಗತಿಯೆಂಬುದಿತ್ತಲರಸುತ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೭)
- ಈ ತೆರದಿ ಯುಗ ಪ್ರಳಯವಾಗಿಹೋದುವು ಎಷ್ಟು
- ಇರಬಂದುದಿಲ್ಲ ಸಂಸಾರ (ಬೆ-೧೧೩-೩)
- ಮೂತ್ರ ಮಲ ರಕ್ತ ಕೀವದ ಪ್ರಳಯದೊಡ ಲೆಂದು ವಿಸ್ತರಿಸಿ ತಿಳಿದಾತ ಪರಮ ಯೋಗಿ
- ತಾನಾರು ದೇಹವಾರು (ಬೆ-೧೪-೧)

೨೮೮೨. ಪ್ರಳಾಪ - ಬಹು ಪ್ರಳಾಪಮಂ ಗೈವ ಸತಿ ಅಂದದಲ್ಲಿಹ ಮಂದಿರ
- ಅಣುಮಹತ್ತಾದ ದೇವ (ಬೆ-೭೧-೨)

೨೮೮೩. ಪ್ರಾಕಾರ - ಹೊರಸುತ್ತು ಪ್ರಾಕಾರ ಸುತ್ತಿ ನಾ ಬರುವೆ
- ಬಂಟನಾಗಿ ಬಾಗಿಲ ಕಾಯ್ವೆ (ಬೆ-೪೫-೧)

೨೮೮೪. ಪ್ರಾಚೀನ - ಪ್ರಾಚೀನಕರ್ಮವಿದು ಬಿಡಲರಿಯದು ಯೋಚನೆಯ ಮಾಡಿ ಬಳಲುವುದೇಕೊ ಮನುಜ
- ಪ್ರಾಚೀನ ಕರ್ಮವಿದು (ಬೆ-೧೦೭-ಪ)

೨೮೮೫. ಪ್ರಾಜ್ಞ - ಜಗದೊಳಗೆ ತಾನು ತಂದೆಯ ಮಾತು ಕೇಳದಾ ಮಗನು ಇಹ ಪರಕೆ ಸಲುವನೆ ಪ್ರಾಜ್ಞನೆ
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೧)
- ದೇಶದೊಳು ವಂಶಕಂಟಕರೆನಿಸಿದವರೊಳಗೆ ಭಾಷಣವ ಮಾಡಬಪ್ಪುದೆ ಪ್ರಾಜ್ಞರು
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೪)

೨೮೮೬. ಪ್ರಾಣ - ನೀನಿದ್ದರೆ ಕನಕ ಪ್ರಾಣ

ತೆರಳುವ ತನಕ ಶ್ರೀನಿಧೇ ಆದಿಕೇಶವ ಎನ್ನ ಜನಕ
- ಕದರಮಂಡಲಗಿಯ ಕರುಣಿ ಹನುಮ ರಾಯ (ಸ-೭೫-೩)
- ಕಾಮಧೇನುವಿಗಾಗಿ ಕಾರ್ತವೀರ್ಯಾರ್ಜುನ ಆ ಮಹಾ ಮುನಿಯ ಪ್ರಾಣಕೆ ಮುನಿಯೆ
- ತಾಳಲ್ಲಲ್ಲಲ್ಲ್ಯೋ ಮಾಸಾಳಲ್ಲಲ್ಲಲ್ಲ್ಯೋ (ಸ-೧೧೦-೬)
- ಉರಗನ ಮಗಳ ಗಂಡಗೆ ಪ್ರಾಣವಿತ್ತವನ ಗೋವಿಂದ ಎನ್ನಿರೋ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೧)
- ಧೀರತನದಲಿ ಅಕ್ಷಕುಮಾರನ ಪ್ರಾಣವನು ಕೊಂಡಗೆ
- ಶರಣು ಶರಣು ದಶರಥರಾಮ ದೂತಗೆ (ಸ-೨೩೬-೧)
- ವಸ್ತು ಪ್ರಾಣನಾಯಕನು ದೊರಕಲಿಲ್ಲವು
- ಡಿಂಬಿನೊಳು ಪ್ರಾಣವಿರಲು (ಬೆ-೧೧೭-೫)
- ಓಡಿ ಕಂಠೋಪದಲಿ ಪ್ರಾಣ ನಿಲ್ಲದೆಯೆ ಒದ್ದಾಡುತಿಹ ಸಮಯದಲಿ
- ಅಣುಮಹತ್ತಾದ ದೇವ (ಬೆ-೭೧-೧)
- ಕರಗಳ ನೆಗಹಿ ಇಂದು ಪ್ರಾಣಬಿಡುವೆನೆಂದು ನಿಶ್ಚೈಸಿ ಗೋವಿಂದ ಎಂದಳು ಮೃಗಾಕ್ಷಿ
- ವಾಸುದೇವಾಯ ನಮೋ (ಬೆ-೯೦-೮)
- ಬರದಿದ್ದರೆ ಎನ್ನ ಪ್ರಾಣ ಉಳಿಯದೊ ರಂಗ
- ಬಾರೊ ನಮ್ಮ ಮನೆತನಕ (ಬೆ-೧೦೬-ಪ)
- ಶಾಪದಿ ಬಹುಕಾಲ ಅಹಲ್ಯೆಯು ಶಿಲೆಯಾಗೆ ಆ ಪ್ರಾಣ ನಿರ್ಮಿಸಿದ ಅಧಿಕ ಪಾದ
- ಎಂಥ ಕೀರುತಿ ಪೊತ್ತುವೆರಡು ಪಾದ (ಬೆ-೮೩-೨)
- ಹೊಟ್ಟೆ ಬಲು ಕೆಟ್ಟದೆಂದು ಎಷ್ಟು ಕಷ್ಟಪಟ್ಟು ಪ್ರಾಣಬಿಟ್ಟು ಹೋಗುವಾಗ ಗೇಣು ಬಟ್ಟೆ ಕಾಣಲಿಲ್ಲವೊ
- ಡಿಂಬಿನೊಳು ಪ್ರಾಣವಿರಲು (ಬೆ-೧೧೭-೧)
- ಬಿಟ್ಟು ಪ್ರಾಣವ ಪೋಗೆ ಪೆಣನೆಂದು ಮೂಲೆಯಲಿ
- ನೊಂದೆನಾ ಹರಿಯೆನ್ನದೆ (ಬೆ-೧೩-೪)
- ನೆಟ್ಟನೆ ರಣದೊಳು ಕಾದದೆ ಪ್ರಾಣವ ಬಿಟ್ಟು ಕೊಂದವನು ಕರ್ಣನೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೪)
- ಸರಳಮಂಚದ ಮೇಲೆ ಮಲಗಿ ಪ್ರಾಣವ ಬಿಟ್ಟುಕುರುಪನ ಕೊಂದವ ಭೀಷ್ಮನೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೨)
- ನಿಮ್ಮ ತನು ಮನ ಪ್ರಾಣವ ವ್ಯರ್ಥವ ಮಾಡದೆ ಶಿವ ಶಿವ ಎನ್ನಿರೊ
- ಶಿವ ಶಿವ ಶಿವ ಎನ್ನಿರೊ (ಬೆ-೩_೨)
- ಪ್ರಾಣವನು ಪರರು ಬೇಡಿದರೆತ್ತಿ ಕೊಡ ಬಹುದು
- ತೊರೆದು ಜೀವಿಸಬಹುದೆ (ಬೆ-೫೫-೩)
- ಪ್ರಣವ ಗೋಚರನಾಗಿ ಲೀಲೆಯಿಂದಲಿ ಬಂದು ಹೆಣಕೆ ಪ್ರಾಣವನು ತಂದಿತ್ತ ಮಹಾತುಮನೆ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೧)
- ಡಿಂಬಿನೊಳು ಪ್ರಾಣವಿರಲು ಕಂಬ ಸೂತ್ರ ಗೊಂಬೆಯಂತೆ
- ಡಿಂಬಿನೊಳು ಪ್ರಾಣವಿರಲು (ಬೆ-೧೧೭-ಪ)

೨೮೮೭. **ಪ್ರಾಣನಾಥ/ಪ್ರಾಣನಾಯಕ/ಪ್ರಾಣವಲ್ಲಭ** - ಆ ಸುಗ್ರೀವ ಜಾಮಾತ ಮುಖ್ಯ ಪ್ರಾಣನಾಥ ವಿಶಾಲ ಗುಣವಂತನೆ ಹಣುವಂತನೆ
- ಕದರಮಂಡಲಗಿಯ ಕರುಣಿ ಹನುಮ ರಾಯ (ಸ-೭೫-೨)
- ಪ್ರಾಣನಾಯಕನಾದ ಆದಿಕೇಶವರಾಯ ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದೊ
- ತೊರೆದು ಜೀವಿಸಬಹುದೆ (ಬೆ-೫೫-೩)
- ಮರೆದಿರಲಾರೆನೆನ್ನ ಪ್ರಾಣವಲ್ಲಭ ದಿನಕರ ಕೋಟಿಕಿರಣ ಪ್ರಕಾಶವುಳ್ಳವನ
- ಕರೆತಾರೆ ಕಾಮಿನಿಕಮಲಜಪಿತನ (ಬೆ-೯೩-ಅ)

೨೮೮೮. **ಪ್ರಾಣಹತ್ಯ** - ಪ್ರಾಣಹತ್ಯವ ಮಾಳ್ಪುದಾವ ಸತ್ಕರ್ಮವೊ ಶ್ರೀನಿವಾಸನ ನಾಮಸ್ಮರಣೆಯ ಮಾಡೊ
- ಗೋವಿಂದ ಗೋವಿಂದ ಎನ್ನಲರಿಯದೆ

(ಬೆ-೧೬-೧)
- ಕ್ಷೂಣವಿಲ್ಲದೆ ತಾಯ ಶಿರವರಿದು ತಂದೆಯನು ಪ್ರಾಣಹತ್ಯವ ಮಾಡಿದರ ಕುಲವನು
- ನೋಡಯ್ಯ ನಿನ್ನ ದಾಸರ (ಬೆ-೮೫-೬)

೨೮೮೯. **ಪ್ರಾಣಾಹುತಿ** - ಗಾಣದ ತುದಿಯೊಳಿರ್ಪ ಭೂನಾಗನ ಕಂಡು ಪ್ರಾಣಾಹುತಿಯೆಂದು ಸವಿವ ಮೀನಂತೆ
- ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-೩)

೨೮೯೦. **ಪ್ರಾಣಿ** - ಪ್ರಳಯ ಕೋಟಿ ಪ್ರಾಣಿಗಳಿಗೆ ಹೊಳವುಗಾಣಲೀಸದಂತೆ ಬೆಳೆದು ಹೋಗುವ ಗತಿಯೆಂಬುದಿತ್ತಲರಸುತ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೭)
- ಹೊತ್ತುಕೊಂಡು ತಿರುಗಿದೆ ರೊಕ್ಕದಾ ಪ್ರಾಣಿಯನ್ನು
- ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ-೭೧-೨)
- ಹೇಗೆ ನೀ ದಾಸನಾದೆ ಹೇ ಪ್ರಾಣಿ ಹೇಗೆ ನೀ ದಾಸನಾದೆ
- ಹೇಗೆ ನೀ ದಾಸನಾದೆ (ಬೆ-೨೨-ಪ)
- ಶಕುತ ನಿನ್ನ ಹಿರಿಯ ಮಗನು ಪ್ರಾಣಿಗಳ ಮೋಹಕದಿ ಮರುಳು ಮಾಳ್ಪ ಕಿರಿಯ ಮಗ ನಿನಗಿಹನು
- ಸಿರಿಯ ಮದವೆ ಮುಕುಂದ (ಬೆ-೬೯-೧)

೨೮೯೧. **ಪ್ರಾಣಿಹಿಂಸೆ** - ಪ್ರಾಣಿಹಿಂಸೆಗಳನ್ನು ಮಾಡುವನೆ ಸುಜ್ಞಾನಿ
- ಸಹಜವಿದು ಈ ನುಡಿಯು (ಬೆ-೧೪೯-೨)

೨೮೯೨. **ಪ್ರಾಪ್ತಿ** - ಅರಿಯದಿದ್ದರೆ ನರಕವೇ ಪ್ರಾಪ್ತಿ
- ಅರಿತು ನಡೆಯಲಿಬೇಕು (ಸ-೭-ಪ)
- ಮೃತ್ಯುನಾಶಕನೆಂದು ಸುತ್ತಿದ್ದಾನೆ ಹುತ್ತಿನೊಳಗೆ ಇಹ ಪ್ರಾಪ್ತಿಯಾಯಿತು
- ನಮಗೆಲ್ಲ ಮನೆಗಳಯ್ಯ (ಸ-೧೩೨-೨)
- ಪಾಂಡವರೈವರು ಲಲನೆ ದ್ರೌಪದಿಯೊಂದಿಗೆ ವನವಾಸ ಹೋಗಿ ಹೊಲದೊಳಗೆ ಇಹ ಪ್ರಾಪ್ತಿಯಾಯಿತು
- ನಮಗೆಲ್ಲ ಮನೆಗಳಯ್ಯ (ಸ-೧೩೨-೪)
- ರೂಢಿಯೊಳತಿ ಸೇವಕನಾದ ಗರುಡನಿಗೆ ಬೋಡು ಮರದ ಮೇಲೆ ಪ್ರಾಪ್ತಿಯಾಯಿತು
- ನಮಗೆಲ್ಲ ಮನೆಗಳಯ್ಯ (ಸ-೧೩೨-೩)
- ಸಲೆ ದೈತ್ಯನ ಕೊಂದು ಸೀತೆಯ ತಂದನಿಗೆ ಗಿರಿ ತಲೆಯಮೇಲೆ ಇಹ ಪ್ರಾಪ್ತಿಯಾಯಿತು
- ನಮಗೆಲ್ಲ ಮನೆಗಳಯ್ಯ (ಸ-೧೩೨-೧)
- ತನ್ನ ಪ್ರಾಪ್ತಿಯ ಫಲವ ತಾನರಿಯದೆ ಅನ್ಯರಿಗೆ ಆಡುವುದು ಅವಗುಣವು ಮರುಳೆ
- ತನ್ನ ಪ್ರಾಪ್ತಿಯ ಫಲವ (ಬೆ-೧೧೨-ಪ)

೨೮೯೩. **ಪ್ರಾಯಶ್ಚಿತ್ತ** - ರೂಢಿಯಲಿ ಗುರುದ್ರೋಹವನು ಮಾಡಿದವನ ಮೊಗನೋಡಿದಾಗಲೆ ಪ್ರಾಯಶ್ಚಿತ್ತವುಂಟು
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೩)

೨೮೯೪. **ಪ್ರಾರಬ್ಧ** - ಸಂಚಿತದ ಪ್ರಾರಬ್ಧದಿಂದಲಿ ಎನ್ನ ಕಿಂಚಿತುವನು ಕಳೆಯಲಾಪೆಯ ರಂಗ
- ನೀನೇನ ಮಾಡಲಾಪೆ ರಂಗಯ್ಯ (ಬೆ-೪೮-೨)

೨೮೯೫. **ಪ್ರಿಯ** - ಕಾನನ ಜನನಿಯ ಕೊಂದು ಪ್ರಿಯದಲಿ ನಿಧಾನದಿ ಶರಧಿಶಯನ ಮಾಡಿದಾತನು
- ಈತನೇನೆ ನಿನ್ನ ಮಗನು (ಸ-೩೮-೨)
- ಭೂಸುರಪ್ರಿಯಭಜಕ ಪೋಷಕನೆ ರಕ್ಷಿಪುದು ಕೇಶವನೃಸಿಂಹರೊಲಿದು
- ವಾಸುದೇವಾಯ ನಮೋ (ಬೆ-೯೦-ಪ)
- ವಾಮನ ಶ್ರೀಧರ ಹೃಷಿಕೇಶ ಕೇಶವ ದಾಮೋದರ ಪ್ರಿಯದಾನವೇಂದ್ರ
- ಅಭ್ಯಾಸವನು ಮಾಡಬೇಕು (ಬೆ-೩೮-೨)
- ಪಗಲಿರುಳು ಸಾಮಗಾನಪ್ರಿಯನ ಮುಂದೆ ಗೀತಗಳ ನಾನೇಂ ಪಾಡಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೪)
- ವೃಂದಾವನಪ್ರಿಯನೆ ನಿನ್ನ ಮರೆತಿದ್ದೆ
- ಅಣುಮಹತ್ತಾದ ದೇವ (ಬೆ-೭೧-೨)

೨೮೯೬. **ಪ್ರೀತಿ** - ಎಷ್ಟು ಪ್ರೀತಿಯೊ ಮನಕೆ ಎಷ್ಟು ಪ್ರೀತಿಯೊ

ರಸನ ಹಿಡಿವನೆಂದು ಬಲು ತಪಸಿಗಳ ಕಳುಹಿ ತತ್ತ್ವ ಬೋಧಿಸಿ
– ನೀನಾವ ಬಾಂಧವನೊ (ಬೆ–೭೮–೫)
– ತತ್ತ್ವವನರಿತು ಸುತತ್ತ್ವವ ಬೋಧಿಸಿ ಉತ್ತರ ವಿತ್ತವನ
– ತೋರೆ ಬೇಗನೆ ಸಖಿ (ಬೆ–೯೪–೨)
– ಹೀನ ಮನುಜನಿಗೆ ಜ್ಞಾನವ ಬೋಧಿಸೆ ಹೀನ ವಿಷಯ ಅಳಿದ್ಹೋದೀತೆ
– ಕೇಶವನೊಲುಮೆಯು ಆಗುವ ತನಕ (ಸ–೮೯–೨)

೩೧೬೯. **ಬೋಧೆ** – ಬೋಧೆ ಹೇಳುವ ಹರಿದಾಸರ ಪಾದ ತೀರ್ಥ ಪ್ರಸಾದವನುಣಿಸೆನ್ನ
– ದೇಶಾಧಿಪತಿ ನರಹರಿಯೆ (ಬೆ–೨೧–೩)

೩೧೭೦. **ಬೋವ** (ಸಾರಥಿ) – ಮಾವ ಕಂಸನ ಕೊಂದು ಮನುಜ ವೇಷದಲಿ ಗಾಂಡೀವಿಯಾ ರಥದ ಬಂಡಿಯ ಬೋವನಾದೆ
– ನೀನಾವ ಬಾಂಧವನೊ (ಬೆ–೭೮–೧)

೩೧೭೧. **ಬೋಳೈಸು** – ತುರು ಹಿಂಡುಗಳ ತರತರದಲಿ ತನ್ನ ಕರದಿಂ ಬೋಳೈಸಿ ಸಂತೈಸುತ
– ಯಾದವರಾಯ ಬೃಂದಾವನದೊಳು (ಸ–೨೨೦–೩)

೩೧೭೨. **ಬೌದ್ಧ** (ಬುದ್ಧ) – ನರಪತಿಯ ಯದು ವೀರ ಬೌದ್ಧನ ತುರಗವೇರಿದ ಆದಿಕೇಶವನ
– ಇಂದು ನೀ ಕರೆದುತಾರೆ (ಬೆ–೯೨–೩)

೩೧೭೩. **ಬೌದ್ಧ** (ಬುದ್ಧನ ಧರ್ಮಕ್ಕೆ ಸೇರಿದ)
– ಮಧ್ಯಗೃಹದಾತನಾ ಸತಿಯಲ್ಲಿ ಉದಿಸಿದಗೆ ಬೌದ್ಧ ಚಾರ್ವಾಕ ಮಾಯ್ಗಳ ಜರಿದಗೆ
– ಜಯಮಂಗಲಂ ನಿತ್ಯ (ಬೆ–೧೭೧–)
– ನುತ ಬೌದ್ಧ ರೂಪದಿ ಬಹು ಭಂಗಪಡಿಸಿದ ರತಿಪತಿಪಿತನೆಂಬ ಮಾಸಾಳಮ್ಮ
– ತಾಳಲ್ಲಲ್ಲಲ್ಲಯ್ಯೋ ಮಾಸಾಳಲ್ಲಲ್ಲಲ್ಲಯ್ಯೋ (ಸ–೧೧೦–೯)

೩೧೭೪. **ಬ್ರಹ್ಮ** – ಹಮ್ಮನಾಡಿ ಮುನ್ನ ಬ್ರಹ್ಮ ತಾ ಕೆಟ್ಟ
– ನಾ ನಿಮ್ಮ ದಾಸರ ದಾಸ (ಸ–೧೩೪–೪)
– ನಾಡಿ ಹಲವು ಕಟ್ಟದನಕ ಬ್ರಹ್ಮನಾಡಿಯೊಳು ಪೊಕ್ಕು ಮುಳುಗಾಡದನಕ
– ಸದರವಲ್ಲವೊ ನಿಜಯೋಗ (ಸ–೨೪೩–೨)
– ಮುಂದುದರದಿ ವಿಷ್ಣು ಹರ ಬ್ರಹ್ಮ ಸಹಿತು ದರದಲಿ
– ವಿಶ್ವಲೋಕೇಶ ವಿಶ್ವಲೋಕೇಶ (ಸ–೨೩೪–೨)
– ರಂಗನಂತರಂಗ ಹಲವಂಗ ತಿಳಿಯದು ಬ್ರಹ್ಮಾದಿಗಳಿಗೆ
– ರಂಗನೆಂಥವನೆಂಥವನೆಲೆ ತಂಗಿ (ಸ–೨೨೨–ಪ)
– ತತ್ತಿಯಾದ ಬ್ರಹ್ಮನೀಗೆ ದಿಕ್ಕು ಅಖಿಲಾಂಡ ವೆಲ್ಲ ಹೆತ್ತ ತಂದೆಗಾದವನೆ ನಿತ್ಯವುಳ್ಳವ
– ಎರಡು ಸಾವಿರದ ಜಿಹ್ವೆಯುರಗ (ಸ–೪೭–೪)
– ಹರ ಬ್ರಹ್ಮರು ನಲಿದಾಡುತಿರೆ ತುಂಬುರು ನಾರದರು ಪಾಡುತಿರೆ
– ಯಾದವರಾಯ ಬೃಂದಾವನದೊಳು (ಸ–೨೨೦–೨)
– ಬ್ರಹ್ಮ ಕಪಾಲವ ಧರೆಗಿಳುಹಿದನ ತಮ್ಮ ಅಣ್ಣರನು ಕಡಿದಾಡಿಸಿದವನ
– ಕರೆತಾರೆ ಕಾಮಿನಿಕಮಲಜಪಿತನ (ಬೆ–೯೩–೧)
– ಸುಳಿದ ವಿಷ್ಣು ಬ್ರಹ್ಮನೆಂಬ ಹಣೆಯ ಕಣ್ಣ ರುದ್ರನೆಂಬ ಮಣೆಯಗಾರರೆಪ್ಪತ್ತೇಳು ಕೋಟಿ ಸಂಖ್ಯೆಯು
– ಎರಡು ಸಾವಿರದ ಜಿಹ್ವೆಯುರಗ (ಸ–೪೭–೬)
– ಜತೆ ಅಳಿಯರು ಬ್ರಹ್ಮ ಮನ್ಮಥರಿವರಿರಲು ಕ್ಷಿತಿಯೊಳಗೆ ಶಶಿ ತಾನು ಹತವಹ ಸಮಯದಲಿ
– ಆರು ಸಮಯಕ್ಕೊದಗಲಿಲ್ಲ (ಬೆ–೩೨–೩)
– ಏಕೋದೇವನದ್ವಿತೀಯ ಬ್ರಹ್ಮ ನೀನೆಂಬುದಕೆ ಏಕಾರ್ಣವದಲಿದ್ದ ವಟಪತ್ರ ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ–೫೦–೩)
– ಮಂಗಳಂ ಬುದ್ಧ ಕಲ್ಕಿಗೆ ಬ್ರಹ್ಮ ರುದ್ರೇಂದ್ರ ವಂದಿತಗೆ ಮಧುವೈರಿಗೆ
– ವಾಸುದೇವಾಯ ನಮೋ (ಬೆ–೯೦–೧೫)
– ಹೆಮ್ಮಕ್ಕಳನು ಕರೆದು ಬಂಧಿಸಿ ಒಯ್ಯಲು ಬ್ರಹ್ಮ ಜಟ್ಟಿಗನ ಶಿರ ಹರಿದೆ ನರಹರಿಯೆ
– ಸಾಲದೆ ನಿನದೊಂದು ದಿವ್ಯನಾಮ

(ಬೆ–೧೭೪–೩)
– ಮುದದಿ ಬ್ರಹ್ಮನ ಕಪಾಲವ ಸಿದ್ಧಗೊಳಿಸಿ
– ಬೊಂಬೆಯಾಟವನಾಡಿಸಿದ (ಬೆ–೭೯–೩)
– ಕಂಠ ಪಿಡಿದ ಬ್ರಹ್ಮನ ನುಂಗಿತೆಲೊ ದೇವ
– ಹಲವು ಜೀವನವ ಒಂದೆಲೆ ನುಂಗಿತು (ಬೆ–೧೫೮–೨)
– ಗಾರುಡಿಯ ಮತ ಬಿಟ್ಟು ನಾದ ಬ್ರಹ್ಮನ ಪಿಡಿದು ಸಾರಿಸಾರಿ ಮುಕ್ತಿಯನ್ನು ಶಮನದಿಂದ ಮತ್ತೆ ಸುಮನದಿಂದ
– ದಾಸನಾಗೋ ಭವಪಾಶ ನೀಗೋ (ಬೆ–೨೦–೫)
– ಬಲ್ಲವರೆನಿಪರು ಬಲ್ಲವರರಿಯುರು ಫುಲ್ಲಲೋಚನ ಪೂರ್ಣಬ್ರಹ್ಮನೆಂಬುದನು
– ಬಲ್ಲವರೆನಿಪರು ಬಲ್ಲವರರಿಯರು (ಬೆ–೭೩–ಪ)
– ಭಿನ್ನಭೇದಗಳೆಂಬ ಬಲು ಸಂಶಯ ಕಳೆದು ತನ್ನೊಳಗೆ ತಾ ತಿಳಿದು ತಾರಕಬ್ರಹ್ಮವ
– ಆರಿಗಳವಲ್ಲಾತ್ಮ ಯೋಗಸಿದ್ಧಿ (ಬೆ–೧೨೬–೨)
– ಈ ತೆರದಿ ಹರ ಬ್ರಹ್ಮರೆಷ್ಟು
– ಇರಬಂದುದಿಲ್ಲ ಸಂಸಾರ (ಬೆ–೧೧೩–೩)

೩೧೭೫. ಬ್ರಹ್ಮಚಾರಿ – ಕ್ಷಮೆಯನಳೆಯೆ ಬ್ರಹ್ಮಚಾರಿಯಾದೆ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೧)

೩೧೭೬. ಬ್ರಹ್ಮಲಿಖಿತ (ಹಣೆಯ ಬರಹ) – ಬ್ರಹ್ಮಲಿಖಿತವ ಮೀರಿ ಬಾಳ್ವರುಂಟು ನಿರ್ಮಳದಿ ವೈಷ್ಣವರ ಮನಮುಟ್ಟಿ ಭಜಿಸಿ
– ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ–೨೫–ಪ)

೩೧೭೭. ಬ್ರಹ್ಮಹತ್ಯೆ – ಮಾನ ಮರುಳಾದವನ ಮರ್ದಿಸಿದ ಬ್ರಹ್ಮಹತ್ಯೆ ಮಹಿಗೆ ಇಳುಹಿದ ನಾವನು
– ಆತನೇ ಪರಮಾತ್ಮ ಪರತತ್ತ್ವ (ಬೆ–೭೪–೧)

೩೧೭೮. ಬ್ರಹ್ಮಾಂಡ – ಬ್ರಹ್ಮಾಂಡ ಕೋಟಿ ತಿಮಿರವ ಗೆಲುವವನ ಒಮ್ಮೆ ನೆನೆಯಲು ಪ್ರಸನ್ನ ನಾದವನ
– ನೆನೆಯಬಾರದೆ ಮನವೆ ಪರಮ ಪಾವನನ (ಸ–೧೫೨–೨)
– ಕಮಲ ಬ್ರಹ್ಮಾಂಡ ಕೋಟಿ ಒಡಲೊಳು ತಾಳ್ದಂಥ ರಮಾಧವ ನಿಮಗೆ ನೀರೊಳಗೆ ವಾಸ ವಾಯಿತು
– ನಮಗೆಲ್ಲಿ ಮನೆಗಳಯ್ಯ (ಸ–೧೩೨–೮)
– ಕಮಲದಲಿ ಬ್ರಹ್ಮಾಂಡ ತೋರಿದೆ ಕಮಲಧರ ನೀನೆಂದು
– ಭವಭಯವಿನಾಶ ಭೋ (ಬೆ–೪೧–೩)
– ಕ್ಷೋಣಿಯೊಳು ಕ್ಷೀಣ ದೈವ ಬ್ರಹ್ಮಾಂಡ ಕೋಟಿಗಳು ದಾನವಾರಿಯ ದಾಸಗಳವಡವು ನಾನರಿವೆ
– ಬೇಡ ಬೇಡ ಎಲೆಲೆ ದುರಿತಗಳಿರ (ಬೆ–೨೯–೨)
– ಸಂದೇಹವ ಮಾಡದಿರು ಅರಿವು ಎಂಬ ದೀಪ ಹಿಡಿದು ಇಂದು ಕಾಣೊ ದೇಹದಲಿ ಪಿಂಡಾಂಡ ಹಾಗೆ ಬ್ರಹ್ಮಾಂಡ
– ದಾಸನಾಗೋ ಭವಪಾಶ ನೀಗೋ (ಬೆ–೨೦–೪)
– ಪೂಸರನ ಜನಕನೇ ಶತಕೋಟಿತರಣಿ ಪ್ರಕಾಶ ಅಗಣಿತಕೋಟಿಬ್ರಹ್ಮಾಂಡನಾಯಕನೆ
– ಪೂಸರನ ಜನಕನೇ (ಬೆ–೧೬೮–ಪ)
– ಭಾನು ಮೊದಲಾದಖಿಳ ಬ್ರಹ್ಮಾಂಡಗಳಿಗೊಂದು ಪಾದ ಹೊದಿಸಿದನಾವನು
– ಆತನೇ ಪರಮಾತ್ಮ ಪರತತ್ತ್ವ (ಬೆ–೭೪–೧)

೩೧೭೯. ಬ್ರಹ್ಮೇತಿ – ನಗಜೆಯಾಳ್ದನ ಬ್ರಹ್ಮೇತಿ ಬಂದು ಕಾಡಲಾಗಿ ರುದ್ರಾದಿಗಳೇನ ಮಾಡು ತಿರ್ದರಾ ಶೈಲದೊಳಗೆ
– ಬಂಧುಗಳದಾರಿಗಾರಿದ್ದರೇನು (ಸ–೧೭೩–೧)

೩೧೮೦. ಬ್ರಾಹ್ಮಣ – ವಾವೆ ವರಸೆಯು ತಪ್ಪಿ ವೈರಿವರ್ಗವು ಹೆಚ್ಚಿ ದೇವಬ್ರಾಹ್ಮಣ ಗುರು ಹಿರಿಯರನ್ನು ಜರೆದು
– ಕಲಿಯೇರಿ ಬಂತು (ಬೆ–೧೩೦–೨)
– ಕಾಲಕರ್ಮದೊಳುಪೇಕ್ಷೆಯ ಮಾಡಿ ಹರಿ ಭಕುತಿ ಶೀಲರಹಿತ ಬ್ರಾಹ್ಮಣನಾಗಲೊಲ್ಲೆ
– ದೇಶಾಧಿಪತಿ ನರಹರಿಯೆ (ಬೆ–೨೧–೪)

- ಕುಬ್ಜ ಬ್ರಾಹ್ಮಣನಾಗಿ ಕುಂಭಿನಿ ಈರಡಿ ಮಾಡಿ ಹೆಜ್ಜೆಯೊಳಡಗಿಟ್ಟ ಹೆಚ್ಚಿನ ಪಾದ
- ಎಂಥ ಕೀರುತಿ ಪೊತ್ತುವೆರಡು ಪಾದ (ಬೆ-೮೩-೧)
- ಬಾಗಿ ಪರಸತಿಯರನು ಬಯಸಿ ಕಣ್ಣಿಡುವಂತ ಯೋಗ ತಪ್ಪಿದರಲೆಲ್ಲ ದೇವ ಬ್ರಾಹ್ಮಣರೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೨)

## ಭ

೩೧೮೧. **ಭಂಗ** - ಮೂಢ ಮೂರ್ಖರ ಸಂಗ ಬಲು ಭಂಗ ಎಲೊ ರಂಗ
- ಸಜ್ಜನರ ಸಂಗದೊಳಗಿರಿಸೆನ್ನ (ಸ-೨೪೧-೧)
- ಮರುಳ ಪಾಮರ ಸಂಗ ಬಲು ಭಂಗ ಎಲೆ ರಂಗ
- ಸಜ್ಜನರ ಸಂಗದೊಳಗಿರಿಸೆನ್ನ (ಸ-೨೪೧-೨)
- ಕಾಗಿನೆಲೆಯ ಆದಿಕೇಶವನ ಅಂಘ್ರಿ ನೆನೆಯದಿಹ ಭಾಗವತರ ಸಂಗ ಬಲು ಭಂಗ ಎಲೊ ರಂಗ
- ಸಜ್ಜನರ ಸಂಗದೊಳಗಿರಿಸೆನ್ನ (ಸ-೨೪೧-೩)
- ಹೆಜ್ಜೆಗೆ ಸಾವಿರ ಹೊನ್ನನಿತ್ತರೂ ಬೇಡ ಬಲು ದುರ್ಜನರ ಸಂಗ ಬಲು ಭಂಗ ಹರಿಯೆ
- ಅರಿತು ನಡೆಯಲಿಬೇಕು (ಸ-೭-೧)
- ರಂಗರೂಪವ ತೋರಿ ಭಂಗ ಭವಗಳನಳಿದು ಡಂಗುರವ ಹೊಯ್ಯೊ ನಿನ್ನ ಡಿಂಗರಿಗನೆಂದು
- ಹೂವ ತರುವರ ಮನೆಗೆ (ಬೆ-೪೩-೧)
- ನಿಂದಕರ ಸಂಗ ಬಹು ಭಂಗ ರಂಗ
- ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ-೧೧೯-೧)
- ಪರಮಪಾಮರಸಂಗ ಬಹುಭಂಗ ರಂಗ
- ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ-೧೧೯-೪)
- ಕಾಗೆನೆಲೆಯಾದಿಕೇಶವ ಬಿಡಿಸು ಈ ಭಂಗ
- ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ-೧೧೯-೫)
- ಮಂಗಳ ಮಹಿಮ ಭುಜಂಗಶಯನ ನಾರಿ ಭಂಗವ ಕಾಯ್ದುವನ
- ಫುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೩)
- ಗೋವಿಂದ ಗೋವಿಂದ ಎನ್ನಲರಿಯದೆ ವೃಥಾ ನೋವಿಂದ ಭಂಗವ ಪಡುವುದುಚಿತವೆ
- ಗೋವಿಂದ ಗೋವಿಂದ ಎನ್ನಲರಿಯದೆ (ಬೆ-೧೬-ಪ)
- ವಿನಯವಾಗಿಹ ಸಂಗದೊಳು ಭಂಗವುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೩)
- ಲೀಲಾ ಸಾದೃಶ್ಯವ ತೋರುತ ಲಿಂಗಭಂಗವಿಲ್ಲದ ದೇಹ ಹಾರುತ
- ಅಂಥಂತಮಸು ಇನ್ನಾರಿಗೆ (ಬೆ-೮೯-೨)
- ಲೋಲಾಕ್ಷಿಯ ಮಾನಭಂಗಕ್ಕೊದಗಿದಾನೆ
- ಆನೆಯ ನೋಡಿರಯ್ಯ (ಬೆ-೧೫೬-೨)

೩೧೮೨. **ಭಂಗಪಡಿಸು** - ನುತ ಬೌದ್ಧ ರೂಪದಿ ಬಹು ಭಂಗಪಡಿಸಿದ ರತಿಪತಿಪಿತನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಯ್ಯೊ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೯)

೩೧೮೩. **ಭಂಗಿ** (ಗಾಂಜಾ) - ಜಂಗಮಸ್ಥಾವರದ ಹೊಲಬನರಿಯದ ಇಂಥ ಭಂಗಿ ಮುಕ್ಕುಗಳೆಲ್ಲ ಲಿಂಗವಂತರಹುದೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೪)

೩೧೮೪. **ಭಂಗಿಸು** - ಹತಮಾಡಿ ಸತ್ಯಕ್ಕೆ ನಿಂತು ನಗವ ಹೊತ್ತು ಪತಿವ್ರತೆಯರ ಭಂಗಿಸಿ
- ಹರಿಮುಖಿ ಹರಿವಾಣಿ (ಬೆ-೯೮-೩)
- ಜಂಗಮಸ್ಥಾವರಕಾಧಾರವಾಗಿಹಳು ಭಂಗಿಸುತ ಜನರ ಕರ್ಮವ ಕಳೆವಳು
- ಜಗದಂತರ್ಯಾಮಿ ಎಂತೆಂದು (ಬೆ-೫೮-೪)

೩೧೮೫. **ಭಂಜನ** (ನಾಶಮಾಡುವವನು) - ಧೂರ್ತಭಂಜನ ಕಾಗೆನೆಲೆಯಾದಿಕೇಶವನ ಸಂಕೀರ್ತನೆಯ ಮಾಡಿ ಮೋಕ್ಷವನೈದು ಮರುಳೆ

– ಸಂಸಾರವೆಂಬ ಸಾಗರವನು (ಬೆ–೧೮–೩)

**೩೧೮೬. ಭಂಜಿಸು** – ತಂದೆಯ ಮುಂದೆ ಮಗನನು ಬೈದು ಭಂಜಿಸಲು
– ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ–೧೪೫–೧)
– ಭಂಜಿಸಿದವರಿಗೆ ಭಯವ ತೋರುವ ಮುತ್ತು
– ಮುತ್ತು ಬಂದಿದೆ ಕೇರಿಗೆ (ಸ–೨೧೦–೨)

**೩೧೮೭. ಭಂಡ** – ಕಂಡ ಕಂಡವರನು ಕೂಡಿ ಭಂಡಜನ್ಮ ಹೊರೆಯುವವಗೆ
– ದಾಸ ಪಟ್ಟವೋ ಸನ್ಯಾಸಪಟ್ಟವೋ (ಸ–೧೧೮–೧)
– ಬಿಡದೆ ಯಮನಾಳುಗಳು ಬಾರೆಂದು ಎಳೆವಾಗ ಮಡದಿ ಮಕ್ಕಳು ಬಹರೆ ಭಂಡ ಜೀವನವೆ
– ಈ ಸಿರಿಯ ನಂಬಿ ಹಿಗ್ಗಲು ಬೇಡ (ಸ–೪೦–೨)
– ಕರೆಬರಲರಿಯದ ಗಂಡ ಅವ ನಾಚಿಕೆ ಭಂಡ
– ಅಹುದಾದಡಹುದೆನ್ನಿ (ಬೆ–೧೩೨–೪)
– ಭಂಡರಂದದಿ ಬತ್ತಲೆ ಬಹುದಾವಾಟ ಪುಂಡರೀಕಾಕ್ಷನ ನೆನೆ ಕಾಣೊ ಮನವೆ
– ಗೋವಿಂದ ಗೋವಿಂದ ಎನ್ನಲರಿಯದೆ (ಬೆ–೧೬–೨)

**೩೧೮೮. ಭಂಡತನ/ಭಂಡಾಟ** – ದುಂಡು ನಾಮವ ಬರೆದು ಭಂಡತನದಿ ಜಗದಿ ದಂಡಿಗೆ ಬೆತ್ತ ಪಿಡಿವನು ಹೆಂಡಿರ ಕಾಯ್ವನು
– ಹೇಗೆ ನೀ ದಾಸನಾದೆ (ಬೆ–೨೨–೧೯)
– ಭಂಡತನದಲಿ ನಿಂತು ತ್ರಿಪುರರ ಹೆಂಡಿರನೆಲ್ಲ ಕೆಡಿಸ್ಯಾನ್ಯಾ
– ದೇವಿ ನಮ್ಮ ದೇವರು ಬಂದರು (ಬೆ–೭೭–೯)
– ಕಂಡಕಂಡಲ್ಲಿ ಕುಂಡೆಯ ಬಿಟುಗೊಂಡು ಭಂಡತನದಲಿ ನಿಂತಾನ್ಯಾ
– ದೇವಿ ನಮ್ಮ ದೇವರು ಬಂದರು (ಬೆ–೭೭–೯)
– ಗಂಡನುಳ್ಳವಳ ಜೊತೆ ಭಂಡಾಟವ್ಯಾಕಯ್ಯ
– ಬೀದಿಯೊಳು ಯಾತರಾ ನಂಟು ಬೇಡ (ಸ–೧೮೫–೧)

**೩೧೮೯. ಭಂಡು** – ಭಂಡುಕೃತ್ಯ ಮಾಡಿ ನಮ್ಮ ಬಳಲಿಸಿ ಕಳಿಸಿದನು ನೋಡು
– ಸೈಯೇ ಇದು ಸೈಯೇ ಗೋಪಿ (ಬೆ–೧೦೪–೧೧)

**೩೧೯೦. ಭಂಡುಮಾಡು** (ಅಪಮಾನ ಮಾಡು)
– ಮಂಡಲಪತಿಯು ಶೋಧಿಸಿ ಹಿಡಿದೆಳತಂದು ಭಂಡುಮಾಡಲು ಬೆದರುವಳೆ ಕೇಳೆಲೊ ಹರಿ
– ಯಮದೂತರಿನ್ನೇನ ಮಾಡುವರು (ಬೆ–೪೪–೧)

**೩೧೯೧. ಭಕುತ/ಭಕ್ತ** – ಪನ್ನಗ ಶಯನನ ಉನ್ನಂತ ಮಹಿಮನ ಸನ್ನುತ ಭಕುತರ ಸಲಹುವನ
– ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ–೧೯೫–೭)
– ಶುಕಯೋಗೀಶ್ವರ ಬಲ್ಲ ಸುಗುಣಿ ನಾರದ ಬಲ್ಲ ಭಕುತ ಪ್ರಹ್ಲಾದ ಬಲ್ಲ ಬಲಿ ಬಲ್ಲನು
– ಬಲ್ಲವರೆನಿಪರು ಬಲ್ಲವರರಿಯರು (ಬೆ–೭೩–೨)
– ಸುಲಭ ಭಕುತರ ಕಾಯ್ವನೆಂಬುದಕ್ಕೆಲೊ ದೇವ ಫಲುಗುಣನು ವಿದುರ ಅಕ್ರೂರ ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ–೫೦–೨)
– ಸಂತತವು ಭಕ್ತ ಸಂಸಾರವನು ಪೊರೆವ ವೇದಾಂತನುತ ಕಾಗಿನೆಲೆಯಾದಿಕೇಶವ ರಾಯ
– ಬೊಂಬೆಯಾಟವನಾಡಿಸಿದ (ಬೆ–೭೯–೫)
– ಲೋಕದೊಳು ಕಾಗಿನೆಲೆಯಾದಿಕೇಶವ ಭಕ್ತ ಸಾಕಾರನೆಂಬುದಕೆ ಸಕಲ ಭುವನವೆ ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ–೫೦–೩)
– ಭವ ಭಯ ವಿನಾಶ ಭೋ ಭಕ್ತವಿಲಾಸ ಭೋ ಪಾಪವಿನಾಶ ಭೋ ಬಾಡದ ರಂಗೇಶ ಭೋ
– ಭವಭಯವಿನಾಶ ಭೋ (ಬೆ–೪೧–ಪ)
– ಮರಕತನಗರಿಯ ಬಾಡ ಬಂಕಾಪುರದರಸು ಭಕ್ತರಕ್ಷಕ ಆದಿಕೇಶವನ ಪಾದ
– ಎಂಥ ಕೀರುತಿ ಪೊತ್ತುವೆರಡು ಪಾದ (ಬೆ–೮೩–೩)
– ಭಕುತರೊಳು ಘಂಟಕರ್ಣನು ಜಯ ಸುವರ್ಣಕ ಪುತ್ರ
– ಸಿಂಗರದ ಸಿರಿಧರನೆ (ಬೆ–೧೬೭–೨)

- ಅತಿ ಭಕುತರಿಗೆ ಮೆಚ್ಚಿ ಗತಿಮೋಕ್ಷವಿತ್ತನು ಮತಿಭ್ರಷ್ಟ ಅಜಮಿಳನ ಉದ್ಧಾರಮಾಡಿದ
- ನಂಬು ನಾರಾಯಣನ (ಬೆ-೫೩-೩)
- ಪ್ರಕಟಿತಾ ಶುಕ್ರವಾರದೊಳು ತನ್ನ ಭಕುತರಿಗುತ್ಸಾಹ ಸಂಧ್ಯಕಾಲದೊಳು
- ಕೈಯ ತೋರಿದ ಬಗೆಯ (ಸ-೯೧-೧)
- ಆದಿಕೇಶವ(ನ) ಭಕ್ತ ಅವ ಜೀವನ್ಮುಕ್ತ
- ಅಹುದಾದಡಹುದೆನ್ನಿ (ಬೆ-೧೩೨-೫)
- ಭವರೋಗದ ವೈದ್ಯ ಬಾಡದಾದಿಕೇಶವನ ವಿವರವರಿತು ಭಾವಿಸಿ ಭಕ್ತಜನರು
- ಶಂಕರನಾರಾಯಣ ಬಿಡು
(ಬೆ-೧೭೫-೯)
- ಬಲುಹುಳ್ಳ ಭಕ್ತ ಮುನಿ ಸಂನ್ಯಾಸಿ ಯೋಗಿಗಳು ಸುಲಿಸಿಕೊಂಡರು ಕೆಲರು ಸಿಕ್ಕಿದರು ಸೆರೆಯ
- ಪಥ ನಡೆಯದಯ್ಯ (ಬೆ-೯_೧)
- ಪನ್ನಗಶಯನ ಬೇಲಾಪುರದರಸನು ತನ್ನ ನೆನೆವ ಭಕ್ತನ
- ರಾಜವದನೆ ಸುರರಾಜನ (ಬೆ-೯೭-೩)
- ಸುರನದಿಯ ಸುತನು ಪಾಂಡವರಿಗಾಪ್ತನು ನಿನಗೆ ಪರಮ ಭಕ್ತನು ಸ್ವ ಇಚ್ಛಾಮರಣಿಯು
- ನೀನಾವ ಬಾಂಧವನೊ (ಬೆ-೭೮-೨)
- ಸುರಪತಿಯ ಗೆದ್ದು ಸುಧೆಯನು ತಂದು ಮಾತೆಯ ಸೆರೆಯ ಪರಿಹರಿಸಿ ಬಹುಭಕ್ತನೆನಿಸಿ
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೯೯-೨)
- ಲೋಲ ಆದಿಕೇಶವನ ಭಕ್ತನಾಗೆಲೊ
- ನಾನು ನೀನು ಎನ್ನದಿರೊ (ಬೆ-೧೪೦-೩)
- ಭಕ್ತರ ಬಾಯೊಳು ನೆನೆವ ಹಣ್ಣು
- ಹಣ್ಣು ಕೊಂಬುವ ಬನ್ನಿರಿ (ಬೆ-೧೫೭-೧)
- ಬೇಡಿಕೊಂಬೆನೊ ನಿನ್ನ ಭಕ್ತರ ಸೇವೆಯ ಬಾಡದಾದಿಕೇಶವ ಭಕ್ತವತ್ಸಲ
- ಕಾಡುವ ದುರಿತಗಳ ನೀ ಬಿಡಿಸೆಂದು
(ಬೆ-೬೦-೩)
- ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ ಬಂಕದ ಬಾಗಿಲಕಾಯ್ವ ಬಡದಾಸ ನಾನು
- ದಾಸ ದಾಸರ ಮನೆಯ ದಾಸ
(ಬೆ-೨೩-೨)

- ಕೇಶವ ನಾರಾಯಣ ಮಾಧವ ಗೋವಿಂದ ಭವನಾಶ ಭಕ್ತರ ಹೃದಯಕಮಲಾಬ್ಜಮಣಿ
- ಅಭ್ಯಾಸವನು ಮಾಡಬೇಕು (ಬೆ-೩೮-೧)
- ನಂಬು ನಾರಾಯಣನ ನಂಬೊ ನರಹರಿಯ ನಂಬಿದಾ ಭಕ್ತರ ಕುಟುಂಬ ಸಾರಥಿಯ
- ನಂಬು ನಾರಾಯಣನ -(ಬೆ-೫೩-ಪ)
- ಅಪರಿಮಿತ ಭಕ್ತರನು ನೋಡಬೇಕೆಂದೆನುತ ಸುಪವಿತ್ರತನದಿ ಮಲಗಿದ ಭಾವವೋ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೩)
- ಲೀಲೆಯಿಂದಲಿ ಭಕ್ತರನು ಸಲಹುತಿಹನ
- ಕಾವನಯ್ಯನ ಕಳುಹು (ಬೆ-೧೫೩-೩)
- ಒಲಿದು ಭಕ್ತರನು ಪಾಲಿಪ ಕಾಗಿನೆಲೆಯಾದಿ ಕೇಶವ ಜಗದೊಡೆಯ
- ಪೂಸರನ ಜನಕನೇ (ಬೆ-೧೬೮-೫)
- ಕಂತುಪಿತ ತಿರುವೆಂಗಳೇಶ ತಿರುಮಲೆ ಯೊಳಗೆ ಚಿಂತಿಸುವ ಭಕ್ತರನು ಪಾಲಿಸುತಲಿ
- ನೋಡಯ್ಯ ನಿನ್ನ ದಾಸರ (ಬೆ-೮೫-೧೧)
- ಸುಜನ ಭಕ್ತರೆಲ್ಲ ಕೊಳ್ಳ ಬನ್ನಿರಿ ಹಣ್ಣು
- ಹಣ್ಣು ಕೊಂಬುವ ಬನ್ನಿರಿ (ಬೆ-೧೫೭-೨)
- ಇರಿಸು ಭಕ್ತರೊಳಗೆ ಪರಮ ಪುರುಷ ಶ್ರೀಹರೆ
- ಈಶ ನಿನ್ನ ಚರಣ ಭಜನೆ (ಬೆ-೬೫-೨೨)
- ಆತ್ಮನು ಕಾಗಿನೆಲೆಯಾದಿಕೇಶವನೊಲಿದ ಭಕ್ತರಿಗೆ ಕುಲವಾವುದು ಹೇಳಿರಯ್ಯ
- ಕುಲ ಕುಲ ಕುಲವೆನ್ನುತಿಹರೊ
(ಬೆ-೧೨೦-೩)

೩೧೯೨. **ಭಕುತವತ್ಸಲ** (ಭಕ್ತವತ್ಸಲ) - ಭಕುತವತ್ಸಲನೆಂಬ ಬಿರುದು ಬೇಕಾದಡೆ ಶಕುತ ಸುಮ್ಮನೆ ಕಾಯೊ ಸುಲಭದಿಂದ
- ಸಿರಿಯ ಮದವೆ ಮುಕುಂದ
(ಬೆ-೬೯-೫)

೩೧೯೩. **ಭಕುತಿ/ಭಕ್ತಿ** - ಎಂತಹುದೊ ನಿನ್ನಯ ಭಕುತಿ ಎನಗೆ ಶ್ರೀಕಾಂತ ನಿನ್ನಯ ಒಲುಮೆ ಯಿಲ್ಲದ ಮೂಢಾತ್ಮನಿಗೆ
- ಎಂತಹುದೊ ನಿನ್ನಯ ಭಕುತಿ
(ಸ-೪೧-ಪ)
- ನಡತೆ ಹೀನನಾದರೇನಯ್ಯ ಜಗದೊಡೆಯನ ಭಕುತಿ ಇದ್ದರೆ ಸಾಲದೆ

– ನಡತೆ ಹೀನನಾದರೇನಯ್ಯ (ಸ–೧೨೭–ಪ)
– ಅಧಿಕವಾದ ಇನ್ನೊಂದೇನನುಸುರುವೆನು ನಾ ಮುನ್ನ ಸಂಪಾದಿಸುವ ಭಕುತಿ ಇನ್ನೆಂತಿಹುದೊ ದೇವ
– ಎಂತಹುದೊ ನಿನ್ನಯ ಭಕುತಿ (ಸ–೪೧–೨)
– ಜ್ಞಾನಭಕ್ತಿ ಕೊಟ್ಟು ನಿನ್ನ ಧ್ಯಾನದಲ್ಲಿ ಇಟ್ಟು
– ಈಶ ನಿನ್ನ ಚರಣ ಭಜನೆ (ಬೆ–೬೫–೨೦)
– ಗುರುವಿನ ವಾಕ್ಯದಿ ಭಕ್ತಿ ಇಹಪರಕದು ಮುಕ್ತಿ
– ಅಹುದಾದಡಹುದೆನ್ನಿ (ಬೆ–೧೩೨–೧)
– ಪೃಥ್ವಿಯೊಳು ಕಾಗೆನೆಲೆಯಾದಿಕೇಶವ ನಿನ್ನ ಭಕ್ತಿಯಿಲ್ಲದ ನರಗೆ ಮುಕ್ತಿಯಹುದೆ
– ಬಾಯಿ ನಾರಿದ ಮೇಲೆ (ಬೆ–೧೪೨–೩)
– ಕುರಿಕೋಣ ನೈವೇದ್ಯ ಧೂಪ ದೀಪಗಳಿಂದ ಪರಮ ಭಕ್ತಿಯ ಮಾಡಿ ಪೂಜಿಸುವರಯ್ಯ
– ಕಲಿಯೇರಿ ಬಂತು (ಬೆ–೧೩೦–೧೦)
– ಅಕಳಂಕ ಶ್ರೀಹರಿ ಭಕುತಿಗೆ ಮನ ಬೆಳೆದು ರುಕುಮಿಣಿಯರಸ ಕೈವಶವಾದನೆನಗೆ
– ಬದುಕಿದೆನು ಬದುಕಿದೆನು (ಸ–೧೭೧–೨)
– ವೇದಶಾಸ್ತ್ರ ಶಬ್ದ ತರ್ಕ ಮೀಮಾಂಸೆಗಳ ಓದಿದವನಲ್ಲ ನಿನ್ನಯ ಭಕುತಿಗೆ
– ಎಂತಹುದೊ ನಿನ್ನಯ ಭಕುತಿ (ಸ–೪೧–೨)
– ಸಾಸಿರನಾಮದೊಡೆಯ ಕೃಷ್ಣ ಬಾಡದಾದಿ ಕೇಶವನ ಭಕುತಿಯೊಂದಿದ್ದರೆ ಸಾಲದೆ
– ನಡತೆ ಹೀನನಾದರೇನಯ್ಯ (ಸ–೧೨೭–೩)
– ಕಾಲಕರ್ಮದೊಳುಪೇಕ್ಷೆಯ ಮಾಡಿ ಹರಿ ಭಕುತಿ ಶೀಲರಹಿತ ಬ್ರಾಹ್ಮಣನಾಗಲೊಲ್ಲೆ
– ದೇಶಾಧಿಪತಿ ನರಹರಿಯೆ (ಬೆ–೨೧–೪)
– ಭಕುತಿಯಿಂದ ನಮೊ ಎಂಬೆ ದಶ ಅವತಾರದ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೧)
– ಮೇಲನರಿತು ವಿಷ್ಣುಭಕುತಿಯ ಮಾಳ್ಪ ಚಾಂಡಾಲರ ಮನೆಯ ಬಾಗಿಲ ಕಾಯಿಸೆನ್ನನು
– ದೇಶಾಧಿಪತಿ ನರಹರಿಯೆ (ಬೆ–೨೧–೪)
– ದೃಢ ಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೆ ಸಡಗರದಿ ಕಂಬದಿಂದೊಡೆದೆ ನರಹರಿಯೆ
– ಬಾಗಿಲನು ತೆರೆದು ಸೇವೆಯನು (ಬೆ–೪೬–೨)
– ಆವನಿದನುದಯಕಾಲದಲೆದ್ದು ಭಕುತಿಯಲಿ
– ವಾಸುದೇವಾಯ ನಮೋ (ಬೆ–೯೦–೧೪)
– ಭಾವವಿಲ್ಲದ ಭಕುತಿಯದು ಕುಹಕ ಯುಕುತಿ
– ಅಹುದಾದರಹುದೆನ್ನಿ (ಬೆ–೧೩೧–೧)
– ಎಳ್ಳು ಕಾಳಿನಷ್ಟು ಭಕುತಿಯೆನ್ನೊಳಗಿಲ್ಲ
– ಎಳ್ಳು ಕಾಳನಷ್ಟು ಭಕ್ತಿ (ಬೆ–೧೨–ಪ)
– ನೆಲೆಯ ಕಾಣೆನು ನಿಗಮ ಶಾಸ್ತ್ರ ನವವಿಧ ಭಕ್ತಿಯೊಳಗೊಂದು ಬಗೆಯಾದರೂ
– ಆವ ಪರಿಯಲಿ ನಿನ್ನನೊಲಿಸಿ (ಬೆ–೩೭–೫)
– ಉನ್ನತ ಕಾಗೆನೆಲೆ ಆದಿಕೇಶವನ ಅನುದಿನ ನೆನೆವುದು ಭಕ್ತಿಗಾಗಿ ಪರಮುಕ್ತಿಗಾಗಿ
– ಎಲ್ಲರೂ ಮಾಡುವುದು ಹೊಟ್ಟೆಗಾಗಿ (ಬೆ–೧೩೪–೯)
– ಬಲಿ ಚಕ್ರವರ್ತಿ ಭಕ್ತಿಗೆ ಮೆಚ್ಚಿ ಅವನ ಬಾಗಿಲ ಕಾಯ್ದಚ್ಯುತನು ಅನುಗಾಲದಿ
– ಆರು ಬಲ್ಲರು ಹರಿಹರರ (ಬೆ–೮೨–೨)
– ಶಕ್ತಿಯಲಿ ಹನುಮನೋ ಭಕ್ತಿಗೆ ವಿಭೀಷಣನೊ
– ಬೆರೆಯದಿರು ಬೆರೆಯದಿರು (ಬೆ–೧೪೩–೬)
– ಸಾಧಿಸಿ ಸಕಲವ ತಿಳಿದವನೆ ಬಾಡದಾದಿ ಕೇಶವ ಭಕ್ತಿಗೊಲಿದವನೆ
– ಗೋವಿಂದ ಹರಿ ಗೋವಿಂದ (ಬೆ–೫೬–೫)

೩೯೫೪. ಭಕ್ತಪರಿಪಾಲ – ಗಾನರಸಲೋಲ ಆಗಮಶೀಲ ಭಕ್ತಪರಿಪಾಲ ಗೋಪಾಲಬಾಲ
– ನೀನುಪೇಕ್ಷೆಯ ಮಾಡೆ (ಬೆ–೪೯–ಪ)

೩೯೫೫. ಭಕ್ತವತ್ಸಲ – ಸಮಯಾಸಮಯ ವುಂಟೆ ಭಕ್ತವತ್ಸಲ ನಿನಗೆ ಕಮಲಾಕ್ಷ ಕಾಗೆನೆಲೆಯಾದಿಕೇಶವನೆ
– ಬಾಗಿಲನು ತೆರೆದು ಸೇವೆಯನು (ಬೆ–೪೬–೩)
– ಬೇಡಿಕೊಂಬೆನೊ ನಿನ್ನ ಭಕ್ತರ ಸೇವೆಯ ಬಾಡದಾದಿಕೇಶವ ಭಕ್ತವತ್ಸಲ
– ಕಾಡುವ ದುರಿತಗಳ ನೀ ಬಿಡಿಸೆಂದು

(ಬೆ-೬೦-೩)

**೩೧೯೬. ಭಕ್ತಿಹೀನ** - ಭಕ್ತಿಹೀನರ ಮನೆಯ ಪಟ್ಟ ಸುಪ್ಪತ್ತಿಗೆಗಿಂತ ಭಕ್ತರ ಮನೆಯ ಕಡೆಬಾಗಿಲ ಕಾಯುವುದು ಲೇಸು
- ಅರಿತು ನಡೆಯಲಿ ಬೇಕು (ಸ-೭-೨)

**೩೧೯೭. ಭಕ್ಷಿಸು** - ಭರದಿ ಭಕ್ಷಿಸುವನ ಶಿರದಲಿ ನಟಿಸಿದ ವರಕಾಗಿನೆಲೆಯಾದಿಕೇಶವ ರಾಯಗೆ
- ಮಂಗಲಂ ಜಯ ಮಂಗಲಂ (ಬೆ-೧೭೨-೩)
- ಎಂಟುಹತ್ತರ ಅನ್ನವನು ಭಕ್ಷಿಸುವುದು
- ಮರ ನುಂಗುವ ಪಕ್ಷಿ (ಬೆ-೧೬೧-೧)
- ಮನಸಿಜನರಿಯ ತಂದೆಯ ಭಕ್ಷಿಪನ ಪೊತ್ತನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೧)
- ವಿರಿಂಚಿವಾಹನವಂತೆ ಕಮಲ ಭಕ್ಷಿಪನಂತೆ
- ಆರಿಗಾದರು ಪೂರ್ವಕರ್ಮಬಿಡದು (ಬೆ-೧೦೮-೫)
- ಹರಿಯ ಹೊದ್ದಿಹನಂತೆ ಹಾವ ಭಕ್ಷಿಪನಂತೆ
- ಆರಿಗಾದರು ಪೂರ್ವಕರ್ಮಬಿಡದು (ಬೆ-೧೦೮-೫)

**೩೧೯೮. ಭಕ್ಷ್ಯ** - ಸ್ವಾದು ಕಲ್ಪಿತವಾದ ಭಕ್ಷ್ಯ ಭೋಜ್ಯಗಳನು ಆದರದಿಂದಮೃತವನುಣಲು ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೩)

**೩೧೯೯. ಭಜಕ** (ಭಜಿಸುವವನು) - ಭೂಸುರ ಪ್ರಿಯಭಜಕ ಪೋಷಕನೆ ರಕ್ಷಿಪುದು ಕೇಶವ ನೃಸಿಂಹರೊಲಿದು
- ವಾಸುದೇವಾಯ ನಮೋ (ಬೆ-೯೦-ಪ)
- ಭುಜ ಚಕ್ರಧರ ಸಾತ್ತ್ವಿಕರ ಪಾದಾಂಬುಜ ರಜ ಭಜಕರ ಭಜಕನೆಂದೆನಿಸೆನ್ನ
- ದೇಶಾಧಿಪತಿ ನರಹರಿಯೆ (ಬೆ-೨೧-೧)
- ದ್ವಾಪರಯುಗದಲಿ ಭೀಮಸೇನನೆನಿಸಿ ಶ್ರೀಪತಿಯ ಪಾದ ಕಡುಭಜಕನಾಗಿ
- ಪರಮ ಪದವಿಯನೀವ ಗುರು ಮುಖ್ಯ ಪ್ರಾಣನ (ಬೆ-೭೨)
- ಮಧ್ವಶಾಸ್ತ್ರವನೆಲ್ಲ ಸಜ್ಜನರಿಗೊರೆದಗೆ ಮುದ್ದು ಶ್ರೀ ಆದಿಕೇಶವನ ಭಜಕನಿಗೆ
- ಜಯಮಂಗಲಂ ನಿತ್ಯ (ಬೆ-೧೭೧-)
- ಭುಜ ಚಕ್ರಧರ ಸಾತ್ತ್ವಿಕರ ಪಾದಾಂಬುಜ ರಜ ಭಜಕರ ಭಜಕನೆಂದೆನಿಸೆನ್ನ
- ದೇಶಾಧಿಪತಿ ನರಹರಿಯೆ (ಬೆ-೨೧-೧)
- ಅಜಪಿತ ಕಾಗಿನೆಲೆಯಾದಿಕೇಶವನೆ ತ್ರಿಜಗ ವಲ್ಲಭ ತಾನು ಭಜಕರ ವಶವಾನೆ
- ಆನೆಯ ನೋಡಿರಯ್ಯ (ಬೆ-೧೫೬-೩)
- ಸಾಧುಸಂಗ ಕೊಟ್ಟು ನಿನ್ನ ಪಾದಭಜಕನೆನಿಸು
- ಈಶ ನಿನ್ನ ಚರಣ ಭಜನೆ (ಬೆ-೬೫-೧೭)
- ವಿಜಯ ನಿಮ್ಮಯ ಪದ ಭಜಕರಿಗೆ ಕೊಡಲಿ
- ಬಾರೊ ಭಾಗ್ಯದ ನಿಧಿಯೆ (ಸ-೧೮೨-೧)

**೩೨೦೦. ಭಜನೆ** - ಬೇಕು ನಿನ್ನ ಪಾದ ಭಜನೆಯೆಂದು ಬಯಸುತಿಹೆನು ರಂಗ
- ಸಾಕು ಸಾಕು ಮನುಜ ಸೇವೆಯು (ಬೆ-೪೨-ಅ)
- ಈಶ ನಿನ್ನ ಚರಣ ಭಜನೆ ಆಶೆಯಿಂದ ಮಾಡುವೆನು
- ಈಶ ನಿನ್ನ ಚರಣ ಭಜನೆ (ಬೆ-೬೫-ಪ)
- ಭಾನುಪ್ರಕಾಶನ ಭಜನೆಯ ಮಾಡದ ಹೀನಗೆ ಮುಕುತಿಯು ದೊರಕೀತೆ
- ಕೇಶವನೊಲುಮೆಯು ಆಗುವ ತನಕ (ಸ-೮೯-೨)

**೩೨೦೧. ಭಜರೇ** - ಭಜರೇ ಹನುಮಂತಂ ಮಾನಸ ಭಜರೇ ಹನುಮಂತಂ
- ಭಜರೇ ಹನುಮಂತಂ ಮಾನಸ (ಸ-೧೯೦-ಪ)

**೩೨೦೨. ಭಜಿಸು** - ಒಲಿದು ಭಜಿಪರ ಭವ ತರಿದು ಕಾಯುವ ಮುತ್ತು
- ಮುತ್ತು ಬಂದಿದೆ ಕೇರಿಗೆ (ಸ-೨೧೦-೧)
- ಪರಬ್ರಹ್ಮ ಕಾಗಿನೆಲೆಯ ಆದಿಕೇಶವನ ಮರೆಯದೆ ಭಜಿಪರ ಕಾಯುವವನ
- ನೆನೆಯ ಬಾರದೆ ಮನವೆ ಪರಮಪಾವನನ (ಸ-೧೫೨-೩)
- ಅರಿತು ಭಜಿಪರ್ಯಾರಯ್ಯ ರಂಗಯ್ಯ ನಿನ್ನ
- ಅರಿತು ಭಜಿಪರ್ಯಾರಯ್ಯ ರಂಗಯ್ಯ ನಿನ್ನ (ಸ-೮-ಪ)
- ಆದಿಕೇಶವನ್ನ ಮುಟ್ಟಿ ಭಜಿಸಿ ಕಡೆಗೆ ಬಿಡುವರೆ ಆತ್ಮ

- ಯಾರಿಗಾರು ಬಹರು ಸಂಗಡ
(ಸ-೨೨೧-೩)
- ಕಂದರ್ಪಪಿತ ಸೊಂಡೆಕೊಪ್ಪದ ಆದಿಕೇಶವನ ಮುಂದರಿತು ಭಜಿಸಿ ಮುಕ್ತಿಯ ಪಡೆಯಿರಣ್ಣ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು
(ಸ-೧೨೪-೫)
- ವಾಸುದೇವನ ಭಜಿಸೊ ಒರಟು ಜೀವನವೆ
- ಈ ಸಿರಿಯ ನಂಬಿ ಹಿಗ್ಗಲು ಬೇಡ
(ಸ-೪೦-೮)
- ರಂಗನ ಭಜಿಸೊ ಕೃಷ್ಣನ ಭಜಿಸೊ
- ಹಿಂಗದೆ ಮನದಣಿಯ ರಂಗನ ಭಜಿಸೊ
(ಸ-೨೫೯-೮)
- ರಂಗನ ಭಜಿಸೊ ಕೃಷ್ಣನ ಭಜಿಸೊ
- ಹಿಂಗದೆ ಮನದಣಿಯ ರಂಗನ ಭಜಿಸೊ
(ಸ-೨೫೯-೮)
- ಹಿಂಗದೆ ಮನದಣಿಯ ರಂಗನ ಭಜಿಸೊ
- ಹಿಂಗದೆ ಮನದಣಿಯ ರಂಗನ ಭಜಿಸೊ
(ಸ-೨೫೯-ಪ)
- ಉಂಟು ಸೌಭಾಗ್ಯವೆಂಬ ಧೈರ್ಯವ ಬಿಟ್ಟು ವೈಕುಂಠವಾಸಿಯ ಭಜಿಸೊ ತುಂಟ ಜೀವನವೆ
- ಈ ಸಿರಿಯ ನಂಬಿ ಹಿಗ್ಗಲು ಬೇಡ
(ಸ-೪೦-೧)
- ಸೃಷ್ಟಿಯೊಳು ಕಾಗಿನೆಲೆಯಾದಿಕೇಶವನಂಘ್ರಿ ಮುಟ್ಟಿ ಮನದಲಿ ಭಜಿಸೊ ಭ್ರಷ್ಟಜೀವನವೆ
- ಈ ಸಿರಿಯ ನಂಬಿ ಹಿಗ್ಗಲು ಬೇಡ
(ಸ-೪೦-೩)
- ಭಾಳಾಕ್ಷ ಮುಂತಾಗಿ ಭಜಿಪ ದೇವರ ಮನೆಯ ಆಳಿನ ಆಳಿನ ಆಳಿನಡಿದಾಸ ನಾನು
- ದಾಸ ದಾಸರ ಮನೆಯ ದಾಸ
(ಬೆ-೨೩-೧)
- ಭಜಿಸಿ ಬದುಕೆಲೊ ಮನುಜ ಮನಮುಟ್ಟಿ ಶ್ರೀಹರಿಯ ಅಜಸುರೇಂದ್ರಾದಿಗಳು ಆದಿವಂದಿತ ಪಾದ
- ಭಜಿಸಿ ಬದುಕೆಲೊ ಮನುಜ
(ಬೆ-೩೫-ಪ)
- ಭೋಗಿಶಯನನ ಪಾದ ರಾಗದಿ ಭಜಿಸದೆ ಕಾಗಿನೆಲೆಯಾದಿಕೇಶವನ ದಾಸ ನೀನು
- ಹೇಗೆ ನೀ ದಾಸನಾದೆ (ಬೆ-೨೨-೨೧)
- ನಿಜವಾದ ಸಿಂಹ ನೀನಾದರೆ ನಿನ್ನ ಭಜಿಸಿ ಸಿಂಹಮಧ್ಯೆಯಾಗಿಪ್ಪಳಯ್ಯ
- ನಿನಗಿಂತ ಕುಂದೇನೊ (ಬೆ-೮೭-೪)
- ಪರಮ ಪದವಿಯನೀವ ಗುರು ಮುಖ್ಯ ಪ್ರಾಣನ ಧರೆಯೊಳಗುಳ್ಳ ಮಾನವರೆಲ್ಲ ಭಜಿಸಿರೊ
- ಪರಮ ಪದವಿಯನೀವ ಗುರು ಮುಖ್ಯ ಪ್ರಾಣನ (ಬೆ-೭_ಪ)
- ಪರಮಾತ್ಮ ಕಾಗಿನೆಲೆಯಾದಿಕೇಶವ ರಾಯ ಪರಹಿತಕೆ ಸಖನೆಂದು ಭಜಿಸೆಲೈ ಮನುಜಾ
- ಏನಿದೆತ್ತಣ ಬಯಕೆ (ಬೆ-೧೩೬-೩)
- ಬ್ರಹ್ಮಲಿಖಿತವ ಮೀರಿ ಬಾಳ್ವರುಂಟು ನಿರ್ಮಳದಿ ವೈಷ್ಣವರ ಮನಮುಟ್ಟಿ ಭಜಿಸಿ
- ಬ್ರಹ್ಮಲಿಖಿತವ ಮೀರಿ ಬಾಳ್ವರು
(ಬೆ-೨೫-ಪ)
- ಬಿಡದೆ ಶ್ರೀನಾಥ ಆದಿಕೇಶವನ ಭಜಿಸಿರೊ
- ಇರಬಂದುದಿಲ್ಲ ಸಂಸಾರ (ಬೆ-೧೧೩-೩)
- ಶ್ರೀಪತಿ ಕಾಗಿನೆಲೆಯಾದಿಕೇಶವ ಚರಣ ಈ ಪರಿಯಲಿ ಭಜಿಸಿ ಸುಖಿಯಾಗೊ ಮನವೆ
- ಮಾವನ ಮನೆಯೊಳಗೆ (ಬೆ-೧೪೬-೫)

೩೨೦೩. ಭಟ - ಚಂಡಭಟರೆಲ್ಲ ಮುಂದೆ ಕತ್ತಿ ಹರಿಗೆಯ ಪಿಡಿದು ಖಂಡತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
- ಎಲ್ಲರೂ ಮಾಡುವುದು ಹೊಟ್ಟೆಗಾಗಿ
(ಬೆ-೧೩೪-೪)

೩೨೦೪. ಭತ್ತ - ಹಸ್ತದಿಂ ಹಣ ಭತ್ತ ಹಚ್ಚಡಂಗಳ ಕೊಟ್ಟು ಕುಸ್ತರಿಸಿ ಬಿನುಗು ಚಾರಿತ್ರ್ಯಗಳ ಲಾಲಿಸುತ
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ
(ಬೆ-೧೧-೧)

೩೨೦೫. ಭಯ - ಭಂಜಿಸಿದವರಿಗೆ ಭಯವ ತೋರುವ ಮುತ್ತು
- ಮುತ್ತು ಬಂದಿದೆ ಕೇರಿಗೆ (ಸ-೨೧೦-೨)
- ಜನರೆಲ್ಲ ಯದುಶೈಲೋತ್ಸವವ ಕೇಳಿ ಘನ ಕಾಲದೇಶದಜಿತ ಭಯವ
- ಕೈಯ ತೋರಿದ ಬಗೆಯ (ಸ-೯೧-೩)
- ಭೀಮನೆಂಬುವರಿಗೆ ಯಾತರ ಭಯವಿಲ್ಲ ಭೀಮರಾಯ

- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-ಪ)
- ಭವ ಭಯ ವಿನಾಶ ಭೋ ಭಕ್ತವಿಲಾಸ ಭೋ ಪಾಪವಿನಾಶ ಭೋ ಬಾಡದ ರಂಗೇಶ ಭೋ
- ಭವಭಯವಿನಾಶ ಭೋ (ಬೆ-೪೧-ಪ)
- ಪೇಳಲೆನ್ನಳವೆ ಬಾಡದಾದಿ ಕೇಶವನೊಲವಿನಾಳು ಸಂಗಡ ಬರಲು ಆವ ಭಯವಿಲ್ಲ
- ಪಥ ನಡೆಯದಯ್ಯ (ಬೆ-೯_೩)
- ಪೊಸ ಶಾಸ್ತ್ರಕ್ರಮ ಕೂಗೆ ಜಾರ ತಸ್ಕರ ತತಿಯು ಬಸವಳಿದು ಭಯದಿ ಪೋಗೆ
- ಸಿಂಗರದ ಸಿರಿಧರನೆ (ಬೆ-೧೬೭-೧)
- ನಿತ್ಯ ಅನ್ನದಾನವಿರಲು ಭಯವು ಏತಕೆ
- ಸತ್ಯವಂತರ ಸಂಗವಿರಲು (ಬೆ-೧೨೪-ಪ)
- ಸತ್ಯವ್ರತವುಳ್ಳವಗೆ ಮೃತ್ಯುವಿನ ಭಯವುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೧)
- ಅಶನವ ತೊರೆದ ಯೋಗಿಗೆ ಭಯವುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೪)
- ಕನಸಿನಲಿ ಕಾಂಬುದೇನು ಕಂಡರೆ ಭಯವೇನು
- ಹೆಣ್ಣುಗಳೊಳು ಹೆಮ್ಮೆಕಾರಿಕೆ (ಬೆ-೧೪೯-೨)
- ಅತ್ತೆಮನೆ ಸೇರುವಗೆ ಅಭಿಮಾನವುಂಟೆ ಬತ್ತಲೆ ತಿರುಗುವಗೆ ಭಯವು ಇನ್ನುಂಟೆ
- ಹೆತ್ತ ತಾಯಿಗಿಂತ ಅತ್ಯಧಿಕ (ಬೆ-೧೨೮-೨)
- ತೀಡಯ್ಯ ಭವಭಯದ ಪಾತಕಂಗಳ ದಾನವಾಡ ಗುಡ್ಡದ ತಿರುಮಲೇಶ ಸರ್ವೇಶ
- ನೋಡಯ್ಯ ನಿನ್ನ ದಾಸರ (ಬೆ-೮೫-ಪ)
- ಸುತ್ತ ಕತ್ತಲೆ ಚಿಂತೆ ಮತ್ತೆ ಭಯದ ಭ್ರಾಂತಿ ಚಿತ್ತಜನಯ್ಯ ದೊರಕುವ ಬಗೆಯೆಂತು
- ಹೇಗೆ ನೀ ದಾಸನಾದೆ (ಬೆ-೨೨-೧೭)

೩೨೦೬. ಭರ - ಭರದಿ ಕಾಗಿನೆಲೆಯ ಆದಿಕೇಶವನೆಂದ
- ನಾರಾಯಣನೆ ಈತ (ಸ-೧೩೮-೩)
- ಸುಟ್ಟುಬಳಿಕ ಭರದಿ ಬಂದು ಮನೆಯೊಳೆಂಬರು ಪಾಪಿ ಸತ್ತ ತರುಣಿ ಕೆಟ್ಟಳೆಂದು ಕೊಂಬರು ಆತ್ಮ
- ಯಾರಿಗಾರು ಬಹರು ಸಂಗಡ (ಸ-೨೨೧-೧)
- ಭರದಿ ಹಾರೈಸುತಿಹರು ಜಲಕ್ರೀಡೆಗೇಳಯ್ಯ ಸ್ಮರನ ಪಿತನೊಲಿದುಪ್ಪವಡಿಸಯ್ಯ ಹರಿಯೆ
- ಪೂಸರನ ಜನಕನೇ (ಬೆ-೧೬೮-೨)
- ಭರದಿ ಭಕ್ಷಿಸುವನ ಶಿರದಲಿ ನಟಿಸಿದ ವರಕಾಗಿನೆಲೆಯಾದಿಕೇಶವ ರಾಯಗೆ
- ಮಂಗಲಂ ಜಯ ಮಂಗಲಂ (ಬೆ-೧೭೨-೩)
- ಸೀತೆಯನು ಕದ್ದು ಒಯ್ದವನ ಕೊಲ್ಲುವ ಭರದಿ ಭೂತಳದ ಕಪಿಗಳನು ಕೂಡಿಕೊಂಡು
- ನೋಡಯ್ಯ ನಿನ್ನ ದಾಸರ (ಬೆ-೮೫-೭)
- ಭರದಿಂದ ಭೃಗುಮುನಿ ಬಂದು ಕೋಪಿಸೆ ಬೇಗ ಚರಣವನೊತ್ತಿದನ
- ತೋರೆ ಬೇಗನೆ ಸಖಿ (ಬೆ-೯೪-೩)
- ಭರದಿಂದ ಬಂದು ಯಶೋದೆಗೆ ಚಾಡಿಯ ಅರುಹಿದರತಿ ವೇಗದಿ
- ನೆರೆದು ಗೋಪಿಯರೆಲ್ಲರು (ಬೆ-೧೦೩-ಪ)
- ತರಣಿತನಯನ ಸುತನ ಬಾಯೊಳು ಅನೃತವ ಭರದಿಂದ ನುಡಿಸಿದನ
- ತೋರೆ ಬೇಗನೆ ಸಖಿ (ಬೆ-೯೪-೧)
- ವಾತಜಾತನು ಆಗಿ ಖ್ಯಾತಿಯಲಿ ಮೆರೆದಗೆ ಸೇತುವೆಯ ಭರದಿಂದ ಲಂಘಿಸಿದಗೆ
- ಜಯ ಮಂಗಲಂ ನಿತ್ಯ (ಬೆ-೧೭೧-೧)
- ಸೀತೆಯನು ವಂದಿಸುತೆ ಉಂಗುರವನಿತ್ತವಗೆ ದೈತ್ಯಪುರವನು ಭರದಲುರಿಸಿದವಗೆ
- ಜಯಮಂಗಲಂ ನಿತ್ಯ (ಬೆ-೧೭೧-೧)

೩೨೦೭. ಭರದ್ವಾಜ (ಒಬ್ಬ ಋಷಿ) - ಮೂಜಗದ ವ್ಯವಹಾರಿ ಮುಂಕೊಂಡು ಭರದ್ವಾಜ ರೋಮಶ ಅತ್ರಿ ಗಾರ್ಗೇಯ
- ತಂಗದಿರನ ನಿಮಿಷ ತಾರಕೆಗಳು (ಬೆ-೧೬೬-೬)

೩೨೦೮. ಭರಮ (ಬ್ರಹ್ಮ) - ಡೊಳ್ಳಿನ ಮೇಲ್ ಕೈಯ ಭರಮಪ್ಪ ಹಾಕ್ಯಾನು ತಾಳವ ಶಿವನಪ್ಪ ತಟ್ಟಾನ್ಯಾ
- ದೇವಿ ನಮ್ಮ ದೇವರು ಬಂದರು

(ಬೆ-೭೭-೧೧)

೩೨೦೯. **ಭರವಸೆ** – ಮರಳಿ ಬಾಣವ ತೊಡೆನು ಎಂದು ಮಾತೆಗೆ ಕರ್ಣ ಭರವಸೆಯನಿತ್ತು ಸಂಗ್ರಾಮದೊಳಗೆ
– ನೀನಾವ ಬಾಂಧವನೊ (ಬೆ-೭೮-೬)

೩೨೧೦. **ಭಲ್ಲೆ** – ಖುಲ್ಲ ಮನುಜರನು ಕೊಲ್ಲಬೇಕೆನುತಲಿ ಭಲ್ಲೆ ಹಿಡಿದು ತುರಗವನೇರಿ
– ತಾಳಲ್ಲಲ್ಲಲ್ಲೊ ಮಾಸಾಳಲ್ಲಲ್ಲಲ್ಲೋ (ಸ-೧೧೦-೧೦)

೩೨೧೧. **ಭವ** (ಪ್ರಪಂಚ)– ಬೆಂದವು ಭವ ಪಾಶಾ ಅವಗೆಂದಿಗಿಲ್ಲ ಕ್ಲೇಶಾ
– ಮರೆಯದಿರು ಹರಿಯ (ಸ-೨೦೩-೩)
– ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು
– ಬದುಕಿದೆನು ಬದುಕಿದೆನು (ಸ-೧೭೧-ಪ)
– ಒಲಿದು ಭಜಿಪರ ಭವ ತರಿದು ಕಾಯುವ ಮುತ್ತು
– ಮುತ್ತು ಬಂದಿದೆ ಕೇರಿಗೆ (ಸ-೨೧೦-೧)
– ಭವ ಭಯ ವಿನಾಶ ಭೋ ಭಕ್ತವಿಲಾಸ ಭೋ ಪಾಪವಿನಾಶ ಭೋ ಬಾಡದ ರಂಗೇಶ ಭೋ
– ಭವಭಯವಿನಾಶ ಭೋ (ಬೆ-೪೧-ಪ)
– ತೀಡಯ್ಯ ಭವಭಯದ ಪಾತಕಂಗಳ ದಾನವಾಡ ಗುಡ್ಡದ ತಿರುಮಲೇಶ ಸರ್ವೇಶ
– ನೋಡಯ್ಯ ನಿನ್ನ ದಾಸರ (ಬೆ-೮೫-ಪ)
– ಹರಿ ನಿನ್ನ ಪಾದವು ಪವಿತ್ರತರವೆಂಬುದಕೆ ಧರಣಿ ಬಲಿ ವಿಧಿ ಭವಾಹ್ಲಾದ ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ-೫೦-೧)
– ಅಬ್ಧಿಯೊಳಗೆ ಬಿದ್ದು ನಾನು ಒದ್ದುಕೊಂಬೆ ನಯ್ಯ ಭವದಿ
– ಈಶ ನಿನ್ನ ಚರಣ ಭಜನೆ (ಬೆ-೬೫-೧೦)
– ಮಾಯದೊಳು ಸಿಲುಕಿ ಬಲುಕಾಲದಿಂದ ಶ್ರೀ ರಘುರಾಯನೆಂಬ ವಸ್ತುವಿನ ಸ್ಮರಣೆ ಬಿಟ್ಟು ಭವದಿ ಮಮತೆ ಇಟ್ಟು
– ದಾಸನಾಗೋ ಭವಪಾಶ ನೀಗೋ (ಬೆ-೨೦-೩)
– ಪೂರ್ವಜನ್ಮದಲಿ ನಾ ಮಾಡಿದಾ ಭವದಿಂದ ಉರ್ವಿಯೊಳು ಜನಿಸಿದೆನೊ ಕೃಷ್ಣಾ
– ಪೂರ್ವಜನ್ಮದಲ ನಾ ಮಾಡಿದಾ (ಬೆ-೮_ಪ)
– ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳನ್ನು ಬೊಂಬೆಗಳನು ಮಾಡಿ ಭವದಿಂದಲಿ
– ಜಗದಂತರ್ಯಾಮಿ ಎಂತೆಂದು (ಬೆ-೫೮-೨)
– ರಂಗರೂಪವ ತೋರಿ ಭಂಗ ಭವಗಳನಳಿದು ಡಂಗುರವ ಹೊಯ್ಯೊ ನಿನ್ನ ಡಿಂಗರಿಗನೆಂದು
– ಹೂವ ತರುವರ ಮನೆಗೆ (ಬೆ-೪೩-೧)
– ಇಂದು ಭವದ ಬಂಧ ಬಿಡಿಸು ತಂದೆ ಗೋವಿಂದಾ
– ಈಶ ನಿನ್ನ ಚರಣ ಭಜನೆ (ಬೆ-೬೫-೩)
– ಹಂಬಲಿಸಿ ಭವದ ಸುಖ ಮೆಚ್ಚಿದಾತನ ಸಂಗ
– ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ-೧೧೯-೨)
– ಮೊರೆಯ ಇಡುವೆನಯ್ಯ ನಿನಗೆ ಸೆರೆಯ ಬಿಡಿಸು ಭವದ ಎನಗೆ
– ಈಶ ನಿನ್ನ ಚರಣ ಭಜನೆ (ಬೆ-೬೫-೨೨)

೩೨೧೨. **ಭವ** (ಈಶ್ವರ) – ಅರವಿಂದನಾಭ ಸಿರಿವಿಧಿಭವಾದಿಗಳೊಡೆಯ ಹಿರಿದಾಗಿ ಕೋಳಿ ಕೂಗಿತೇಳಯ್ಯ ಹರಿಯೇ
– ಏಳು ನಾರಾಯಣ (ಸ-೫೯-೨)

೩೨೧೩. **ಭವದೂರ** (ಪ್ರಪಂಚದ ಕೋಟಲೆಗೆ ಸಿಲುಕದವನು) – ಘೋರಸಂಸಾರ ಭವದೂರ ಋಷಿಜನ ಮನೋಹಾರಸಾಕಾರ ಸಿರಿಧರ ರೂಪನೆ ನಮೋ
– ನಾರಾಯಣಾ ನಮೋ (ಬೆ-೫೧-ಅ)

೩೨೧೪. **ಭವನಾಶ** (ಸಂಸಾರ ಬಂಧನವನ್ನು ನಾಶಮಾಡುವವನು) – ಶ್ರೀನಾಥ ಭವನಾಶ ಪೇಳೋ ಪೇಳಿಲ್ಲೇತಕೆ ಅಹೋಬಲ ನರಸಿಂಹನೆ
– ಏನು ಕಾರಣ ಬಾಯ ತೆರೆದಿ (ಬೆ-೧೫೫-೩)
– ಕೇಶವ ನಾರಾಯಣ ಮಾಧವ ಗೋವಿಂದ ಭವನಾಶ ಭಕ್ತರ ಹೃದಯಕಮಲಾಬ್ಜಮಣಿ
– ಅಭ್ಯಾಸವನು ಮಾಡಬೇಕು (ಬೆ-೩೮-೧)

೩೨೧೫. **ಭವನಾಶಿ** (ಸಂಸಾರ ಬಂಧನವನ್ನು

ನಾಶಮಾಡುವವಳು) – ದೋಷನಾಶೆ ಕೃಷ್ಣವೇಣಿ ಗಂಗೆ ಗೋದಾವರಿ ಭವನಾಶಿ ತುಂಗಭದ್ರೆ ಯಮುನೆ ವಾಸದಲ್ಲಿ ಉಪವಾಸದಲ್ಲಿ
– ದಾಸನಾಗೋ ಭವಪಾಶ ನೀಗೋ (ಬೆ–೨೦–೧)

೩೨೧೬. **ಭವಪಾಶ** (ಸಂಸಾರದ ಬಂಧನ) – ದಾಸನಾಗೋ ಭವಪಾಶ ನೀಗೋ ವಿಶೇಷ ನಾಗೋ
– ದಾಸನಾಗೋ ಭವಪಾಶ ನೀಗೋ (ಬೆ–೨೦–ಪ)

೩೨೧೭. **ಭವಭಂಗ** – ಹೇಗೆ ನೀ ದಾಸನಾದೆ ಹೀಗೆ ಸಂಸಾರದೊಳು ಮಂಗನಂತೆ ಭವ ಭಂಗವ ಪಡುವವ
– ಹೇಗೆ ನೀ ದಾಸನಾದೆ (ಬೆ–೨೨–ಅ)

೩೨೧೮. **ಭವಭಯಹರ** – ಭವಭಯಹರ ಕಾಗಿನೆಲೆಯ ಆದಿಕೇಶವಗೆ ನಮೊ ನಮೋ
– ನಾ ನಿಮ್ಮ ದಾಸರ ದಾಸ (ಸ–೧೩೪–೫)

೩೨೧೯. **ಭವರೋಗ** (ಇಹ ಲೋಕದ ಕಷ್ಟಗಳು) – ಭವರೋಗದ ವೈದ್ಯ ಬಾಡದಾದಿ ಕೇಶವನ ವಿವರವರಿತು ಭಾವಿಸಿ ಭಕ್ತಜನರು
– ಶಂಕರನಾರಾಯಣ ಬಿಡು (ಬೆ–೧೭೫–೯)

೩೨೨೦. **ಭವಿ** – ಭವಿ ಮಾಡಿದ ಲಿಂಗ ಬಚ್ಚಿಟ್ಟು ಪೂಜೆಯಗೊಂಬ ಕವಿಗಳು ಶರಣರು ಕೇಳಿ ಸಭೆಯೊಳು
– ಶಂಕರನಾರಾಯಣ ಬಿಡು (ಬೆ–೧೭೫–೧)
– ಶಿವಖ್ಯಾತನಾದರೆ ಕೈಲಾಸವಿರಬೇಕು ಭವಿ ತಂದ ಧರೆಯೊಳು ಇರಬಹುದೆ
– ಶಂಕರ ನಾರಾಯಣ ಬಿಡು (ಬೆ–೧೭೫–೧)

೩೨೨೧. **ಭಸಿತ** (ವಿಭೂತಿ) – ಜವಾಜಿ ಕತ್ತುರಿಯಿಂದು ಭಸಿತ ಧೂಳಿಯಿಂದು
– ಎನ್ನ ಕಂದ ಹಳ್ಳಿಯ ಹನುಮಾ (ಬೆ–೬–೨)

೩೨೨೨. **ಭಸ್ಮಾಸುರ** – ಉರಿ ಹಸ್ತವ ಬೇಡಿ ಭಸ್ಮಾಸುರ ಕೆಟ್ಟ
– ನಾ ನಿಮ್ಮ ದಾಸರ ದಾಸ (ಸ–೧೩೪–೧)

೩೨೨೩. **ಭಾಂಡ** – ತತ್ವಭಾಂಡವ ತೊಳೆಯ ಬೇಕಣ್ಣ ಸತ್ಯಾತ್ಮನಾಗಿ ಅರ್ತಿ ಅಕ್ಕಿಯನು ಮಥಿಸಬೇಕಣ್ಣ
– ಅಡಿಗೆಯನು ಮಾಡಬೇಕಣ್ಣ (ಸ–೧–೨)

೩೨೨೪. **ಭಾಗವತ** – ಭಾಗವತರ ಪಾದ ಕೊಂದಿನ ಬಾಗಿ ನಡೆಯಲಿಲ್ಲ
– ವ್ಯರ್ಥವಾಯಿತಲ್ಲ ಜನ್ಮ ಸಾರ್ಥಕಾಗಲಿಲ್ಲ (ಸ–೨೩೧–೩)
– ಕಾಗಿನೆಲೆಯ ಆದಿಕೇಶವನ ಅಂಘ್ರಿ ನೆನೆಯದಿಹ ಭಾಗವತರ ಸಂಗ ಬಲು ಭಂಗ ಎಲೊ ರಂಗ
– ಸಜ್ಜನರ ಸಂಗದೊಳಗಿರಿಸೆನ್ನ (ಸ–೨೪೧–೩)
– ಭಾಗವತ ಗೀತ ನೃತ್ಯಗಳ ಕೇಳದೇಕಾದಶಿ ವ್ರತ ಜಾಗರದಲಿ ನೀ ನಿಡು ನಿದ್ರೈವೆ
– ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ–೧೧–೪)
– ಭಾಗವತ ಜನ ನಿವಹ ಸುಮನಸ ಸುದತಿಯರು ರತ್ನದಾರತಿಯಂ ಬೆಳಗಲ್ಯೆದಿದರು
– ಪೂಸರನ ಜನಕನೇ (ಬೆ–೧೬೮–೩)
– ಮೂಗುಹಿಡಿಯುತೆ ನೀರೊಳಗೆ ಮುಳುಗಿ ಜಪಮಾಡಿ ಭಾಗವತ ಶಾಸ್ತ್ರಾದಿಗಳನೆ ಓದಿ
– ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ–೧೩೮–೨)
– ವೇದಶಾಸ್ತ್ರಗಳನು ಮೋದದಿಂದ ಓದದೆ ಬಾದರಾಯಣ ಕೃತ ಭಾಗವತ ಕೇಳದೆ
– ಹೇಗೆ ನೀ ದಾಸನಾದೆ (ಬೆ–೨೨–೯)
– ಭಾಗವತರ ಸಮ್ಮೇಳವ ಕಂಡೆ ಕಾಗಿನೆಲೆಯಾದಿ ಕೇಶವ ರಂಗಶಾಯಿ
– ಇಷ್ಟು ದಿನ ಈ ವೈಕುಂಠ (ಬೆ–೨೮–೫)
– ಭಾಗವತರ ಬೆಡಗಿದು ಬೆಳುದಿಂಗಳಾಯಿ ತಮ್ಮ
– ಎಂದೆಂದು ಇಂಥ ಚೋದ್ಯ (ಬೆ–೧೬೬–೩)
– ಶೇಷಶಯನ ನಿನ್ನ ಭಾಗವತರ ಸಹವಾಸ ದೊಳಿರಿಸು ಕಂಡೆಯ ಎನ್ನನು
– ಶೇಷಶಯನ ನಿನ್ನ ಭಾಗವತರ (ಬೆ–೨೭–ಪ)
– ಆತನ ಪಾಡುವೆ ಅನವರತ ಪ್ರೀತಿಯಿಂದ

ಭಾಗವತರ ಸಲಹುವ ದೇವನೆಂದು
- ಆತನ ಪಾಡುವೆ ಅನವರತ (ಬೆ-೭೦-ಪ)
- ಜನ್ಮ ಸಾರ್ಥಕವಿರದವರು ಭಾಗವತರಹುದೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-ಪ)

೩೨೨೫. ಭಾಗವತಪ್ರಿಯ - ಭೋಗೀಶಯನ ಶ್ರೀ ಲಕ್ಷ್ಮೀಕಾಂತನೆ ಭಾಗವತಪ್ರಿಯ
- ನಾ ನಿಮ್ಮ ದಾಸರ ದಾಸ (ಸ-೧೩೪-೫)

೩೨೨೬. ಭಾಗೀರಥಿ - ಭಾಗೀರಥಿಯ ತಂದೆ ಬಹು ದೈತ್ಯರ ಕೊಂದೆ
- ನಾ ನಿಮ್ಮ ದಾಸರ ದಾಸ (ಸ-೧೩೪-೫)
- ಪರಮ ಕಲ್ಯಾಣಿ ಸುರನದಿಯು ಯಮುನೆ ಗೌತಮಿಯು ವರ ಕೃಷ್ಣವೇಣಿ ಭಾಗೀರಥಿ ಯರೈತಂದು
- ಮೂಸರನ ಜನಕನೇ (ಬೆ-೧೬೮-೨)

೩೨೨೭. ಭಾಗ್ಯ - ಮೂಗ್ರಾಮ ಮುರಿದು ವಾಜಿಯನೇರಿದಾತನು ಸಾಗ್ರದಿಂದಿಳೆಯ ಭಾಗ್ಯ ಹಿಂಗಿಸಿದ
- ಈತನೇನೆ ನಿನ್ನ ಮಗನು (ಸ-೩೮-೩)
- ಬಾರೊ ಭಾಗ್ಯದ ನಿಧಿಯೆ ದಯಾಂಬುಧಿಯೆ
- ಬಾರೊ ಭಾಗ್ಯದ ನಿಧಿಯೆ (ಸ-೧೮೨-ಪ)
- ಕಾಗಿನೆಲೆಯ ಆದಿಕೇಶವ ಹದುಳದಿಂದ ಬಾರೊ ಭಾಗ್ಯದ ನಿಧಿಯೆ
- ಬಾರೊ ಭಾಗ್ಯದ ನಿಧಿಯೆ (ಸ-೧೮೨-೩)
- ಯೋಗ್ಯದಿಂದ ಬಳಪತಿತನವನಿಗೆ ಭಾಗ್ಯ ವನಿತ್ತ ಕಾಗಿನೆಲೆಯಾದಿಕೇಶವ
- ಈತನೇನೆ ನಿನ್ನ ಮಗನು (ಸ-೩೮-೩)
- ನೀಲಮೇಘಶ್ಯಾಮ ಭಾಗ್ಯಪುರದಲಿ ನಿಂದ
- ಕಾವನಯ್ಯನ ಕಳುಹು (ಬೆ-೧೫೩-೩)
- ಸಾಧನಸಿರಿಯ ಸಂಪತ್ತು ಭಾಗ್ಯವನೀವ ಆ ದಯಾನಿಧಿ ಲಕ್ಷ್ಮಿ ನಿನ್ನ ಸತಿಯು ದೇವ
- ಜಗದಂತರ್ಯಾಮಿ ಎಂತೆಂದು (ಬೆ-೫೮-೧)
- ಉಗ್ರಾಹಿ ಅಹೋಬಲಪತಿರಾಜ ಕನಕಗೆ ಭಾಗ್ಯವನೀವ ಕಾಗೆನೆಲೆಯಾದಿಕೇಶವನು
- ಸೀತಾಪತಿ ರಘುನಾಥ (ಬೆ-೧೦೦-೩)
- ಬಲವ ನಿಲಿಸುವುದೇನು ಭಾಗ್ಯವು ಇದು ಯೇನು
- ಬಲ್ಲವರು ಪೇಳರೈ (ಬೆ-೧೬೩-೨)
- ತನ್ನ ಬಳಗವೆರಸಿ ಉಣ್ಣದ ಭಾಗ್ಯವೇತಕೆ
- ಸತ್ಯವಂತರ ಸಂಗವಿರಲು (ಬೆ-೧೨೪-೩)
- ಹೆಂಡಿರಿಲ್ಲಿ ಮಕ್ಕಳಿಲ್ಲಿ ಬಂಡಿತುಂಬ ಭಾಗ್ಯವಿಲ್ಲಿ
- ಏನು ಬರುವುದೋ ಸಂಗಡ (ಬೆ-೧೩೭-೧)
- ಭಾಗ್ಯದಲಿ ದಶರಥನೊ ಹೇಳೊ ನೀನು
- ಮೆರೆಯದಿರು ಮೆರೆಯದಿರು (ಬೆ-೧೪೮-೩)

೩೨೨೮. ಭಾಗ್ಯದಾತ - ನಿತ್ಯನೇಮವು ನಿಂತಿತು ಹೋಯಿತಲ್ಲ ಜಾತಿಗೈಶ್ವರ್ಯ ಭೋಗಭಾಗ್ಯದಾತ ರಾದವರಿಗೆ ಧಾರಣೆ ಪಾರಣೆ
- ಕಲಿ ಹೆಚ್ಚಿ ಬಂದಿತಲ್ಲ (ಸ-೭೮-೨)

೩೨೨೯. ಭಾಗ್ಯವಂತ - ಬಾಲಕನ ವಂದರಿಸಿ ಬಹು ಭಾಗ್ಯವಂತನೆನಿಸಿ ಎಲ್ಲರೊಳು ಸಲಿಗೆ ನಿಲಿಸಿದಳೊ ನಿಮ್ಮರಸಿ
- ಯಾಕೆಲೊ ರಂಗ ನಿನಗಿಂತ ನಟನೆಯ ಮಾತು (ಸ-೨೧೬-೧)

೩೨೩೦. ಭಾನು (ಸೂರ್ಯ) - ಭಾನು ಮೊದಲಾದಖಿಳ ಬ್ರಹ್ಮಾಂಡಗಳಿಗೊಂದು ಪಾದ ಹೊದಿಸಿದನಾವನು
- ಆತನೇ ಪರಮಾತ್ಮ ಪರತತ್ತ್ವ (ಬೆ-೭೪-೧)
- ನೆಗ್ಗಿದುವು ನಿಜ ಕುಲಾದ್ರಿಗಳಲಿ ಭಾನುವಿನ ಕಿರಣ ನುಗ್ಗಿ ಪೃಥ್ವಿಯೊಳು ಪಸರಿಸಿತು
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೨)

೩೨೩೧. ಭಾನುಪ್ರಕಾಶ - ಭಾನುಪ್ರಕಾಶನ ಭಜನೆಯ ಮಾಡದ ಹೀನಗೆ ಮುಕುತಿಯು ದೊರಕೀತೆ
- ಕೇಶವನೊಲುಮೆಯು ಆಗುವ ತನಕ (ಸ-೮೯-೨)

೩೨೩೨. ಭಾನುಮತಿ (ದುರ್ಯೋಧನನ ಪತ್ನಿ)
- ಉತ್ತಮಳಲಾ ಭಾನುಮತಿ ನೀನು ನಗೆಹೆಣ್ಣೆ ಇತ್ತ ದಯೆಮಾಡಿ ನೋಡಿ
- ವಾಸುದೇವಾಯ ನಮೋ (ಬೆ-೯೦-೪)

೩೨೩೩. ಭಾನುಸುತ (ಕರ್ಣ) - ಆನೆವಾಹನ

ಪಿತನ ತಾಯನಳೆದವನು ಭಾನುಸುತಗೆ ಶಾಪ ವನಿತ್ತು ಜರೆದವನು
- ಸೀತಾಪತಿ ರಘುನಾಥ (ಬೆ-೧೦೦-೨)
೩೨೩೪. ಭಾಪುರೆ - ಈ ಪರಿಯಲಿ ಬಹು ಜನಿಸಿದೆ ಭಲೆ ಭಾಪುರೆ ಬಾಡದೊಳ್ ನೆಲಸಿದೆ
- ನಿನಗಿಂತ ಕುಂದೇನೊ (ಬೆ-೮೭-೫)
೩೨೩೫. ಭಾಮೆ/ಭಾವೆ (ಹೆಂಗಸು) - ಕಾಮಿನಿ ಸತಿಯ ಕಂದನ ತಮ್ಮಗೊಲಿದನ ಭಾಮೆ ನೀ ತಂದು ತೋರೆ
- ಹರಿಮುಖಿ ಹರಿವಾಣಿ (ಬೆ-೯೮-೨)
- ಭಾವೆಯ ತಂದ ಮನೆಯಲಿ ಜೀವಿಪುದ ಕಿಂತ ಸಾವುದೇ ಲೇಸು ಅಭಿಮಾನಿಗಳಿಗೆ
- ಮಾವನ ಮನೆಯೊಳಗೆ (ಬೆ-೧೪೬-೧)
೩೨೩೬. ಭಾರ್ಗವ (ಪರಶುರಾಮ) - ತಾಮಸವಿಲ್ಲದೆ ಕ್ಷತ್ರಿಯರ ಸಂಹರಿಸಿದ ರಾಮ ಭಾರ್ಗವನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೬)
- ಮಂಗಳಂ ಭಾರ್ಗವ ಶ್ರೀರಾಮ ಕೃಷ್ಣನಿಗೆ
- ವಾಸುದೇವಾಯ ನಮೋ (ಬೆ-೯೦-೧೫)
- ಕಾಲಿನಿಂದಲಿ ಪಡೆದು ಗಂಗೆಯ ಕಾಲಿ ನಿಂದಲಿ ನಡೆದ ಭಾರ್ಗವ
- ಇಂದು ನೀ ಕರೆದುತಾರೆ (ಬೆ-೯೨-೧)
೩೨೩೭. ಭಾವ (ಭಾವನೆ) - ಹಾದಿಗಾಣದೆ ತೊಲಗಿ ಪೋಪೆನೆಂದರೆ ಭಾವ ಬೂದಿಯೊಳ ಗಾಡಿ ಮುಳುಗಾಡುತಿಹೆನೊ
- ಕಡಹಾಯಿಸೊ ಕಮಲಲಲೋಚನನೊಲ್ಲೆ (ಬೆ-೬೨-೩)
- ಮೋರೆ ಕಪ್ಪಿನ ಭಾವ ಮೊರದಗಲದ ಕಿವಿ ಕೋರೆದಾಡೆಯನಾರಮ್ಮ
- ನಮ್ಮಮ್ಮ ಶಾರದೆ (ಬೆ-೧_೧)
- ಭಾವವಿಲ್ಲದ ಭಕುತಿಯದು ಕುಹಕ ಯುಕುತಿ
- ಅಹುದಾದರಹುದೆನ್ನಿ (ಬೆ-೧೩೧-೧)
- ಬೇಕಾದ ಸುರನರರ ಪಾಲಿಸಲು ಬೇಕೆನುತ ಆ ಕರುಣದಿಂದ ಮಲಗಿದ ಭಾವವೊ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೪)
- ನಾಲ್ಕು ಯುಗವಾದಲ್ಲಿ ಕಡೆಯ ತುರಗವನೇರಿ ಸಾಕಾರವಾಗಿ ಮಲಗಿದ ಭಾವವೊ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೪)
- ಪೊಡವಿಪಾಲಕರ ವಂಶವನು ಒಬ್ಬನೆ ಕಡಿದು ಕೊಡಲಿಯನು ಬಿಸುಟ ಮಲಗಿದ ಭಾವವೊ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೨)
- ತ್ರಿಪುರದೊಳು ಸತಿಯ ವ್ರತವಳಿದು ಬತ್ತಲೆ ನಿಂತು ಚಪಲತ್ವದಿಂದ ಮಲಗಿದ ಭಾವವೊ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೩)
- ಸತಿಯು ಸುತರು ಪುತ್ರಿ ಮಿತ್ರರತಿಶಯದೊಳು ತಂದೆ ತಾಯಿ ಅತಿವಿನೋದಗೈವ ಭಾವ
- ಯಾರಿಗಾರು ಬಹರು ಸಂಗಡ (ಸ-೨೨೧-೨)
- ಕಬ್ಬುಬಿಲ್ಲನ ಪಿತನ ಏಕಾಂತ ಭಾವದಿ ನೆರೆನಂಬು ಎಚ್ಚರಿಕೆ
- ಮಾಡು ದಾನ ಧರ್ಮ (ಸ-೨೦೪-೫)
- ರಾಗ ರಂಗು ಬಲು ಭಕ್ತಿಭಾವದೊಳು ಬೀಗಿ ಚೆನ್ನಕೇಶವನನು ನೆನೆಯದೆ
- ವ್ಯರ್ಥವಾಯಿತಲ್ಲ ಜನ್ಮ ಸಾರ್ಥಕಾಗಲಿಲ್ಲ (ಸ-೨೩೧-೩)
- ಪಾಡುವ ಪದ್ಯಗಳಲಿ ಭಾವವಾಗಿರುವ ನೋಡುವ ನೋಟಗಳ ನೋವು ಗ್ರಹಿಸುವ
- ಕೊಡಲು ನೀನಾರು (ಸ-೯೨-೨)
- ಅಪರಿಮಿತ ಭಕ್ತರನು ನೋಡಬೇಕೆಂದೆನುತ ಸುಪವಿತ್ರತನದಿ ಮಲಗಿದ ಭಾವವೋ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೩)
- ಸುತರಿಲ್ಲದವರಿಗೆ ಗತಿಯಿಲ್ಲವೆಂಬುದು ಕೃತಕಶಾಸ್ತ್ರ ಲೌಕಿಕ ಭಾವಕೆ
- ಮಗನಿಂದೆ ಗತಿಯುಂಟೆ (ಬೆ-೧೪೫-೫)
- ಭಾವದುಭಯಾರ್ಥವಿದು ಎಲ್ಲರಿಗೆ ಸಮ್ಮತವಾದುದೀ ನಾಮ
- ಬಲ್ಲವರು ನೀವು ಪೇಳರಯ್ಯ (ಬೆ-೧೫೦-ಪ)
- ಅಂಭೋಜನಾಭನನು ಭಾವದಲಿ ನೆನೆದರೆ ಇಂಬುಂಟು ವೈಕುಂಠಪುರದೊಳಗೆ ಅಯ್ಯ
- ನೇಮವಿಲ್ಲದ ಹೋಮವೇತಕಯ್ಯ (ಬೆ-೧೭-೨)
೩೨೩೮. ಭಾವಮೈದುನ (ಸೋದರಿಯ ಗಂಡ)
- ಭಾವ ಮೈದುನ ಬಾರೊ ಮಾವ ಬೀಗನ ಅನುಜ

- ಬಾರೊ ನಮ್ಮ ಮನೆತನಕ (ಬೆ-೧೦೬-೨)
- ಅಂಧನೃಪಾಲನ ಕಂದಗಳೆಲ್ಲರ ಕೊಂದೈವರ ಭಾವನ
- ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೨)
- ಆ ವಿಧದೊಳವರ ಸುರಲೋಕದೊಳು ನೆಲೆಗೊಳಿಸಿ ಭಾವಮೈದುನರೈವರನು ರಕ್ಷಿಸಿ
- ನೀನಾವ ಬಾಂಧವನೊ (ಬೆ-೭೮-೧೦)

**೩೨೪೯. ಭಾವಶುದ್ಧಿ** - ಭಾವಶುದ್ಧಿಯಲಿ ಹೇಳುವನೊ ಕೇಳುವನವನಘಾವಳಿಯು ಪರಿಹರಿಸಿ
- ವಾಸುದೇವಾಯ ನಮೋ (ಬೆ-೯೦-೧೪)

**೩೨೫೦. ಭಾವಿ** - ತುಂಗಭದ್ರೆ ಇರಲಿಕ್ಕೆ ಭಾವಿ ಕೆರೆಯೇಕೆ
- ಮರೆಯದಿರು ಮರೆಯದಿರು (ಬೆ-೩೬-೧)

**೩೨೫೧. ಭಾವಿಸು** - ವಸುಧೆಯೊಳಗೆ ನಾನೊಬ್ಬಳೆ ಪಡೆದೆನೆ ನಿಮ್ಮ ಹಸುಮಗುವೆಂದು ಭಾವಿಸಬಾರದೆ
- ಇಂದು ಸೈರಿಸಿರಿ ಶ್ರೀಕೃಷ್ಣನ (ಬೆ-೧೦೫-೨)
- ಸೋದರತ್ತೆಯ ಸೊಸೆಯ ಮಗ ನಿನಗೆ ಭಾವಿಸಲು ಸೋದರಳಿಯನು ಮೂರು ಲೋಕ ವರಿಯೆ
- ನೀನಾವ ಬಾಂಧವನೊ (ಬೆ-೭೮-೩)
- ಭವರೋಗದ ವೈದ್ಯ ಬಾಡದಾದಿಕೇಶವನ ವಿವರವರಿತು ಭಾವಿಸಿ ಭಕ್ತಜನರು
- ಶಂಕರ ನಾರಾಯಣ ಬಿಡು (ಬೆ-೧೭೫-೯)

**೩೨೫೨. ಭಾಷಣ** - ದೇಶದೊಳು ವಂಶಕಂಟಕರೆನಿಸಿದವರೊಳಗೆ ಭಾಷಣವ ಮಾಡಬಪ್ಪುದೆ ಪ್ರಾಜ್ಞರು
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೪)

**೩೨೫೩. ಭಾಷಿಗ** (ವಿದ್ಯಾಧಿಪತಿ) - ರಾಶಿ ವಿದ್ಯೆಯ ಬಲ್ಲ ರಮಣೀ ಹಂಬಲನೊಲ್ಲ ಭಾಷಿಗನಿವನಾರಮ್ಮ
- ನಮ್ಮಮ್ಮ ಶಾರದೆ (ಬೆ-೧-೩)

**೩೨೫೪. ಭಾಷೆ** - ಕೊಟ್ಟು ಭಾಷೆಯ ತಪ್ಪಿದವಗೆ ಉಪಜಿಹ್ವೆ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೪)
- ಭಾಷೆ ಕೊಟ್ಟ ಬಳಿಕ ನಿಜವಿರಲು ಬೇಕು
- ಏನು ಇಲ್ಲದ ಎರಡು ದಿನದ ಸಂಸಾರ (ಬೆ-೧೧೪-೧)
- ದೇವಿ ಕೇಳೆನ್ನ ಭಾಷೆಯ ಮುಂದೆ ಅರ್ಜುನಗೆ ನಾವೆ ಸಾರಥಿಯಾಗಿ ಸಲಹುವೆವು
- ವಾಸುದೇವಾಯ ನಮೋ (ಬೆ-೯೦-೧೪)
- ಮೊದಲ ಭಾಷೆಯನು ದಿವಿಜರಿಗಿತ್ತೆ ವೇಗದಲಿ ಚದುರ ಕಲ್ಕ್ಯವತಾರ ಶರಣೆಂಬೆನು
- ನೋಡಯ್ಯ ನಿನ್ನ ದಾಸರ (ಬೆ-೮೫-೧೦)
- ತೊಟ್ಟ ಬಾಣವ ತೊಡಲೊಲ್ಲದೆ ತಾಯಿಗೆ ಕೊಟ್ಟ ಭಾಷೆಗೆ ಐವರ ಕೊಲ್ಲದೆ
- ಬಂದಿದೆ ದೂರು ಬರಿದೆ (ಬೆ-೮೬-೪)
- ವೇಷಭಾಷೆಯ ಕಲಿತು ಗೋಸನಿಯ ಕಡೆಗಿಟ್ಟು ಆಸೆಯನು ತೊರೆಯದೆ ತಪವ ಮಾಡಿ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೫)

**೩೨೫೫. ಭಾಳಾಕ್ಷ** (ಈಶ್ವರ) - ಭಾಳಾಕ್ಷ ಮುಂತಾಗಿ ಭಜಿಪ ದೇವರ ಮನೆಯ ಆಳಿನ ಆಳಿನ ಆಳಿನಡಿದಾಸ ನಾನು
- ದಾಸ ದಾಸರ ಮನೆಯ ದಾಸ (ಬೆ-೨೫-೧)

**೩೨೫೬. ಭೀತ** - ಭೀತನಾಗಿ ಓಡಿಬರುವ ಬಂಟನೇತಕೆ
- ಸತ್ಯವಂತರ ಸಂಗವಿರಲು (ಬೆ-೧೨೪-೨)

**೩೨೫೭. ಭೀತಿ** - ಯಮದೂತರುದ್ಧತ ಕಣ್ಗಳನು ಕಂಡು ಮನದಲ್ಲಿ ಭೀತಿಯಲಿ ಬಹಳ ಬಳಲಿ
- ಅಣುಮಹತ್ತಾದ ದೇವ (ಬೆ-೭೧-೩)

**೩೨೫೮. ಭೀತಿಗೊಳ್** (ಹೆದರು) - ಅಸಮಾನ ಬಂದಾಗ ಅತಿ ಭೀತಿಗೊಂಡಾಗ
- ಆರಿಗೆ ಆರಿಲ್ಲವಯ್ಯ (ಬೆ-೩೧-೧)

**೩೨೫೯. ಭೀಮ/ಭೀಮರಾಯ/ಭೀಮಸೇನ** - ಶೂರ ಭೀಮನು ಬಾಣಸಿಗನಾದನಂತೆ

- ಆರಿಗಾದರು ಪೂರ್ವಕರ್ಮಬಿಡದು (ಬೆ-೧೦೮-೪)
- ತ್ರಾಣದಲಿ ಭೀಮನೋ ಬಾಣದೊಳು ರಾಮನೋ
- ಬೆರೆಯದಿರು ಬೆರೆಯದಿರು (ಬೆ-೧೪೩-೪)
- ಅಂಜನೆಯಾತ್ಮಜ ಅಗಣಿತ ಬಲವಂತ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೧)
- ಕಂಜನಾಭನ ದೂತ ಕರುಣಿಸೊ ಬಲವಂತ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೧)
- ಕಟ್ಟಿದ ಪೂಮಾಲೆ ಕಸ್ತೂರಿ ನಾಮದ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೨)
- ಕಲಿ ಭೀಮಸೇನನ ನುಡಿಕೇಳಿ ಪೊರಮಟ್ಟು ಕುಲವ ಕೊಂದವನು ಕೌರವನೋ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೬)
- ಕುಶಲತನದಲಿ ಕೌರವಾದಿಗಳ ಸಂಹರಿಸಿದ ಸಹಾಯ ವೀರ ಶ್ರೀ ಭೀಮಸೇನನನಿಗೆ
- ಜಯಮಂಗಲಂ ನಿತ್ಯ (ಬೆ-೧೭೧-)
- ಕಟ್ಟಾಳು ಭೀಮಸೇನನು ರಣದಿ ಗದೆಯಿಂದ ಕುಟ್ಟಿ ಬಿಸುಟಲಿ ನಿನ್ನ ತೊಡೆಗಳೆರಡನು
- ವಾಸುದೇವಾಯ ನಮೋ (ಬೆ-೯೦-೧೧)
- ದ್ವಾಪರಯುಗದಲಿ ಭೀಮಸೇನನೆನಿಸಿ ಶ್ರೀಪತಿಯ ಪಾದ ಕಡುಭಜಕನಾಗಿ
- ಪರಮ ಪದವಿಯನೀವ ಗುರು ಮುಖ್ಯ ಪ್ರಾಣನ (ಬೆ-೭_೨)
- ಭೀಮನೆಂಬುವರಿಗೆ ಯಾತರ ಭಯವಿಲ್ಲ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-ಪ)
- (ಕೀಚಕನು) ಮರುತಸುತ ಭೀಮನಿಂದಿರು ಳೊಳಗೆ ಹತನಾದ ನರಗುರಿಯೆ ನಿನ್ನ ಪಾಡೇನು ಧರೆಯೊಳಗೆ
- ನೋಡಿ ಮರುಳಾಗದಿರು (ಬೆ-೧೨೭-೩)
- ಸುಕೃತಿವಂತನು ಯಮುನ ತನಯ ಭೀಮಾರ್ಜುನರು
- ಸಿಂಗರದ ಸಿರಿಧರನೆ (ಬೆ-೧೬೭-೨)
- ಪೊಂಬಟ್ಟೆ ಪೀತಾಂಬರವನುಟ್ಟು ಮೆರೆವಂಥ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೨)
- ಸೂರಿವೆಗ್ಗಳತನ ಕಿತ್ತು ಈಡಾಡಿದ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೩)
- ರಾಮರಾಯರಿಗೆ ನೀ ಪ್ರೇಮದ ಬಂಟನು ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೪)
- ಛಪ್ಪನ್ನ ದೇಶಕ್ಕೆ ಒಪ್ಪುವ ಕಾಗಿನೆಲೆಯ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೫)
- ತಪ್ಪದೆ ಕನಕಗೆ ವರಗಳ ಕೊಡುವಂಥ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೫)
- ವಾರಿಧಿಯನು ದಾಟಿ ಸೀತೆಗುಂಗುರವಿತ್ತ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೩)
- ಕಾಮಿತ ಫಲವಿತ್ತು ಕರುಣದಿ ಸಲಹಯ್ಯ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೪)
- ಕಾಮಿತ ಫಲಗಳ ಕೊಟ್ಟು ನೀ ಸಲಹಯ್ಯ ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೮)

**೩೨೫೦. ಭೀಷ್ಮ** - ಕಲಿಗಳೊಳು ಭೀಷ್ಮ ದ್ರೋಣಾಚಾರ್ಯ ಫಲ್ಗುಣನೊ
- ಮೆರೆಯದಿರು ಮೆರೆಯದಿರು

(ಬೆ-೧೪೮-೨)
- ಕಲಿಗಳೊಳು ದ್ರೋಣ ಫಲುಗುಣ ಭೀಷ್ಮ ನಾನಲ್ಲ ನಳಿನಮುಖಿ ದ್ರೌಪದಿಯಹಲ್ಯೆಯಲ್ಲವೊ ಸ್ವಾಮಿ
- ಕಾಯೊ ಕರುಣಾಕರನೆ (ಬೆ-೫೯-೨)
- ಅತಿಕ್ಲೇಶಗೊಳುತಿಹರು ವಿದುರ ಭೀಷ್ಮಾದಿಗಳು
- ವಾಸುದೇವಾಯ ನಮೋ (ಬೆ-೯೦-೩)
- ಹರುಷಪಟ್ಟರು ಮನದಿ ವಿದುರ ಭೀಷ್ಮಾದಿಗಳು
- ವಾಸುದೇವಾಯ ನಮೋ (ಬೆ-೯೦-೧೩)
- ಸರಳಮಂಚದ ಮೇಲೆ ಮಲಗಿ ಪ್ರಾಣವ ಬಿಟ್ಟುಕುರುಪನ ಕೊಂದವ ಭೀಷ್ಮನೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೨)

೩೨೫೧. ಭುಂಜಿಸು - ನಾಲಗೆಯೆರಡರವನ ಭುಂಜಿಸುವನ ಮೇಲೇರಿ ಬಹನ ತಂದೆಯು ಇಹ ಗಿರಿಯನು
- ರಮಣಿ ಕೇಳಲೆ ಮೋಹನ (ಬೆ-೯೬-೨)

೩೨೫೨. ಭುಗಿಲು - ಧೂಮಜ್ವಾಲೆಗಳೊಡನೆ ಭುಗಿಭುಗಿಲು ಛಿಟಿಲೆನುತ ಆ ಮಹಾ ರಕ್ಕಸನ ಪೊಡೆಯ ಸೀಳಿ
- ನೋಡಯ್ಯ ನಿನ್ನ ದಾಸರ (ಬೆ-೮೫-೪)

೩೨೫೩. ಭುಜ - ಸ್ಕಂಧದಲಿ ಅತಿಥಿಗಳು ವಿದ್ಯಾತತಿಗಳು ಮಹಾ ಚಂದದರಸುಗಳು ಭುಜ ತೋಳಿನಲ್ಲಿ
- ವಿಶ್ವಲೋಕೇಶ ವಿಶ್ವಲೋಕೇಶ (ಸ-೨೩೪-೨)
- ಭುಜ ಚಕ್ರಧರ ಸಾತ್ತ್ವಿಕರ ಪಾದಾಂಬುಜ ರಜ ಭಜಕರ ಭಜಕನೆಂದೆನಿಸೆನ್ನ
- ದೇಶಾಧಿಪತಿ ನರಹರಿಯೆ (ಬೆ-೨೧-೧)
- ಕುಗ್ಗಿದುವು ಕುಮುದ ಕುಂದ ಚಕೋರಾದಿಗಳು ಭುಜ ಹಿಗ್ಗಿದುವು ಚಕ್ರವಾಕಾಕಾಶದಲಿ ನೆರೆದು
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೨)
- ತನುರೋಮ ಗಿಡ ವೃಕ್ಷ ತಳಿರು ಭುಜಲತೆ ಮೆರೆವ ಘನ ಸಿಂಹ ಮೃಗ ಗಜಗಳಿಂದೊಪ್ಪುವ
- ಪಥ ನಡೆಯದಯ್ಯ (ಬೆ-೯-೨)
- ಹರನ ಕರುಣದ ಬಲವು ಸುರರ ಗೆಲಿದಾ ಬಲವು ಪರಮಶಕ್ತಿಯ ತನ್ನ ಭುಜದ ಬಲವು
- ಆವ ಬಲವಿದ್ದರೇನು (ಬೆ-೧೩೩-೨)

೩೨೫೪. ಭುಜಂಗಶಯನ (ವಿಷ್ಣು) - ಮಂಗಳ ಮಹಿಮ ಭುಜಂಗಶಯನ ಕಾಳಿಂಗಮರ್ದನ ದೇವೋತ್ತುಂಗ
- ತಾಳಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಯೋ (ಸ-೧೧೦-೧೧)
- ಮಂಗಳ ಮಹಿಮ ಭುಜಂಗಶಯನ ನಾರಿ ಭಂಗವ ಕಾಯ್ದವನ
- ಫುಲ್ಲವದನೆ ಕೇಳೆ ನಿಲ್ಲಲಾರೆ (ಬೆ-೯೫-೩)

೩೨೫೫. ಭುಜಗಧರ (ಈಶ್ವರ) - ಭುಜಗಧರನ ಕೈಯ ಆಯುಧವನು ತಂದನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೨)

೩೨೫೬. ಭುಜಗೇಶ್ವರ (ಆದಿಶೇಷ) - ಭುಜಗೇಶ್ವರ ಬಲ್ಲ ಭೂರಿಲೋಚನ ಬಲ್ಲ ತ್ರಿಜಗದಧಿಪತಿ ತ್ರಿವಿಕ್ರಮನೆಂಬುದನು
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-೧)

೩೨೫೭. ಭುಜಬಲ - ವಾರಣ ಕ್ರತು ಸಂಪೂರಣ ಕಂಸ ಸಂಹಾರಣ ಭುಜಬಲ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೫೯-೮)
- ಭುಜಬಲದಿಂದ ಭೂಪಾಲರ ಗೆಲಿದನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೨)

೩೨೫೮. ಭುವನ -ನಳಿನಜಾಂಡವೊಂದರೊಳಗೆ ಭುವನ ಪದಿನಾಲ್ಕು ಬಸುರೊಳಗೆ ಇಂತು ತಮ್ಮ ಸುಳಿ ನಾಭಿಕಮಲ ಮಧ್ಯದಿ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೭)
- ಮುಕುಟ ಮಂಡೆಯಲಿ ಧ್ರುವಲೋಕ ಭುವನಾವಳಿಯು ನಿಖಿಲ ಶ್ರುತಿ ನವರತುನ

ನಿಟಿಲದಲ್ಲಿ
– ವಿಶ್ವಲೋಕೇಶ ವಿಶ್ವಲೋಕೇಶ (ಸ–೨೩೪–೧)
– ಸಾವಿರ ತೋಳವನ ಸರಸದಿಂದಲಿ ಕಡಿದ ಭುವನ ರಕ್ಷಕನಾದ ಮದ್ದಾನೆ
– ಆನೆ ಬರುತಾದೆ ನೋಡಮ್ಮ (ಸ–೧೫–೪)
– ಈರೇಳು ಭುವನಗಳ ಉದರದೊಳಿಟ್ಟನ ಗೋವಿಂದ ಎನ್ನಿರೊ
– ಮಂದರಧರ ಪಾವನ ಇಂದಿರಾರಮಣ (ಸ–೨೦೦–೩)
– ಈ ಭುವನವೆಲ್ಲವು ಚೆಲುವ ನಾಭಿಯಲ್ಲಿ
– ವಿಶ್ವಲೋಕೇಶ ವಿಶ್ವಲೋಕೇಶ (ಸ–೨೩೪–೩
– ಈರೇಳು ಭುವನ ತನ್ನುದರದೊಳಿಟ್ಟನ ಶ್ರೀರಾಮನೆನ್ನಿರಿ
– ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ–೮೧–ಪ)
– ಚಿನ್ಮಯನೆ ಸಕಲ ಭುವನಾಧಾರನೆಂಬುದನು ಬಣ್ಣಿಸಲು ಎನ್ನಳವೆ ಪನ್ನಗೇಂದ್ರನು ಹೊಣೆಯೆ
– ನಿನ್ನ ಮಹ ಮಹಿಮೆಗೆ (ಬೆ–೫೦–ಅ)
– ನೀವು ಭುವನ ಪದವಿಯನು ಪಡೆಯ ಬೇಕಾದರೆ ಶಿವ ಶಿವ ಎನ್ನಿರೊ
– ಶಿವ ಶಿವ ಶಿವ ಎನ್ನಿರೊ (ಬೆ–೩_೫)
– ದಾನಮುಖದಲಿ ಬಲಿಯ ಬೇಡಿ ಭುವನ ವನೊಂದು ಪದದಿ ಅಳೆದವನಾವನು
– ಆತನೇ ಪರಮಾತ್ಮ ಪರತತ್ತ್ವ (ಬೆ–೭೪–೧)
– ಲೋಕದೊಳು ಕಾಗೆನೆಲೆಯಾದಿಕೇಶವ ಭಕ್ತ ಸಾಕಾರನೆಂಬುದಕೆ ಸಕಲ ಭುವನವೆ ಹೊಣೆಯೊ
– ನಿನ್ನ ಮಹ ಮಹಿಮೆಗೆ (ಬೆ–೫೦–೩)
– ಭುವನಕೆ ಬಲ್ಲಿದರಾಗಬೇಕಾದರೆ ಶಿವ ಶಿವ ಎನ್ನಿರೊ
– ಶಿವ ಶಿವ ಶಿವ ಎನ್ನಿರೊ (ಬೆ–೩_೫)
– ಈತನೀಗ ವಾಸುದೇವ ಈ ಸಮಸ್ತ ಭುವನ ದೊಡೆಯ
– ಈತನೀಗ ವಾಸುದೇವನು (ಬೆ–೭೫–ಅ)
– ಈರೇಳು ಭುವನದೊಳು ಇರುವ ಮೂರುತಿ

ನೀನು
– ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ–೬೩–೪)

**೩೨೫೯. ಭೂ** – ಭೂರಮಣಿಯನೊತ್ತಿ ಅಡಿಗೆ ಬೀಗನ ಶಿರವನ್ನು ಕಾಯ್ದ ಶ್ರೀರಮಣ ಆದಿ ಕೇಶವನನ್ನು ನೋಡಿರೊ
– ಈತನೀಗ ವಾಸುದೇವನು (ಬೆ–೭೫–೩)
– ನೀ ದಯಾಪಾತ್ರನೆಂಬುದ ಕೇಳಿ ನಾನರಿತೆ ಭೂಧರೆಯ ಸುರರ ನೀ ಸಲಹಲಾಗ
– ನೋಡಯ್ಯ ನಿನ್ನ ದಾಸರ (ಬೆ–೮೫–೧)

**೩೨೬೦. ಭೂಕಾಂತೆ** (ಭೂದೇವಿ) – ಭೂಕಾಂತೆಯ ಸೊಸೆಯರನೆತ್ತಿ ಬಲುಹಿಂದೆ ನೂಕಿ ತಂದ ಕಳ್ಳ ಕೋ ಎನ್ನಿರೊ
– ಕೋ ಕೋ ಕೋ ಎನ್ನಿರೊ (ಬೆ–೧೦೧–೪)

**೩೨೬೧. ಭೂತ** – ಸೇತುವೆಯ ಕಟ್ಟಿ ಶರನಿಧಿ ದಾಟಿ ಬರಲಾಗ ಭೂತಗಣ ಸಂತತಿಯು ನಡುನಡುಗುತಿರಲು
– ನೋಡಯ್ಯ ನಿನ್ನ ದಾಸರ (ಬೆ–೮೫–೭)
– ಭೂರಿ ಭೂತಗಳೆ ಭೂಸತಿಯಕಾಂತನ ನಾಮಧಾರಿಗಳ ತೊಡರು ನಿಮಗಳವಡದು ನಾನರಿವೆ
– ಬೇಡ ಬೇಡ ಎಲೆಲೆ ದುರಿತಗಳಿರ (ಬೆ–೨೯–೧)

**೩೨೬೨. ಭೂತಳ** – ನೀತಿಯ ತಪ್ಪಿ ನೀನಿರುವೆ ಭೂತಳ ಭೋಗ ಸ್ಥಿರವೆ
– ಹಿಂಗದೆ ಮನದಣಿಯ ರಂಗನ ಭಜಿಸೊ (ಸ–೨೫೯–೧)
– ಭೂತಳವೆರಸಿ ರಸಾತಳಕೊಯ್ದನ ಪಾತಾಳ ದೊಳು ಕಂಡೆ ಗೋವಿಂದ
– ಪರಮಪುರುಷ ಹರಿ ಗೋವಿಂದ (ಬೆ–೩೯–೩)
– ಭೂತಳಕೆ ಬಂದು ಹದನೇನ ತೀರಿಸಿಕೊಂಡೆ
– ಎಲ್ಲಿಂದ ಬಂದೆ ಮುಂದೆತ್ತ ಪಯಣ (ಬೆ–೧೩೫–೧)
– ಸೀತೆಯನು ಕದ್ದು ಒಯ್ದವನ ಕೊಲ್ಲುವ ಭರದಿ ಭೂತಳದ ಕಪಿಗಳನು ಕೂಡಿಕೊಂಡು
– ನೋಡಯ್ಯ ನಿನ್ನ ದಾಸರ (ಬೆ–೮೫–೭)

- ಭೂತಳದೊಳಿದ್ದ ಮನು ಮುನಿ ನಿರ್ಜರವ್ರಾತ ವಾಣೀಶನೊಡನೆ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೪)

೩೨೬೩. **ಭೂದಾನ** - ಕ್ಷೋಣಿಗೆರಗಿಸಿ ಕಾರ್ತವೀರ್ಯಾರ್ಜುನನ ಮಡುಹಿ ಜಾಣತನದಲ್ಲಿ ಭೂದಾನಗಳ ಭೂಸುರರ
- ನೋಡಯ್ಯ ನಿನ್ನ ದಾಸರ (ಬೆ-೮೫-೬)

೩೨೬೪. **ಭೂದೇವಿ** - ಶ್ರೀದೇವಿ ಭೂದೇವಿ ಮಾತೆಯರು ತಾವಿರಲು ಯಾದವರಾಯ ಮೋಹದ ತಂದೆಯು
- ಆರು ಸಮಯಕ್ಕೊದಗಲಲ್ಲ (ಬೆ-೩೨-೨)
- ಚೆನ್ನಗಣ್ಣವನೆಂಬನೊರ್ವ ಖಳ ಭೂದೇವಿ ಕನ್ನಿಕೆಯನೊಯ್ಯುತಿರೆ ಕನಲಿ ಮನದಿ
- ನೋಡಯ್ಯ ನಿನ್ನ ದಾಸರ (ಬೆ-೮೫-೩)
- ಭೇದವಿಲ್ಲದೆ ಸಕಲ ಜೀವರನು ಪೊತ್ತಿಹಳು ಭೂದೇವಿಯೆಂಬಾಕೆ ನಿನ್ನ ಅರ್ಧಾಂಗಿಯು
- ಜಗದಂತರ್ಯಾಮಿ ಎಂತೆಂದು (ಬೆ-೫೮-೧)

೩೨೬೫. **ಭೂಧರ** (ನಾರಾಯಣ) - ಕಾರ್ಯಗಳಿವೆ ಭೂಧರನೆ ಒಲಿದುಪ್ಪವಡಿಸು ಹರಿಯೆ
- ಸಿಂಗರದ ಸಿರಿಧರನೆ (ಬೆ-೧೬೭-೫)

೩೨೬೬. **ಭೂನಾಗ** (ಎರೆಹುಳು) - ಗಾಣದ ತುದಿಯೊಳಿರ್ಪ ಭೂನಾಗನ ಕಂಡು ಪ್ರಾಣಾಹುತಿಯೆಂದು ಸವಿವ ಮೀನಂತೆ
- ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-೩)

೩೨೬೭. **ಭೂಪ/ಭೂಪತಿ/ಭೂಪಾಲ** - ಪೊಡವಿಯ ಕೊಟ್ಟರೆ ಅಳೆಯುತಿದೆ ತನ್ನ ಕೊಡಲಿಯೊಳು ಭೂಪರ ಕಡಿಯುತಿದೆ
- ಮಗುವಿನ ಮರುಳಿದು ಬಿಡದಲ್ಲ (ಸ-೯೮-೨)
- ಚಿತ್ತಜಾರಿ ಕೊಲ್ಲಲಂಬರೀಷ ಭೂಪೋತ್ತಮನ ಕಾಯ್ದೆ ಶ್ರೀ ನಾರಾಯಣಾ
- ನಾರಾಯಣಾ ನಮೋ (ಬೆ-೫೧-೧)
- ಕೋಪಾವೇಶದಲಿ ದುಃಶಾಸನನನು ಸೀಳಿ ಭೂಪರ ಬಲದೊಳಗೆ ಜರೆಜರೆದು ಕರೆದವನ
- ಪರಮ ಪದವಿಯನೀವ ಗುರು ಮುಖ್ಯ ಪ್ರಾಣನ (ಬೆ-೭೨)
- ಧರಣಿಯ ಮುನ್ನಾಳ್ದ ನಹುಷ ಸಗರರೆನಿಪ ಭೂಪತಿಗಳು ಸಿರಿಯ ಜಯಿಸಲಿಲ್ಲ
- ನಂಬಬೇಡಿ ಸಿರಿಯು ತನ್ನದೆ (ಬೆ-೧೧೫-)
- ಭುಜಬಲದಿಂದ ಭೂಪಾಲರ ಗೆಲಿದನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೨)

೩೨೬೮. **ಭೂಪಾಳಿ** (ಒಂದು ರಾಗ) - ತಾಲ ದಂಡಿಗೆ ಪಿಡಿದು ತುಂಬುರು ನಾರದರು ಭೂಪಾಳಿ ದೇಶಾಕ್ಷಿ ನಾರಾಯಣಿ ಗುಜ್ಜರಿ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೫)

೩೨೬೯. **ಭೂಭಾರ** (ಭೂಮಿಯಲ್ಲಿ ದುಷ್ಟಶಕ್ತಿಗಳ ವಿಜೃಂಭಣೆ) - ಪೇರಣಪುರಪತಿ ಸಿರಿ ಭೂಭಾರೋತ್ತಾರಣ ಗುಣನಿಧಿ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೮)

೩೨೭೦. **ಭೂಭುಜ** (ಕ್ಷತ್ರಿಯ) - ತವಕದಿಂದಲಿ ಒಡಿದ ಭೂಭುಜರ ಕಡಿದ ಶಿವನ ಬಿಲ್ಲನು ಮುರಿದು
- ಇಂದು ನೀ ಕರೆದುತಾರೆ (ಬೆ-೯೨-೨)

೩೨೭೧. **ಭೂಮಂಡಲ** - ಪಂಚತ್ರಿಂಶತ್ಕೋಟಿ ಭೂಮಂಡಲದೊಳೆನ್ನಂಥ ಪಂಚಪಾತಕನುಂಟೆ ವರದಾ
- ಮೊರೆಹೊಕ್ಕೆ ಹರಿ ನಿಮ್ಮ ಚರಣ ಕಮಲವ (ಸ-೨೧೩-೭)

೩೨೭೨. **ಭೂಮಿ** - ಭೂಮಿ ನೆಗಹುದ ಬಲ್ಲ ಪುಟ್ಟ ಮಗು ಪ್ರಹ್ಲಾದಗೊಲಿದನಲ್ಲ
- ನಾರಾಯಣನೆ ಈತ (ಸ-೧೩೮-೨)
- ಎರಡು ಪದ ಭೂಮಿ ತಾನೊಲ್ಲ
- ನಾರಾಯಣನೆ ಈತ (ಸ-೧೩೮-೨)
- ದಾಡೇಲಿ ದೂಡಿ ಭೂಮಿ ತಂದ
- ನಾರಾಯಣನೆ ಈತ (ಸ-೧೩೮-೩)
- ಮೂಗಿಂದ ಭೂಮಿಯನೆತ್ತಿದನೆ ಕಂದ ಕೂಗಲು ಕಂಬದಿ ಬಂದ ಕಾಣಕ್ಕ

- ರಂಗನೆಂಥವನೆಂಥವನೆಲೆ ತಂಗಿ (ಸ-೨೨೨-೧)
- ಆ ಮಹಾಸಿರಿಯ ಗರ್ವದಿ ಮುಂದರಿಯದೆ ಭೂಮಿಯನು ಬಲಿ ತಾನಾಳುತಿರೆ
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೫)
- ಶ್ರುತಿಯನುದ್ಧರಿಸಿ ಭೂಮಿಯ ಪೊತ್ತು ಅಡವಿಯ ಪಥದೊಳು ತಿರುಗಿದನ
- ಹರಿಮುಖಿ ಹರಿವಾಣಿ (ಬೆ-೯೮-೩)
- ಚಿನ್ನದ ಕಣ್ಣನ ಕೊಂದು ಭೂಮಿಯ ವನ್ನಜಸಂಭವನಿಗಿತ್ತಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೩)
- ಆವಿನ ಕಳ್ಳನ ಕೊಂದು ಭೂಮಿಯ ಅವನಿಯ ಸುರರಿಗಿತ್ತಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೬)
- ಭೂಮಿಯನು ಮೂರಡಿಯ ಮಾಡಿದೆನೆಂಬ ಸಿರಿಯೆ
- ಆವ ಸಿರಿಯಲಿ ನೀನು ಎನ್ನ ಮರೆತೆ (ಬೆ-೬೭-೩)
- ಹಸನಾದ ಭೂಮಿಯನು ಧಾರೆಯೆರೆಯಲು ಬೇಕು
- ಏನು ಇಲ್ಲದ ಎರಡು ದಿನದ ಸಂಸಾರ (ಬೆ-೧೧೪-೧)
- ಪಾತಾಳಕಿಳಿದು ಭೂಮಿಯನೊಯ್ದವನ ಕಿರಾತನನಟ್ಟಿ ಸತಿಯ ಗೆದ್ದವನ
- ಕರೆತಾರೆ ಕಾಮಿನಿಕಮಲಜಪಿತನ (ಬೆ-೯೩-೩)
- ವಾಮನನಾಗಿ ನಿಸ್ಸೀಮ ಬಲಿಯ ಕೈಯ ಭೂಮಿಯನಳಕೊಂಡೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೫)
- ಮನ್ನಿಸಲ್ಕೆದಿ ಅರ್ಭಕನ ಅಡಿಯಿಟ್ಟಳೆಯೆ ಭೂಮಿಯನು ಕ್ಷತ್ರಿಯರ ಶಿರವ ತಡೆಗಡೆಯೆ
- ಪೂಸರನ ಜನಕನೇ (ಬೆ-೧೬೮-೫)
- ಸಾಯಕವದು ತೀವ್ರದಿ ಬರುತಿರೆ ಕಂಡು ಮಾಯಾಪತಿಯು ಭೂಮಿಯನೊತ್ತಿ
- ರಮಣಿ ಕೇಳೆಲೆ ಮೋಹನ (ಬೆ-೯೬-೧)
- ಹುಟ್ಟದಾ ಯೋನಿಗಳಿಲ್ಲ ಮೆಟ್ಟದಾ ಭೂಮಿಗಳಿಲ್ಲ
- ಕುಲ ಕುಲವೆಂದು ಹೊಡೆದಾಡದಿರಿ (ಬೆ-೧೨೧-೧)
- ಭೂಮಿಗಳ್ಳನ ಕೊಂದು ಬಳಲಿ ತೆರೆದೆಯೊ ಬಾಯ
- ಏನು ಕಾರಣ ಬಾಯ ತೆರೆದಿ (ಬೆ-೧೫೫-೧)
- ಸುಲಿದು ಚರ್ಮವ ಹಾಸಿದರೆ ಭೂಮಿಗೈದು ಮಡಿ ನೆಲೆಯಾವುದೀ ದೇಹಕೆ
- ನೊಂದೆನಾ ಹರಿಯೆನ್ನದೆ (ಬೆ-೧೩-೩)
- ಮಲೆತು ಮಾವನ ಕೊಂದು ನಿಂದೆ ಇಂಥ ಇಳಿಯಬಾರದ ಭೂಮಿಗಿಳಿದ ನಾರಸಿಂಹ
- ಏನು ಕಾರಣ ಬಾಯ ತೆರೆದಿ (ಬೆ-೧೫೫-೨)

೩೨೭೩. **ಭೂರಮಣ** - ಯಮಳರನು ಪಡೆದ ತಾಯಿಗೆ ಸಹೋದರನು ಭೂರಮಣರೊಳಗಗ್ಗಳನು ಅತಿ ಧೈರ್ಯನು
- ನೀನಾವ ಬಾಂಧವನೊ (ಬೆ-೭೮-೭)

೩೨೭೪. **ಭೂರಿ** - ಭೂರಿ ಭೂತಗಳೆ ಭೂಸತಿಯಕಾಂತನ ನಾಮಧಾರಿಗಳ ತೊಡರು ನಿಮಗಳವಡದು ನಾನರಿವೆ
- ಬೇಡ ಬೇಡ ಎಲೆಲೆ ದುರಿತಗಳಿರ (ಬೆ-೨೯-೧)
- ಭೂರಿ ವಾರ್ತೆಯ ಪಡೆದೆ ..... ವರ ಕಾಗಿನೆಲೆಯಾದಿಕೇಶವನ
- ಬಲ್ಲವರು ನೀವು ಪೇಳಿರಯ್ಯ (ಬೆ-೧೫೦-೩)

೩೨೭೫. **ಭೂರಿಲೋಚನ** (ಇಂದ್ರ) - ಭುಜಗೇಶ್ವರ ಬಲ್ಲ ಭೂರಿಲೋಚನ ಬಲ್ಲ ತ್ರಿಜಗದಧಿಪತಿ ತ್ರಿವಿಕ್ರಮನೆಂಬುದನು
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-೧)

೩೨೭೬. **ಭೂವರ** - ಧುರದೊಳು ತನಗೆ ಬೆಂಬಲ ಮಾಡಿಕೊಂಡು ಭೂವರಗೆ ತಾನೊಲಿದನ
- ರಾಜವದನೆ ಸುರರಾಜನ (ಬೆ-೯೭-೨)

೩೨೭೭. **ಭೂವಲಯ** - ಭೂವಲಯದೊಳು ಕೀರ್ತಿಪಡೆದು ಸಲಹಿದ ನಮ್ಮ ದೇವ ವರ ಕಾಗಿನೆಲೆಯಾದಿಕೇಶವ ರಾಯ
- ನೀನಾವ ಬಾಂಧವನೊ (ಬೆ-೭೮-೧೦)

೩೨೭೮. **ಭೂಷಣ** (ಆಭರಣ) - ಪೊಡವಿ ಭಾರವ ಹೊತ್ತು ಮೃಡಗೆ ಭೂಷಣನಾಗಿ ಹೆಡೆಯೊಳಗೆ ಮಾಣಿಕ್ಯವಿರಿಸಿಕೊಂಡು
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೯೯-೩)

೩೨೭೯. **ಭೂಸತಿ** (ಭೂದೇವಿ) - ಭೂರಿ ಭೂತಗಳೆ ಭೂಸತಿಯಕಾಂತನ ನಾಮಧಾರಿಗಳ ತೊಡರು ನಿಮಗಳವಡದು ನಾನರಿವೆ
- ಬೇಡ ದೇಡ ಎಲೆಲೆ ದುರಿತಗಳಿರ (ಬೆ-೨೯-೧)

೩೨೮೦. **ಭೂಸುರ** (ಬ್ರಾಹ್ಮಣ) - ಸೃಷ್ಟಿಯೊಳು ಭೂಸುರರ ಪೊರೆ ಜಗಜಟ್ಟಿ ಆದಿಕೇಶವ ರಾಯನಂತೆ
- ಮಗುವಿನ ಮರುಳಿದು ಬಿಡದಲ್ಲ (ಸ-೧೯೮-೩)
- ಧರೆಯ ಈರಡಿ ಮಾಡಿದನೆ ಭೂಸುರರಿಗೆ ದಾನವ ನೀಡಿದನೆ
- ರಂಗನೆಂಥವನೆಂಥವನೆಲೆ ತಂಗಿ (ಸ-೨೨೨-೨)
- ಭೂಸುರಪ್ರಿಯಭಜಕ ಪೋಷಕನೆ ರಕ್ಷಿಪುದು ಕೇಶವನೃಸಿಂಹರೊಲಿದು
- ವಾಸುದೇವಾಯ ನಮೋ (ಬೆ-೯೦-ಪ)
- ಕ್ಷೋಣಿಗೆರಗಿಸಿ ಕಾರ್ತವೀರ್ಯಾರ್ಜುನನ ಮಡುಹಿ ಜಾಣತನದಲ್ಲಿ ಭೂದಾನಗಳ ಭೂಸುರರ
- ನೋಡಯ್ಯ ನಿನ್ನ ದಾಸರ (ಬೆ-೮೫-೬)
- ಪಶುವಿನ ಮಾಂಸದೊಳುತ್ಪತ್ತಿ ಕ್ಷೀರವ ವಸುಧೆಯೊಳಗೆ ಭೂಸುರರುಣ್ಣರೇನಯ್ಯ
- ಕುಲ ಕುಲ ಕುಲವೆನ್ನುತಿಹರೊ (ಬೆ-೧೨೦-೧)

೩೨೮೧. **ಭೂಸುರಪ್ರಿಯ** - ಭೂಸುರಪ್ರಿಯ ಕಾಗಿನೆಲೆಯಾದಿಕೇಶವನ ಮೀಸಲಿನ ಪಾದ ಭಜನೆ ಕಡುಲೇಸು ಮನವೆ
- ಅರಿತು ನಡೆಯಲಿಬೇಕು (ಸ-೭-೩)

೩೨೮೨. **ಭೂಸುರಸ್ವ** (ಬ್ರಾಹ್ಮಣರ ಸ್ವತ್ತು) - ಭೂಸುರಸ್ವವ ಹ್ರಾಸ ಮಾಡಿದ ಫಲ ಏಸೇಸು ಜನುಮಕು ಬಿಟ್ಟೀತೆ
- ಕೇಶವನೊಲುಮೆಯು ಆಗುವ ತನಕ (ಸ-೮೯-೧)

೩೨೮೩. **ಭೃಂಗಿ**- ತಾಳದಂಡಿಗೆ ಭೃಂಗಿಮೇಳಗಳ ಕೂಡಿ
- ಬಂಟನಾಗಿ ಬಾಗಿಲಕಾಯ್ವೆ (ಬೆ-೪೫-೨)

೩೨೮೪. **ಭೃಗು** (ಒಬ್ಬ ಋಷಿ) - ಪೌಂಡ್ರಿಕನು ವಾಲ್ಮೀಕಿ ಭೃಗು ಕಶ್ಯಪ ವಸಿಷ್ಠ ಮುನಿ ನಿಕರವಿದೆ ರಕ್ಷಿಸುವುದೆನುತ
- ಪೂಸರನ ಜನಕನೇ (ಬೆ-೧೬೮-೪)
- ನ್ಯಾಯದಲಿ ವಿಕ್ರಮನೊ ಉಪಾಯದಲಿ ಭೃಗು ಋಷಿಯೊ
- ಬೆರೆಯದಿರು ಬೆರೆಯದಿರು (ಬೆ-೧೪೩-೮)
- ನಳಿನಾಕ್ಷ ಸತ್ತ್ವಗುಣ ನಿನಗೆ ಉಂಟೆಂಬುದಕೆ ಸಲಿಲಜೋದ್ಭವ ಭೃಗುಮುನೀಂದ್ರ ಹೊಣೆಯೊ
- ನಿನ್ನ ಮಹ ಮಹಿಮೆಗೆ (ಬೆ-೫೦-೨)
- ಭರದಿಂದ ಭೃಗುಮುನಿ ಬಂದು ಕೋಪಿಸೆ ಬೇಗ ಚರಣವನೊತ್ತಿದನ
- ತೋರೆ ಬೇಗನೆ ಸಖಿ (ಬೆ-೯೪-೩)
- ಭೋಜ ವರಭೃಗು ಕಪಿಲ ಮಾರಹರ ಗೌತಮಜಾನುಜ ಋಷಿ ಕೌಶಿಕ ವಸಿಷ್ಠ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೬)

೩೨೮೫. **ಭೃತ್ಯ** - ಸೊಕ್ಕಿನಡೆಯುವ ಭೃತ್ಯ ಅವ ಕ್ರೂರ ಕೃತ್ಯ
- ಅಹುದಾದರಹುದೆನ್ನಿ (ಬೆ-೧೩೧-೩)
- ನಕುಲ ಸಹದೇವಕರು ಬಂದರೇಳೈ ಭೃತ್ಯ ನಿಕರಕೊಲಿದು ಉಪ್ಪವಡಿಸಯ್ಯ ಹರಿಯೆ
- ಸಿಂಗರದ ಸಿರಿಧರನೆ (ಬೆ-೧೬೭-೨)
- ಭೃತ್ಯನಂತೆ ಹಲ್ಲ ತೆರೆದು ಕೆಲಸ ಮಾಡಿ ದಣಿಯುವೆ
- ಸಾಕು ಸಾಕು ಮನುಜ ಸೇವೆಯು (ಬೆ-೪೨-೧)
- ಅತ್ತೆಗೆ ವಲ್ಲಭನಾದ ಭೃತ್ಯರಿಗಾಳಾದ ಚಿತ್ತ ಒಲಿದು ಚೆನ್ನ ಆದಿಕೇಶವನೊಳು

- ಏನೆ ಮನವಿತ್ತೆ ಲಲಿತಾಂಗಿ
(ಬೆ-೧೫೪-೩)

೩೨೮೬. ಭೇದ - ಮೂತೆರದ ಭೇದಗಳ ಕಡಿದು ಕಣ್ಣಿಯ ಮಾಡಿ ಚಿತ್‌ಲಿಂಗಕಗ್ಗವಣಿ ತಂದವರ ತೋರು
- ನಿಜವರಿತು ಲಿಂಗವನು ಪೂಜೆ ಮಾಡುವರು
(ಸ-೧೪೨-೧)
- ಭೇದವು ಲಯವಾಗದನಕ ಬಾಡದ ಆದಿಕೇಶವ ನಿಮ್ಮ ನೆಲೆಗಾಣದನಕ
- ಸದರವಲ್ಲವೊ ನಿಜಯೋಗ (ಸ-೨೪೩-೩)
- ಆದರಿಸು ನಿನ್ನ ಲೆಂಕನ ಪ್ರತಿಲೆಂಕನ ಭೇದ ವೇತಕೆ ನಿನ್ನ ದಾಸ ನಾನು
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದ
(ಸ-೧೪೫-೩)
- ಭೇದದಿ ವಿಶ್ವವ ಗೆಲಿದವನೆ ಬಾಡದಾದಿಕೇಶವ ನಮಗೊಲಿದವನೆ
- ರಾಮ ಗೋವಿಂದ ಹರೆ (ಬೆ-೪೦-೩)
- ಕವುರವ ಪಾಂಡವರೊಳು ಭೇದವನಿಕ್ಕಿ ಘವುಜೊಡ್ಡಿ ಕುರುಕ್ಷೇತ್ರದಲಿ ಕಾದುತ
- ಬಂದಿದೆ ದೂರು ಬರಿದೆ (ಬೆ-೮೬-೭)
- ಭೇದವಿಲ್ಲದೆ ಸಕಲ ಜೀವರನು ಪೊತ್ತಿಹಳು ಭೂದೇವಿಯೆಂಬಾಕೆ ನಿನ್ನ ಅರ್ಧಾಂಗಿಯು
- ಜಗದಂತರ್ಯಾಮಿ ಎಂತೆಂದು
(ಬೆ-೫೮-೧)
- ಮೂಲಕವತಾರಕ್ಕೆ ಭೇದವು ಮುಖ್ಯ ಶೀಲ ಪಂಡಿತರೊಳಗೆ ಅತಿ ವಾದವು
- ಅಂಧಂತಮಸು ಇನ್ನಾರಿಗೆ
(ಬೆ-೮೯-೨)
- ಎನ್ನ ಭೇದಮಾಡಿ ನೋಡದಿರು ಅಧೋಕ್ಷಜಾ
- ಈಶ ನಿನ್ನ ಚರಣ ಭಜನೆ (ಬೆ-೬೫-೧೭)
- ಭಿನ್ನಭೇದಗಳೆಂಬ ಬಲು ಸಂಶಯ ಕಳೆದು ತನ್ನೊಳಗೆ ತಾ ತಿಳಿದು ತಾರಕಬ್ರಹ್ಮವ
- ಆರಿಗಳವಲ್ಲಾತ್ಮ ಯೋಗಸಿದ್ಧಿ
(ಬೆ-೧೨೬-೨)

೩೨೮೭. ಭೇದವಾದಿ - ಹಾದಿಯನು ಕಾಣ ದಂತಿರುತಿರ್ದ ಹಲವೆಂಟು ವಾದ ತರ್ಕ ದೊಳಿದ್ದ ಭೇದವಾದಿಗಳು
- ಜಪವ ಮಾಡಿದರೇನು (ಬೆ-೧೨೩-೧)

೩೨೮೮. ಭೇದಿಸು - ಭೇದಿಸಿ ನೋಡುವವ ರುಂಟು ಬೆಂಬತ್ತಿ ಬಾರದಿರಯ್ಯ
- ಬೀದಿಯೊಳು ಯಾತರಾ ನಂಟು ಬೇಡ
(ಸ-೧೮೫-೮)
- ಆದಿಕುಂಭ ಕಾಣದನಕ ಅಲ್ಲಿ ಸಾಧಿಸಿ ಭೇದಿಸಿ ಸವಿಯುಣ್ಣದನಕ
- ಸದರವಲ್ಲವೊ ನಿಜಯೋಗ
(ಸ-೨೪೩-೩)

೩೨೮೯. ಭೇರಿ - ಅಂತರ್ಯದ ಸಂತತ ಭೇರಿ ಶಬ್ದವ ಕೇಳಿ ಅಂತರಾತ್ಮ ಲಿಂಗವ ಪೂಜಿಪರ ತೋರು
- ನಿಜವರಿತು ಲಿಂಗವನು ಪೂಜೆ ಮಾಡುವರು
(ಸ-೧೪೨-೪)
- ಸ್ವಾರಿ ಹೊರಟರೆ ಛತ್ರ ಭೇರಿಯು ನಗಾರಿಗಳು ಭೋರೆಂಬ ಪೊಂಗಹಳೆ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೫)

೩೨೯೦. ಭೈರವ - ಧಾರಿಣಿ ಹಲ್ಲಲಿ ಎಳೆಯುತಿದೆ ದೊಡ್ಡ ಭೈರವಾಕಾರದಿ ಕೂಗುತಿದೆ
- ಮಗುವಿನ ಮರುಳದು ಬಿಡದಲ್ಲ
(ಸ-೧೯೮-೧)
- ಮಿಕ್ಕ ಮಾರಿ ಮಸಣಿ ಚೌಡಿ ಭೈರವದೇವ
- ಕಣಿಯ ಹೇಳಬಂದೆ ನಾನು (ಬೆ-೭೨-೧)
- ವೀರ ಭೈರವನಂತೆ ತಾನು ಬತ್ತಲೆಯಂತೆ
- ಆರಿಗಾದರು ಪೂರ್ವಕರ್ಮಬಿಡದು
(ಬೆ-೧೦೮-೧)

೩೨೯೧. ಭೋ - ಭವ ಭಯ ವಿನಾಶ ಭೋ ಭಕ್ತವಿಲಾಸ ಭೋ ಪಾಪವಿನಾಶ ಭೋ ಬಾಡದ ರಂಗೇಶ ಭೋ
- ಭವಭಯವಿನಾಶ ಭೋ (ಬೆ-೪೧-ಪ)

೩೨೯೨. ಭೋಗ - ಇಹದ ಭೋಗ ನಿತ್ಯವೆಂದು ಮೆರೆದೆ ನಿನ್ನ ನೆನೆಯದೆ
- ಅಹಹ ಮೋಸಹೋದೆನಯ್ಯ
(ಸ-೯-೮)
- ಸರಸವಿಲ್ಲದ ಸತಿಯ ಭೋಗ ತನುರೋಗ
- ಎನ್ನ ನುಡಿ ಪುಸಿಯಲ್ಲ (ಸ-೪೭-೧)
- ನೀತಿಯ ತಪ್ಪಿ ನೀನಿರುವೆ ಭೂತಳ ಭೋಗ ಸ್ಥಿರವೆ
- ಹಿಂಗದೆ ಮನದಣಿಯ ರಂಗನ ಭಜಿಸೊ

(ಸ–೨೫೯–೧)
– ಮಡದಿಯರ ಭೋಗಕ್ಕೆ ಸುರಪತಿಯೊ ನೀನು
– ಬೆರೆಯದಿರು ಬೆರೆಯದಿರು
(ಬೆ–೧೪೩–೨)
– ತ್ಯಾಗದಲಿ ಕರ್ಣನೋ ಭೋಗದಲಿ ಸುರಪನೋ
– ಮೆರೆಯದಿರು ಮೆರೆಯದಿರು (ಬೆ–೧೪೮–೩)
**೩೨೯೩. ಭೋಗಿ** – ಅನ್ನ ವಸ್ತ್ರ ಭೋಗಿಯಾಗಿ ತನ್ನ ಸುಖವ ಕಾಣಲಿಲ್ಲ
– ಡಿಂಬಿನೊಳು ಪ್ರಾಣವಿರಲು
(ಬೆ–೧೧೭–೨)
**೩೨೯೪. ಭೋಗಿಭೂಷಣ** (ಶಿವ) – ನಾಗ ಶಯನನ ಮೂರುತಿ ಕಂಡೆ ಭೋಗಿಭೂಷಣ ಶಿವನನು ಕಂಡೆ
– ಇಷ್ಟು ದಿನ ಈ ವೈಕುಂಠ (ಬೆ–೨೮–೫)
– ಭೋಗಿಶಯನನು ಆಗಿ ಭೋಗಿಭೂಷಣ ನಾಗಿ ವಾಗೀಶನಾಗಿ ಸ್ಥಿತಿಲಯಗಳಿಂಗೆ
– ಆರು ಬಲ್ಲರು ಹರಿಹರರ (ಬೆ–೮೨–೩)
**೩೨೯೫. ಭೋಗಿಶಯನ/ಭೋಗೀಶಯನ** (ವಿಷ್ಣು) – ಭೋಗಿಶಯನನ ಪಾದ ರಾಗದಿ ಭಜಿಸದೆ ಕಾಗೆನೆಲೆಯಾದಿಕೇಶವನ ದಾಸ ನೀನು
– ಹೇಗೆ ನೀ ದಾಸನಾದೆ (ಬೆ–೨೨–೨೧)
– ಭೋಗಿಶಯನನು ಆಗಿ ಭೋಗಿಭೂಷಣ ನಾಗಿ ವಾಗೀಶನಾಗಿ ಸ್ಥಿತಿಲಯಗಳಿಂಗೆ
– ಆರು ಬಲ್ಲರು ಹರಿಹರರ (ಬೆ–೮೨–೩)
– ಭೋಗೀಶಯನ ಶ್ರೀ ಲಕ್ಷ್ಮೀಕಾಂತನೆ ಭಾಗವತಪ್ರಿಯ
– ನಾ ನಿಮ್ಮ ದಾಸರ ದಾಸ (ಸ–೧೩೪–೫)
**೩೨೯೬. ಭೋಗಿಸು** – ಪುಂಡರಾ ಪಾಂಡು ನಂದನರು ಮತ್ತದರೊಳು ಕಂಡೋರ್ವಳೈವರು ಭೋಗಿಪರು
– ನಡತೆ ಹೀನನಾದರೇನಯ್ಯ
(ಸ–೧೨೭–೧)
– ಭೋಗಿಸದೆ ಇಹಪರಕೆ ಗಳಿಸಿದರ್ಥ ಅಪಾರ್ಥ
– ಎನ್ನ ನುಡಿ ಪುಸಿಯಲ್ಲ (ಸ–೪೭–೩)
– ಆಯಾಸಪಟ್ಟು ಗಳಿಸಿದರ್ಥ ಹೇಯವೆನದೆ ಭೋಗಿಸುತ್ತ
– ಎಷ್ಟು ಪ್ರೀತಿಯೊ ಮನಕೆ (ಸ–೫೨–೪)
**೩೨೯೭. ಭೋಗೀಶ** (ವಾಸುಕಿ) – ಸಾಗರ ಶಯನನ ಭೋಗೀಶನ ಮೇಲೆ ಯೋಗನಿದ್ರೆ ಯೊಳಿಪ್ಪ ದೇವನನು
– ಮಗನೆಂದಾಡಿಸು ವಳು ಮೊಗನೋಡಿ ನಗುವಳು (ಸ–೧೯೫–೬)
**೩೨೯೮. ಭೋಜ** – ಭೋಜ ವರಭೃಗು ಕಪಿಲ ಮಾರಹರ ಗೌತಮಜಾನುಜ ಋಷಿ ಕೌಶಿಕ ವಸಿಷ್ಠ
– ತಂಗದಿರನನಿಮಿಷ ತಾರಕೆಗಳು
(ಬೆ–೧೬೯–೬)
**೩೨೯೯. ಭೋಜನ** – ಪೆಣನ ಭೋಜನ ಮಾಡಿದವರ ವಾಸವ ಪೊಕ್ಕನ ಶ್ರೀರಾಮನೆನ್ನಿರಿ
– ಶ್ರೀರಾಮನೆನ್ನಿರಿ ಮೂಜಗದವರೆಲ್ಲ
(ಬೆ–೮೧–೩)
– ಈ ಪರಿಯಲುಂಬಂಥ ಅಳಿಯ ಭೋಜನ ದಿಂದ ಗೋಪಾಳ ಲೇಸು ಅಭಿಮಾನಿಗಳಿಗೆ
– ಮಾವನ ಮನೆಯೊಳಗೆ (ಬೆ–೧೪೬–೫)
– ಶಿವನ ಭೋಜನದವನ ಸುತನಿಗೆ ಶಿವನ ಪ್ರತಿಪಾಲನೆಂಬ
– ಭವಭಯವಿನಾಶ ಭೋ (ಬೆ–೪೧–೨)
**೩೩೦೦. ಭೋಜ್ಯ** – ಸ್ವಾದು ಕಲ್ಪಿತವಾದ ಭಕ್ಷ್ಯ ಭೋಜ್ಯಗಳನು ಆದರದಿಂದಮೃತವನುಣಲು ನಾನೊಲ್ಲೆ
– ದೇಶಾಧಿಪತಿ ನರಹರಿಯೆ (ಬೆ–೨೧–೩)
**೩೩೦೧. ಭೋರ್** – ಸ್ವಾರಿ ಹೊರಟರೆ ಛತ್ರ ಭೇರಿಯು ನಗಾರಿಗಳು ಭೋರೆಂಬ ಪೊಂಗಹಳೆ ಹರಿಯೆ
– ಹರಿ ನಿನ್ನ ಪರಮಾರ್ಥ (ಬೆ–೧೭೩–೫)
**೩೩೦೨. ಭೋರಿಡು** – ಎರಡು ನಂದಿಯ ಹೂಡಿ ಗರುಡವಾಹನನಾಗಿ ಬರುತ ಭೋರಿಡುತಿದೆ ಅರಿಗೆ ಮೀರಿ
– ಬೀಜ ಮೂರನು ಬಿತ್ತಿ (ಬೆ–೧೬೨–೩)
**೩೩೦೩. ಭೋರ್ಗುಡಿಸು** – ಕ್ರೂರವಾದ ಫಣಿಪಬಾಣ ಭೋರ್ಗುಡಿಸುತಿರಲು ಜಗಕೆ
– ಈತನೀಗ ವಾಸುದೇವನು (ಬೆ–೭೫–೨)
**೩೩೦೪. ಭ್ರಮರ** – ಅಭ್ರದಲಿ ಚೀರ್ವ ಭ್ರಮರಾಳಿ ಎರಗೆ

– ಮೂಸರನ ಜನಕನೇ (ಬೆ–೧೬೮–೧)
– ಗಿಳಿ ನವಿಲು ಕೋಗಿಲೆ ವಸಂತ ಭ್ರಮರಂಗಳ ಬಲದೊಡನೆ ಮದನ ಮಾರ್ಗವ ಕಟ್ಟಲು
– ಪಥ ನಡೆಯದಯ್ಯ (ಬೆ–೯_೧)
೩೩೦೫. **ಭ್ರಮಿತ** (ಭ್ರಾಂತನಾದವನು) – ಮಂಡುಕನಂದದಿ ಕೆರೆಯ ದಂಡೆಯಲ್ಲಿ ಕುಳಿತುಕೊಂಡು ಮಂಡೆ ಮುಸುಕನಿಟ್ಟು ಮೂಗ ಹಿಡಿವ ಭ್ರಮಿತ ನಾನಯ್ಯ
– ಎಳ್ಳು ಕಾಳನಷ್ಟು ಭಕ್ತಿ (ಬೆ–೧೨–೧)
– ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರ ಕೂಡಿ ಆಣಿಮುತ್ತ ಹಿಡಿದು ಹಿಡಿದು ಬಿಡುವ ಭ್ರಮಿತ ನಾನಯ್ಯ
– ಎಳ್ಳು ಕಾಳನಷ್ಟು ಭಕ್ತಿ (ಬೆ–೧೨–೨)
೩೩೦೬. **ಭ್ರಮಿಸು** – ಮಡದಿ ಮಕ್ಕಳು ಎಂಬ ಮಾಯಾ ಸಂಸಾರಕ್ಕೆ ಸಡಗರವಗೊಂಡು ಬರಿದೆ ಭ್ರಮಿಸಲೇಕೆ
– ಈ ಸಿರಿಯ ನಂಬಿ ಹಿಗ್ಗಲು ಬೇಡ (ಸ–೪೦–೨)
– ಮಾಂಸವಿಕಾರವಾದ ಕುಚವ ಕನಕ ಕಲಶಸಾರವೆಂದು ನರಕರೂಪಿನ ನಾರಿಯರಿಗೆ ಭ್ರಮಿಸಿ ಬಾಳ್ವುದು
– ಎಷ್ಟು ಪ್ರೀತಿಯೊ ಮನಕೆ (ಸ–೫೨–೨)
– ಭ್ರಮಿಸಿ ಕಂಬದೊಳು ಉದ್ಭವಿಸಿದೆ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೧)
– ಶತಮುಖವ ಮಾಡಿ ಸುರಸಭೆಗೈದಿ ನಹುಷ ತಾ ಅತಿಶಯದಿ ಶಚಿಗೆ ಮನಸೋತು ಭ್ರಮಿಸಿ
– ನೋಡಿ ಮರುಳಾಗದಿರು (ಬೆ–೧೨೭–೧)
೩೩೦೭. **ಭ್ರಮೆ** – ಭ್ರಮೆಯಿಂದ ಮನವೆ ನಿನಗೆ ಬಯಲಾಸೆಯೇಕೊ
– ಒಲ್ಲೆನೆಂದರಾಗುವುದೆ (ಬೆ–೧೧೦–೧)
– ಬಂದು ಬಂದು ಭ್ರಮಗೊಂಡು ಮಾಯಾ ಮೋಹಕೆ ಸಿಕ್ಕಿ ನೊಂದು ಬೆಂದು ಒಂದರಿಂದ ಉಳಿಯಲಿಲ್ಲ ಬಂಧ ಕಳೆಯಲಿಲ್ಲ
– ದಾಸನಾಗೋ ಭವಪಾಶ ನೀಗೋ (ಬೆ–೨೦–೪)
– ಈಷಣತ್ರಯವ ಬಯಲಾಸೆಯಲಿ ಭ್ರಮೆಗೊಂಡು ಬೇಸರದಿ ಮನದಿ ನೊಂದು
– ನೀನುಪೇಕ್ಷೆಯ ಮಾಡೆ (ಬೆ–೪೯–೩)
೩೩೦೮. **ಭ್ರಷ್ಟ** – ಸೃಷ್ಟಿಯೊಳು ಕಾಗಿನೆಲೆಯಾದಿ ಕೇಶವನಂಘ್ರಿ ಮುಟ್ಟು ಮನದಲಿ ಭಜಿಸೊ ಭ್ರಷ್ಟಜೀವನವೆ
– ಈ ಸಿರಿಯ ನಂಬಿ ಹಿಗ್ಗಲು ಬೇಡ (ಸ–೪೦–೩)
– ಇಷ್ಟರೊಳಗೆ ಒಂದು ವಿವರವರಿಯದಿಂಥ ಭ್ರಷ್ಟಗೆ ನನಗಿನ್ಯಾತರ ಕುಲವಯ್ಯ
– ಯಾತರವನೆಂದುಸುರಲಿ (ಸ–೨೧೮–೧)
– ಕಷ್ಟಪಟ್ಟರೂ ಇಲ್ಲ ಕಳವಳಿಸಿದರಿಲ್ಲ ಭ್ರಷ್ಟಮಾನವ ಹಣೆಯಬರೆಹವಲ್ಲದೆ ಇಲ್ಲ
– ಕಷ್ಟಪಟ್ಟರೂ ಇಲ್ಲ (ಬೆ–೧೧೧–ಪ)
– ಅತಿ ಭಕುತರಿಗೆ ಮೆಚ್ಚಿ ಗತಿಮೋಕ್ಷವಿತ್ತನು ಮತಿಭ್ರಷ್ಟ ಅಜಮಿಳನ ಉದ್ಧಾರಮಾಡಿದ
– ನಂಬು ನಾರಾಯಣನ (ಬೆ–೫೩–೩)
– ಭ್ರಷ್ಟನೆನಿಸಬೇಡ ಕೃಷ್ಣ ಇಷ್ಟುಮಾತ್ರ ಬೇಡಿಕೊಂಬೆ
– ಈಶ ನಿನ್ನ ಚರಣ ಭಜನೆ (ಬೆ–೬೫–೪)
– ಇಷ್ಟರೊಳಗೆ ಒಂದು ವಿವರವನರಿಯದ ಭ್ರಷ್ಟಗೆ ನನಗೆ ಇನ್ನೇತರ ಕುಲವೊ
– ಏತರವನೆಂದು ಪೇಳಲಿ (ಬೆ–೧೨೨–೧)
೩೩೦೯. **ಭ್ರಷ್ಟನಾಗು** – ದುಷ್ಟಸಂಗವನ್ನು ಮಾಡಿ ಭ್ರಷ್ಟನಾಗಬೇಡ ಮನವೆ
– ಸಾರಿ ದೂರಿ ಹೇಳುತೇನೆ (ಸ–೨೪೮–೨)
– ಹುಟ್ಟಿದ ಮೊದಲುಗೊಂಡು ಇಂದು ಪರಿಯಂತರವು ಭ್ರಷ್ಟನಾಗಿ ಪರರ ಸೇವೆಯಿಂದಿರುತಿಹೆನು
– ಎಂತಹುದೊ ನಿನ್ನಯ ಭಕುತಿ (ಸ–೪೧–೩)
೩೩೧೦. **ಭ್ರಾಂತ** – ಮಾಗಿಯಲಿ ಸತಿಯ ನಗಲಿದ ಕಾಂತನವ ಭ್ರಾಂತ
– ಎನ್ನ ನುಡಿ ಪುಸಿಯಲ್ಲ (ಸ–೪೭–೩)
– ಇಂಥಿಂಥವರಿಗೆಲ್ಲ ಈ ಪಾಟವಿರಲಾಗಿ ಭ್ರಾಂತ ಮನುಜರಿಗೆ ಪೇಳಲಿನ್ನೆಷ್ಟು
– ಆರು ಸಮಯಕ್ಕೊದಗಲಿಲ್ಲ (ಬೆ–೩೨–೫)
– ಮಿಕ್ಕ ನರರ ಪಾಡಿದೇನು ನೀವು ಬರಿದೆ ಭ್ರಾಂತರಾಗಬೇಡಿರೊ

– ನಂಬಬೇಡಿ ಸಿರಿಯು ತನ್ನದೆ (ಬೆ–೧೧೫–)

೩೩೧೧. **ಭ್ರಾಂತಿ** – ಸುತ್ತ ಕತ್ತಲೆ ಚಿಂತೆ ಮತ್ತೆ ಭಯದ ಭ್ರಾಂತಿ ಚಿತ್ತಜನಯ್ಯ ದೊರಕುವ ಬಗೆಯೆಂತು
– ಹೇಗೆ ನೀ ದಾಸನಾದೆ (ಬೆ–೨೨–೧೭)

೩೩೧೨. **ಭ್ರಾತ** (ಸಹೋದರ) – ನಿಂದಳುತ ಜ್ಯೇಷ್ಠರು ಕನಿಷ್ಠ ಭ್ರಾತರು ಪುತ್ರ ಬಂಧು ಮಿತ್ರರು
– ಅಣುಮಹತ್ತಾದ ದೇವ (ಬೆ–೭೧–೨)

## ಮ

೩೩೧೩. **ಮಂಕು** – ಪಂಕಜನ ತಾಯಿ ಸುತನ ಅಂಕದಲ್ಲಿ ಹುಟ್ಟಿ ಜಗವ ಮಂಕು ಮಾಡುತಿಪ್ಪ ಮಾಯೆ ಹತ್ತು ಶಂಕೆಯ
– ಎರಡು ಸಾವಿರದ ಜಿಹ್ವೆಯುರಗ (ಸ–೪೮–೫)
– ಪಂಕಜನಾಭನ ಮನೆಯ ಮಂಕುದಾಸನಯ್ಯ
– ದಾಸ ದಾಸರ ಮನೆಯ ದಾಸ (ಬೆ–೨೩–೨)
– ಪಂಕಜಾಕ್ಷ ನೀನು ಎನ್ನ ಮಂಕುಬುದ್ಧಿ ಬಿಡಿಸಿ
– ಈಶ ನಿನ್ನ ಚರಣ ಭಜನೆ (ಬೆ–೬೫–೧೨)
– ಏನಿದೆತ್ತಣ ಬಯಕೆ ಎಲೊ ಮಂಕುಜೀವ ನೀನು ಅರಿತರೆ ಪೇಳು ನಿಜವನೆನಗೆ
– ಏನಿದೆತ್ತಣ ಬಯಕೆ (ಬೆ–೧೩೬–ಪ)

೩೩೧೪. **ಮಂಗ** – ಹೇಗೆ ನೀ ದಾಸನಾದೆ ಹೀಗೆ ಸಂಸಾರದೊಳು ಮಂಗನಂತೆ ಭವ ಭಂಗವ ಪಡುವವ
– ಹೇಗೆ ನೀ ದಾಸನಾದೆ (ಬೆ–೨೨–ಅ)
– ಮಂಗಳ ಮಹಿಮನ ಅಂಘ್ರಿಯ ಕಾಣದ ಮಂಗಗೆ ಮುಕುತಿಯು ದೊರಕೀತೆ
– ಕೇಶವನೊಲುಮೆಯು ಆಗುವ ತನಕ (ಸ–೪೯–೬)

೩೩೧೫. **ಮಂಗಲ/ಮಂಗಳ** – ಮಂಗಲಂ ಜಯ ಮಂಗಲಂ
– ಮಂಗಲಂ ಜಯ ಮಂಗಲಂ (ಬೆ–೧೭೨–ಪ)
– ಜಯಮಂಗಲಂ ನಿತ್ಯ ಶುಭ ಮಂಗಲಂ
– ಜಯಮಂಗಲಂ ನಿತ್ಯ (ಬೆ–೧೭೧–ಪ)
– ನಾಗಿಣಿಯರಮರಲೋಕದ ನರ್ತಕಿಯರು ಬಾಗಿಲೊಳು ಮಂಗಳೋದಕವಿಡಿದು
– ತಂಗದಿರನನಿಮಿಷ ತಾರಕೆಗಳು (ಬೆ–೧೯೬–೭)
– ವಸುಧೆ ಈರಡಿಗಿಂಬ್ಬಾಗೆ ಮಂಗಳ ವಸುಧಿಪರನಳಿದಗೆ ಜಯ ಮಂಗಳ
– ಅಂಬುಜದಳಾಕ್ಷಗೆ ಮಂಗಳ (ಬೆ–೧೭೦–೨)
– ಮಂಗಳ ಮಹಿಮ ಭುಜಂಗಶಯನ ನಾರಿ ಭಂಗವ ಕಾಯ್ದವನ
– ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ–೯೫–೩)
– ಮಂಗಳಂ ಭಾರ್ಗವ ಶ್ರೀರಾಮ ಕೃಷ್ಣನಿಗೆ
– ವಾಸುದೇವಾಯ ನಮೋ (ಬೆ–೯೦–೧೫)
– ಅಂಗಳದೊಳಗಿಪ್ಪ ಮಂಗಳ ಮೂರ್ತಿ ಪಾದಂಗಳ ಹಿಂಗದೆ ಪೊಂಗಿ ಭಜಿಸದಲೆ
– ಹೇಗೆ ನೀ ದಾಸನಾದೆ (ಬೆ–೨೨–೧೩)
– ನೆಲವ ಕದ್ದಸುರನ ಗೆಲಿದಗೆ ಮಂಗಳ ಸುಲಭ ನರಸಿಂಹಗೆ ಶುಭ ಮಂಗಳ
– ಅಂಬುಜದಳಾಕ್ಷಗೆ ಮಂಗಳ (ಬೆ–೧೭೦–೧)
– ಪುರತ್ರಯ ವಧುಗಳ ಗೆಲಿದಗೆ ಮಂಗಳ ತುರಗವಾಹನನಿಗೆ ಜಯ ಮಂಗಳ
– ಅಂಬುಜದಳಾಕ್ಷಗೆ ಮಂಗಳ (ಬೆ–೧೭೦–೩)
– ಮಂಗಳ ಜನನಿಯ ಹಿಂಗದೆ ಕದ್ದು ಜಲಂಗಳೊಳಡಗಿಪ್ಪನ
– ಘುಲ್ಲವದನೆ ಕೇಳೆ ನಿಲ್ಲಲಾರೆ (ಬೆ–೯೫–೩)
– ಮಂಗಳಂ ಬುದ್ಧ ಕಲ್ಕಿಗೆ ಬ್ರಹ್ಮ ರುದ್ರೇಂದ್ರ ವಂದಿತಗೆ ಮಧುವೈರಿಗೆ
– ವಾಸುದೇವಾಯ ನಮೋ (ಬೆ–೯೦–೧೫)
– ಮಂಗಳಂ ಝುಷ ಕೂರ್ಮ ಕಿಟಿ ನರಹರಿಗೆ ವಟುಗೆ
– ವಾಸುದೇವಾಯ ನಮೋ (ಬೆ–೯೦–೧೫)
– ಮಂಗಳಂ ಕರಿವರದ ಕರುಣಾನಿಧಿ ಪರಮಾತ್ಮ
– ವಾಸುದೇವಾಯ ನಮೋ (ಬೆ–೯೦–೧೫)

- ಮಂಗಳಂ ಕಾಗೆನೆಲೆಯಾದಿಕೇಶವ ರಾಯ ಮಂಗಳಂ ಗಿರಿವಾಸನೆ
- ವಾಸುದೇವಾಯ ನಮೋ (ಬೆ-೯೦-೧೫)
- ಮಂಗಳಂ ತರಳೆಯಭಿಮಾನವನು ಕಾಯ್ದವನೆ
- ವಾಸುದೇವಾಯ ನಮೋ (ಬೆ-೯೦-೧೫)
- ವರಕಾಗೆನೆಲೆಯಾದಿಕೇಶವಗೆ ಮಂಗಳ ಸಿರಿ ಹರಿಗೀಗ ಶುಭ ಮಂಗಳ
- ಅಂಬುಜದಳಾಕ್ಷಗೆ ಮಂಗಳ (ಬೆ-೧೭೦-೩)
- ಅಂಬುಜದಳಾಕ್ಷಗೆ ಮಂಗಳ ಸರ್ವ ಜೀವ ರಕ್ಷಗೆ ಮಂಗಳ
- ಅಂಬುಜದಳಾಕ್ಷಗೆ ಮಂಗಳ (ಬೆ-೧೭೦-ಪ)
- ಜಲಧಿಯೊಳಾಮ್ನಾಯ ತಂದಗೆ ಮಂಗಳ ಕುಲಗಿರಿಯ ತಾಳ್ದಗೆ ಜಯ ಮಂಗಳ
- ಅಂಬುಜದಳಾಕ್ಷಗೆ ಮಂಗಳ (ಬೆ-೧೭೦-೧)
- ದಶಕಂಧರನನು ಗೆಲಿದಗೆ ಮಂಗಳ ಪಶುಗಳ ಕಾಯ್ದಗೆ ಶುಭ ಮಂಗಳ
- ಅಂಬುಜದಳಾಕ್ಷಗೆ ಮಂಗಳ (ಬೆ-೧೭೦-೨)
- ಮಂಗಳ ಮಹಿಮ ಭುಜಂಗಶಯನ ಕಾಳಿಂಗಮರ್ದನ ದೇವೋತ್ತುಂಗ
- ತಾಳಲ್ಲಲ್ಲಲ್ಲಯ್ಯೋ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೧೧)

೩೩೧೬. **ಮಂಗಳಾಂಗ/ಮಂಗಳಾತ್ಮ** - ದುರ್ಜನರ ಸಂಗ ನಾನೊಲ್ಲೆ ಮಂಗಳಾಂಗ
- ಸಜ್ಜನರ ಸಂಗದೊಳಗಿರಿಸೆನ್ನ (ಸ-೨೪೧-ಅ)
- ಮಂಗಳಾತ್ಮನಿರಲಿಕ್ಕೆ ಪರದೈವವೇಕೆ
- ಮರೆಯದಿರು ಮರೆಯದಿರು (ಬೆ-೩೬-೧)

೩೩೧೭. **ಮಂಚ** - ಹಾಸು ಮಂಚದ ಹಾಸಿಗೆಯಲಿ ತೋಷದಿಂದ ಬಾಚಿ ಸೆಳೆದು
- ಬಾಲಕನೆಂದೆತ್ತಿಕೊಂಡೆನೆ (ಸ-೧೮೩-೩)
- ಸುಪ್ಪತ್ತಿಗೆ ಮಂಚವಂದು ಹುಲ್ಲ ಹಾಸಿಗೆ ಯಿಂದು
- ಎನ್ನ ಕಂದ ಹಳ್ಳಿಯ ಹನುಮಾ (ಬೆ-೬_೧)
- ಉರಗನಂದದಿ ಮಂಚವಾಗುವನು ನಾನಲ್ಲ ಗರುಡನಂದದಿ ಬೆನ್ನಕೊಡುವನಲ್ಲ
- ಕಾಯೊ ಕರುಣಾಕರನೆ (ಬೆ-೫೯-೩)
- ಸರಳಮಂಚದ ಮೇಲೆ ಮಲಗಿ ಪ್ರಾಣವ ಬಿಟ್ಟು ಕುರುಪನ ಕೊಂದವ ಭೀಷ್ಮನೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೨)
- ಮರೆತು ಮಂಚದ ಮೇಲೆ ನಾ ಮಲಗಿರೆ ಹರಿವ ಹಾವನೆ ತಂದು
- ನೆರೆದು ಗೋಪಿಯರೆಲ್ಲರು (ಬೆ-೧೦೩-೭)
- ಜುಟ್ಟ ಬಿಚ್ಚಿ ಮಂಚದ ನುಲಿಗೆ ಬಿಗಿದು ಕಟ್ಟಿದ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೨)

೩೩೧೮. **ಮಂಜು** - ಗುಂಜಿಯ ದಂಡೆಯ ಕಲ್ಲಿಯ ಚೀಲದ ಮಂಜು ಮೈಯವ ಕಳ್ಳ ಕೋ ಎನ್ನಿರೊ
- **ಕೋ ಕೋ ಕೋ** ಎನ್ನಿರೊ (ಬೆ-೧೦೧-೨)

೩೩೧೯. **ಮಂಜುಳ** - ಅಂಜನೆಯ ವರಸೂನು ಆಶ್ರಿತ ಕಾಮಧೇನು ಮಂಜುಳ ಗಾನ ಗೀತ ಪರಮ ವಿಖ್ಯಾತ
- ಕದರಮಂಡಲಗಿಯ ಕರುಣಿ ಹನುಮ ರಾಯ (ಸ-೭೫-೧)

೩೩೨೦. **ಮಂಡಲ/ಮಂಡಳ** - ಮಂಡಲಕೆ ಹೊಸಪರಿಯು ಮನ್ಮಥನ ಠಾಣ್ಯವಿದು ಮಂಡೆಹೋಗುವುದನ್ನು ಅರಿಯದೀ ಕೊಂಪೆ
- ಎಂದಿದ್ದರೀ ಕೊಂಪೆ ಎನಗೆ ನಂಬಿಕೆ ಯಿರದು (ಬೆ-೧೦_೨)
- ಕಾದುವಾ ವೀರರಿಗೆ ಕಾಸುಕೊಡುವವರಿಲ್ಲ ಮೇದಿನಿಗೆ ಬೀಳ್ವ ಮಳೆ ಖಂಡಮಂಡಳವು
- ಕಲಿಯೇರಿ ಬಂತು (ಬೆ-೧೩೦-೯)
- ಮಂಡಲದೊಳಗೊಬ್ಬ ಜಾರಸ್ತ್ರೀಯಳು ತನ್ನ ಗಂಡನರಿಕೆಯಿಂದ ವ್ಯಭಿಚಾರಗೈಯೆ
- ಯಮದೂತರಿನ್ನೇನ ಮಾಡುವರು (ಬೆ-೪೪-೧)

೩೩೨೧. **ಮಂಡಲಪತಿ** (ನಗರ ಅಥವಾ

ವಿಭಾಗದ ಅಧ್ಯಕ್ಷ) - ದಿಂಡೆಯ ಮಾರ್ಗದಿ ಮಲತಾಯಿ ಮಗನ ಹೊಡೆಯಲು ಮಂಡಲ ಪತಿ ಏನ ಮಾಡುತಿರ್ದನು
- ಬಂಧುಗಳದಾರಿಗಾರಿದ್ದರೇನು (ಸ-೧೭೩-೨)
- ಮಂಡಲಪತಿಯು ಶೋಧಿಸಿ ಹಿಡಿದೆಳತಂದು ಭಂಡುಮಾಡಲು ಬೆದರುವಳೆ ಕೇಳೆಲೊ ಹರಿ
- ಯಮದೂತರಿನ್ನೇನ ಮಾಡುವರು (ಬೆ-೪೪-೧)

೩೩೨೨. **ಮಂಡುಕ** (ಕಪ್ಪೆ) - ಮಂಡುಕನಂದದಿ ಕೆರೆಯ ದಂಡೆಯಲ್ಲಿ ಕುಳಿತುಕೊಂಡು ಮಂಡೆ ಮುಸುಕನಿಟ್ಟು ಮೂಗ ಹಿಡಿವ ಭ್ರಮಿತ ನಾನಯ್ಯ
- ಎಳ್ಳು ಕಾಳನಷ್ಟು ಭಕ್ತಿ (ಬೆ-೧೨-೧)
- ಕಲ್ಲೊಳಗೆ ಪುಟ್ಟಿ ಕೂಗುವ ಮಂಡುಕಂಗಳಿಗೆ ಅಲ್ಲಿ ಹೋಗಿ ಆಹಾರವಿತ್ತವರದಾರು
- ತಲ್ಲಣಿಸದಿರು ಕಂಡೆಯಾ ತಾಳು ಮನವೆ (ಬೆ-೩೪-೩)

೩೩೨೩. **ಮಂಡೆ** (ತಲೆ) - ಮಂಡೆ ಬಾಚಿ ತುರುಬಿಟ್ಟಿವೆ ಮಸ್ತಕದಲ್ಲಿ
- ಸ್ಯೆಯೇ ಇದು ಸ್ಯೆಯೇ ಗೋಪಿ (ಬೆ-೧೦೪-೧೧)
- ಮಂಡೆತುಂಬ ಬಂಧು ಬಳಗ ಇಲ್ಲಿ ಇರುವರೊ
- ಏನು ಬರುವುದೋ ಸಂಗಡ (ಬೆ-೧೩೭-೧)
- ಮಂಡುಕನಂದದಿ ಕೆರೆಯ ದಂಡೆಯಲ್ಲಿ ಕುಳಿತುಕೊಂಡು ಮಂಡೆ ಮುಸುಕನಿಟ್ಟು ಮೂಗ ಹಿಡಿವ ಭ್ರಮಿತ ನಾನಯ್ಯ
- ಎಳ್ಳು ಕಾಳನಷ್ಟು ಭಕ್ತಿ (ಬೆ-೧೨-೧)
- ಗುಂಡುಮುಣುಗಿನ ಹಕ್ಕಿಯಂತೆ ಕಂಡ ಕಂಡ ನೀರ ಮುಳುಗಿ ಮಂಡೆ ಶೂಲೆಬಾಹುದ್ಯೆಸೆ ಗತಿಯ ಕಾಣೆನೊ
- ಎಳ್ಳು ಕಾಳನಷ್ಟು ಭಕ್ತಿ (ಬೆ-೧೨-೧)
- ಮಂಡಲಕೆ ಹೊಸಪರಿಯು ಮನ್ಮಥನ ಠಾಣ್ಯವಿದು ಮಂಡೆಹೋಗುವುದನ್ನು ಅರಿಯದೀ ಕೊಂಪೆ
- ಎಂದಿದ್ದರೀ ಕೊಂಪೆ ಎನಗೆ ನಂಬಿಕೆ ಯಿರದು (ಬೆ-೧೦-೨)
- ಉಂಡರೂ ದಣಿಯದು ಊರ ಸೇರದ ಪಕ್ಷಿ ಮಂಡೆಯ ಮೇಲೆರಡು ಕೋಡದಕೆ
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೩)
- ಮಂಡೆಯಲಿ ಕೊಂಡಾಂತು ಮ್ಯೆ ಜುಮ್ಮು ತಾಳಲು
- ಸಿಂಗರದ ಸಿರಿಧರನೆ (ಬೆ-೧೬೭-೩)
- ಬಿಟ್ಟ ಮಂಡೆಯಲ್ಲಿ ಪುರುಷ ಮ್ಯೆಮರೆದು ಮಲಗಿರುವುದ ಕಂಡು
- ಸ್ಯೆಯೇ ಇದು ಸ್ಯೆಯೇ ಗೋಪಿ (ಬೆ-೧೦೪-೨)
- ಮಂಡೆ ಬೋಳು ಮಾಡಿ ನಾಮದುಂಡೆಯನ್ನು ಬರೆದು ಕೆಡಿಸಿ
- ದಾಸಪಟ್ಟವೋ ಸನ್ಯಾಸಪಟ್ಟವೋ (ಸ-೧೧೮-೧)
- ಮುಕುಟ ಮಂಡೆಯಲಿ ಧ್ರುವಲೋಕ ಭುವನಾವಳಿಯು ನಿಖಿಲ ಶ್ರುತಿ ನವರತುನ ನಿಟಿಲದಲ್ಲಿ
- ವಿಶ್ವಲೋಕೇಶ ವಿಶ್ವಲೋಕೇಶ (ಸ-೨೩೪-೧)

೩೩೨೪. **ಮಂತ್ರ** - ಗುರುಮಂತ್ರ ಮೂಲ ಸದ್ಗುರುಮೂರ್ತಿ ನೀನಾಗಿ ಕರೆಯೆ ಸೇರಿಸಿದೆನ್ನ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೮)
- ತಿರುಮಂತ್ರವನು ಭಜಿಸು ತಿರುಲಾಂಛನವ ಧರಿಸು
- ನಾರಾಯಣೆನು ಮನವೆ (ಬೆ-೧೪೧-೧)

೩೩೨೫. **ಮಂತ್ರಿ** - ಮೂರುಲೋಕಕೆ ಗೌಡ ಸಂಗತಿ ಇಹರು ಮಂತ್ರಿ ಮೂರುಲೋಕದ ಜನರು ಭಜಿಸುತಿಹರು
- ನಾವು ಕುರುಬರು (ಬೆ-೧೫೨-೫)

೩೩೨೬. **ಮಂತ್ರಿಸು** - ತಿಂತ್ರಿಣಿ ಮರದಡಿ ಉರಗ ಕಚ್ಚಿ ಒರಗಿರಲು ಮಂತ್ರಿಸಿ ಮನೆಗೆ ಕಳುಹಿದ ಗರುಡಗಮನನೆ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೨)

೩೩೨೭. **ಮಂದ** - ಗಂಧಶಾಲ್ಯನ್ನ ಸದ್ವೃತ ತೋಯೆ ಪಳಿದ್ಯವ ಮಂದವಾದ ಅಳೆಯ ಸ್ವಾದು ಸೀಕರಣೆಗಳನು

– ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ–೧೧–೨)

೩೩೨೮. ಮಂದಗಾಮಿನಿ – ಎಂದಿಗಗಲದಾನಂದದಿಂದಲಿ ಹೊಂದುಗೂಡಿಸೆ ಮಂದಗಾಮಿನಿ

– ಇಂದು ನೀ ಕರೆದುತಾರೆ (ಬೆ–೯೨–೮)

೩೩೨೯. ಮಂದಮತಿ – ಹಿಂದೆ ಮಾಡಿದ ಧರ್ಮ ಕರ್ಮ ಬಲ್ಲವರಾರು ಎಂದು ಮಂದಮತಿಗಳಾಗಿ ಕೆಟ್ಟಳಿಯದಿರಿ

– ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ–೧೨೪–೫)

೩೩೩೦. ಮಂದರ/ಮಂದರಗಿರಿ/ಮಂದರಾಚಲ – ಅಮರ ದೈತ್ಯರು ಕೂಡಿ ಅಂಬುಧಿಯ ಕಡೆಯಲಿಕೆ ಕ್ರಮದಿ ಮಂದರಕೆ ಕಟ್ಟಿದ ಶೇಷನ

– ನೋಡಯ್ಯ ನಿನ್ನ ದಾಸರ (ಬೆ–೮೫–೨)

– ಮಂದರಗಿರಿಯನುಗುರಲೆತ್ತಿದವನ ಬೆಂದು ಹೋದಾವೆಂದ ಗೋವ ಕಾಯ್ದವನ

– ಕರೆತಾರೆ ಕಾಮಿನಿಕಮಲಜಪಿತನ (ಬೆ–೯೩–೫)

– ಸಿಂಧುಮಥನವ ಮಾಡೆ ಅಮರರೆಲ್ಲರು ಮಂದರಗಿರಿ ನೀರೊಳು ಮುಳುಗಲು

– ತಾಳಲ್ಲಲ್ಲಲ್ಲಯ್ಯೊ ಮಾಸಾಳಲ್ಲಲ್ಲಲ್ಲಯ್ಯೋ (ಸ–೧೧೦–೨)

– ತಿಳಿದು ಕೂರ್ಮರೂಪಾಗಿ ಮಂದರವನು ಪೊತ್ತು ಉಳಿಸಿದೆ ಲೋಕವನುನ್ನತ ಪರಾಕ್ರಮಿ

– ಯಾದವಗಿರಿವಾಸನಹುದೋ (ಸ–೨೧೯–೧)

– ಮತ್ಸ್ಯಾವತಾರದೊಳಾಡಿದನೆ ಮಂದರಾಚಲ ಬೆನ್ನೊಳಗಾಂತವನೆ

– ರಾಮ ಗೋವಿಂದ ಹರೆ (ಬೆ–೪೦–೧)

– ಮತ್ಸ್ಯಾವತಾರದೊಳಾಡಿದನೆ ಮಂದರಾಚಲ ಬೆನ್ನೊಳು ತಾಳಿದನೆ

– ಗೋವಿಂದ ಹರಿ ಗೋವಿಂದ (ಬೆ–೫೬–೧)

– ಮಂದರಧರ ಗೋವರ್ಧನಗಿರಿ ನಲವಿಂದ ನಿಂದು ನೆಗಹಿದನೆನುತ

– ಅರಸಿನಂತೆ ಬಂಟನೊ (ಬೆ–೫_೨)

೩೩೩೧. ಮಂದರಧರ/ಮಂದರೋದ್ಧರ – ಮಂದರಧರ ಪಾವನ ಇಂದಿರಾರಮಣನ ಗೋವಿಂದ ಎನ್ನಿರೋ

– ಮಂದರಧರ ಪಾವನ ಇಂದಿರಾರಮಣ (ಸ–೨೦೦–ಪ)

– ಮಂದರೋದ್ಧರ ಮಧುಸೂದನ ಮಾಧವ ಗೋವಿಂದ ರಕ್ಷಿಸು ಬಾಡದಾದಿಕೇಶವ ರಾಯ

– ಆ ವೇಳೆಯಲ್ಲಿ ಆರಾರ ಕಾಯ್ದೆಯೊ (ಬೆ–೬೬–೩)

೩೩೩೨. ಮಂದಾಕಿನಿ – ನಂದಗೋಪಕುಮಾರ ನವನೀತಚೋರ ಮಂದಾಕಿನೀಜನಕ ಮೋಹನಾಕಾರ

– ಲಾಲಿ ಪಾವನಚರಣ ಲಾಲಿ ಅಘಹರಣ (ಸ–೨೨೯–೩)

೩೩೩೩. ಮಂದಿ – ಖೋಡಿಮಾತುಗಳನ್ನು ಹೇಳಿ ಮಂದಿಯ ಕುಂಡೆ ಚಿವುಟುತಿದ್ದೆ

– ಛೀ ನಿನ್ನ ಮೋರೆ ಮೇಲೆ (ಸ–೧೦೦–೨)

೩೩೩೪. ಮಂದಿರ – ಮಂದಿರವದೆಲ್ಲಿ ತಾ ತಂದ ಸತಿಸುತರಾರು ಬಂದಂಥ ಸುಖದುಃಖ ವೇನು

– ಮುಂದೆ ದಯವಿರಲಿ ಶ್ರೀಹರಿಯೆ (ಸ–೨೧೪–೫)

– ಬಹು ಪ್ರಳಾಪಮಂ ಗೈವ ಸತಿ ಅಂದದಲ್ಲಿಹ ಮಂದಿರ

– ಅಣುಮಹತ್ತಾದ ದೇವ (ಬೆ–೭೧–೨)

– ಬರವಿದೇತಕೆ ನಿನ್ನ ಸ್ಥಳವೆಲ್ಲಿ ನೆಲೆಯಾಗಿ ಇರುವ ಮಂದಿರವಾವುದದನೆನಗೆ ಪೇಳೊ

– ಎಲ್ಲಿಂದ ಬಂದೆ ಮುಂದೆತ್ತ ಪಯಣ (ಬೆ–೧೩೫–೩)

– ಉರಿಯೊಳಗೆ ಜನಿಸಿದಂಗನೆಯ ನಿಜಸುತರು ಮಂದಿರದೊಳ್ಳೆವರು ನಿದ್ರೈಯ್ಯುತಿರಲು

– ನೀನಾವ ಬಾಂಧವನೊ (ಬೆ–೭೮–೯)

೩೩೩೫. ಮಂದೆ – ಮುಂದೊರೆದಿಹ ರೋಮ ಕೂಪದಗ್ರದಳತೆಯು ವೃಂದಗಳ ಶೋಭಿಪ ರೀತಿಯ ಪಡೆದೆಯೆಲೊ ಹರಿಯೆ

– ವಿಶ್ವಲೋಕೇಶ ವಿಶ್ವಲೋಕೇಶ (ಸ–೨೩೪–೨)

– ಮಂದೆಗಾಯ್ದವನ ಮನ್ಮಥನ ಪೆತ್ತವನ ತಂದೆ ಶ್ರೀ ಬಾಡದಾದಿಕೇಶವನ

- ದೇವಿ ನಮ್ಮ ದೇವರು ಬಂದರು (ಬೆ-೭೭-೭)
- ಅಂಬುಜಜನಯ್ಯನೆ ಬಾರೊ ಆದಿಮೂರುತಿ ರಂಗ
- ಬಾರೊ ನಮ್ಮ ಮನೆತನಕ (ಬೆ-೧೦೬-೩)
- ಅಮರವೈರಿಯ ಕರುಳ ಕಿತ್ತಿ ಕಡಿದಾ ಹತಿಯೊ ಕ್ಷಮೆಯನಳೆದಾ ಪಾದಕಮಲ ನೊಂದುವೊ ರಂಗ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೧)
- ರಂಗರೂಪವ ತೋರಿ ಭಂಗ ಭವಗಳನಳಿದು ಡಂಗುರವ ಹೊಯ್ಯೊ ನಿನ್ನ ಡಿಂಗರಿಗನೆಂದು
- ಹೂವ ತರುವರ ಮನೆಗೆ (ಬೆ-೪೩-೧)
- ಎಂಥ ಕೀರುತಿ ಪೊತ್ತುವೆರಡು ಪಾದ ಶ್ರೀಕಾಂತ ಬಾಡದ ರಂಗ ಕರುಣಿ ದೇವೋತ್ತುಂಗ
- ಎಂಥ ಕೀರುತಿ ಪೊತ್ತುವೆರಡು ಪಾದ (ಬೆ-೮೩-ಪ)
- ಹುಡುಗ ಹಾರುವನಾಗಿ ನಮ್ಮ ರಂಗ ಬೆಡಗಿಲಿ ಮುಗಿಲಿಗೆ ಬೆಳೆದಾನ್ವಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೫)

೩೭೭೮. **ರಂಗಧಾಮ/ರಂಗನಾಥ** - ನನ್ನನ್ನೀಗ ಉದ್ಧರಿಸು ರಂಗಧಾಮ
- ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ-೧೪೫-ಪ)
- ಏಕೆ ನೀನಿಲ್ಲಿ ಪವಡಿಸಿದೆ ಜಗದೇಕ ವಿಖ್ಯಾತ ಪಶ್ಚಿಮರಂಗಧಾಮ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-ಪ)
- ರಂಗನಾಥ ನಿನ್ನಂಘ್ರಿಗೆರಗುವೆನೊ ಅಂಗವನು ನಿನಗೆ ನಾ ಸಲಿಸುವೆನು
- ಹೂವ ತರುವರ ಮನೆಗೆ (ಬೆ-೪೩-೧)
- ರಂಗನಾಥನು ಇರಲಿಕ್ಕೆ ಜಂಗುಳಿ ದೈವಗಳೇಕೆ
- ಮರೆಯದಿರು ಮರೆಯದಿರು (ಬೆ-೩೬-೧)

೩೭೭೯. **ರಂಗವಲ್ಲಿ** - ಮುತ್ತಿನ ರಂಗವಲ್ಲಿಯ ನಿಟ್ಟು ಬರೆಯುವೆ
- ಬಂಟನಾಗಿ ಬಾಗಿಲ ಕಾಯ್ವೆ (ಬೆ-೪೫-೪)

೩೭೮೦. **ರಂಗಶಾಯಿ** - ದೃಷ್ಟಿಯಿಂದಲಿ ನಾನು ಕಂಡೆ ಸೃಷ್ಟೀಗೀಶನೆ ಶ್ರೀರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-ಪ)
- ನಿರ್ಜರಾದಿ ಮುನಿಗಳ ಕಂಡೆ ದುರ್ಜನಾಂತಕನೆ ಶ್ರೀರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-೩)
- ತುಂಟಕನೊಬ್ಬನ ತರೆದುದರಿಂದೆ ಬಂಟನಾಗಿ ಬಂದೆನೊ ರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-೧)
- ಅಂಬುಜೋದ್ಭವ ರುದ್ರರ ಕಂಡೆ ಶಂಬರಾರಿ ಪಿತನೆ ರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-೪)
- ಭಾಗವತರ ಸಮ್ಮೇಳವ ಕಂಡೆ ಕಾಗಿನೆಲೆ ಯಾದಿಕೇಶವ ರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-೫)
- ವನ ಉಪವನಗಳಿಂದ ಘನ ಸರೋವರ ಗಳಿಂದ ಕನಕ ಗೋಪುರಗಳಿಂದ ಶೋಭಿತನೆ ರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-೨)

೩೭೮೧. **ರಂಗು** - ರಾಗ ರಂಗು ಬಲು ಭಕ್ತಿ ಭಾವದೊಳು ಬೀಗಿ ಚೆನ್ನಕೇಶವನನು ನೆನೆಯದೆ
- ವ್ಯರ್ಥವಾಯಿತಲ್ಲ ಜನ್ಮ ಸಾರ್ಥಕಾಗಲಿಲ್ಲ (ಸ-೨೩೧-೩)

೩೭೮೨. **ರಂಗೇಶ** - ಭವ ಭಯ ವಿನಾಶ ಭೋ ಭಕ್ತವಿಲಾಸ ಭೋ ಪಾಪವಿನಾಶ ಭೋ ಬಾಡದ ರಂಗೇಶ ಭೋ
- ಭವಭಯವಿನಾಶ ಭೋ (ಬೆ-೪೧-ಪ)
- ಉನ್ನತದ ಕಾಗಿನೆಲೆಯಾದಿಕೇಶವ ರಾಯ ಚೆನ್ನ ಶ್ರೀರಂಗಪಟ್ಟಣದ ರಂಗೇಶ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೫)

೩೭೮೩. **ರಂಜಕ** - ರಂಜಕದ ಬೇರಿಗೆ ರಾಗ ಮೂವತ್ತೆರಡು
- ಬೀಜ ಮೂರನು ಬಿತ್ತಿ (ಬೆ-೧೬೨-೧)
- ರಂಜಕದ ಮೋಹಿನಿಯ ಗೆಲಿದ ರುಕುಮಾಂಗದನು ಧನಂಜಯನಾತ್ಮಸಂಭವನ ಸಂಜಾತ
- ತಂಗದಿರನನಿಮಿಷ ತಾರಕೆಗಳು (ಬೆ-೧೭೯-೩)
- ರಮಣಿಯರ ರಂಜಕದ ನುಡಿಯನು ಕೇಳಿ

ಪ್ರಣಮವೆಂದು ತೋಷಿಸುವ ಕರ್ಣೇಂದ್ರಿಯಕೆ
– ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ–೧೧೮–೪)

**೩೭೮೪. ರಂಜಣಿಗಿ** (ಕೊಪ್ಪರಿಗೆ) – ಒಡನೆ ಕರದಾರ ಕರಿತೈತಿ ರಂಜಣಿಗಿ ಹಾಲಣ್ಣ
– ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ–೭೧–೩)

**೩೭೮೫. ರಂಜಿಸು** – ಕುರುಭೂಮಿಯೆಂಬ ಪರಭೂಮಿಯಲಿ ರಂಜಿಸಲು
– ಬೊಂಬೆಯಾಟವನಾಡಿಸಿದ (ಬೆ–೭೯–೧)
– ರಂಜಿಪ ಕುಸುಮದ ಮಾಲೆ ತಂದಿಡುವೆ
– ಬಂಟನಾಗಿ ಬಾಗಿಲಕಾಯ್ವೆ (ಬೆ–೪೫–೩)
– ರಂಜಿಪ ಮಣಿಯ ಸಿಂಹಾಸನದ ಮೇಲಿಪ್ಪ ಕುಂಜರವರದಾದಿಕೇಶವ ತಾ ಬಲ್ಲ
– ಮರ ನುಂಗುವ ಪಕ್ಷಿ (ಬೆ–೧೬೧–೩)

**೩೭೮೬. ರಂಟೆ** (ನೇಗಿಲಿನಂತಹ ಉಪಕರಣ) – ಕುಂಟಿ ಕೂರಿಗೆಯಿಂದೆ ಹೆಂಟೆ ಮಣ್ಣ ಹದಮಾಡಿ ರಂಟೆಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
– ಎಲ್ಲರೂ ಮಾಡುವುದು ಹೊಟ್ಟೆಗಾಗಿ (ಬೆ–೧೩೪–೬)

**೩೭೮೭. ರಂಡೆಗಂಡ** (ಒಂದು ಬೈಗುಳ)– ಭಂಡ ಬಾಳು ಇದು ರಂಡೆಗಂಡ ಕಂಡ್ಯ ಯಮನ ಬಾಧೆ ತೊಣ್ಯ
– ಛೀ ನಿನ್ನ ಮೋರೆ ಮೇಲೆ (ಸ–೧೦೦–೨)

**೩೭೮೮. ರಂಭೆ** – ರಂಭೆ ಊರ್ವಶಿಯರ ಮೇಳವ ಕಂಡೆ ತುಂಬರು ಮುನಿ ನಾರದರನು ಕಂಡೆ
– ಇಷ್ಟು ದಿನ ಈ ವೈಕುಂಠ (ಬೆ–೨೮–೪)
– ಇಂಪು ಸೊಂಪಿನ ಚಂದ್ರಬಿಂಬೆ ಕೆಂಪು ತುಟಿ ನಾಸಿಕದ ರಂಭೆ
– ವರವ ಕೊಡು ಎನಗೆ ವಾಗ್ದೇವಿ (ಬೆ–೨–೨)
– ರಂಭೆಯರ ನೋಡಿ ಮೋಹಿಪನ ಸಂಗ
– ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ–೧೧೯–೨)

**೩೭೮೯. ರಕುತ/ರಕ್ತ** – ಕೂರಳ ಕೊಯ್ಯುವ ಕಂಡೆ ರಕುತವ ಕಾಣಲಿಲ್ಲ
– ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ–೭೧–೫)
– ರಕ್ತಕುಸುಮ ಗಂಧಮಾಲೆ ಕಸ್ತೂರಿಯನು ಪೂಸಿಕೊಂಡು
– ಎಷ್ಟು ಪ್ರೀತಿಯೊ ಮನಕೆ (ಸ–೫೨–೩)
– ಅಸ್ತಿ ಚರ್ಮ ರಕ್ತ ಮಾಂಸ ವಿಸ್ತರವಾದ ಹೇಯ
– ಎಷ್ಟು ಪ್ರೀತಿಯೊ ಮನಕೆ (ಸ–೫೨–೩)
– ತುಂಬಿದ್ದ ಕೀವು ಮಲ ಮೂತ್ರ ರಕ್ತದಿಂದ ಹೊರಳುವ ಸಂಭ್ರಮದೊಳಿದ್ದೆ ನಾ ವರದಾ
– ಮೊರೆಹೊಕ್ಕೆ ಹರಿ ನಿಮ್ಮ ಚರಣಕಮಲವ (ಸ–೨೧೩–೨)
– ಮೂತ್ರ ಮಲ ರಕ್ತ ಕೀವದ ಪ್ರಳಯದೊಡ ಲೆಂದು ವಿಸ್ತರಿಸಿ ತಿಳಿದಾತ ಪರಮ ಯೋಗಿ
– ತಾನಾರು ದೇಹವಾರು (ಬೆ–೧೪–೧)
– ಬಲಿದ ಚರ್ಮ ರಕ್ತ ಹೊತ್ತು ತಿರುಗುವ ಶುದ್ಧ ಹೊಲೆಯಗೆ ನನಗೆ ಇನ್ನೇತರ ಕುಲವೊ
– ಏತರವನೆಂದು ಪೇಳಲಿ (ಬೆ–೧೨೨–೪)

**೩೭೯೦. ರಕ್ಕಸ** – ತನ್ನ ಮುಂಗೋರೆಗಳ ಮಸೆದೊಡನೆ ರಕ್ಕಸನ ಬೆನ್ನಟ್ಟಿ ಬರಸೆಳೆದು ಸದೆದೊರಗಿಸಿ
– ನೋಡಯ್ಯ ನಿನ್ನ ದಾಸರ (ಬೆ–೮೫–೩)
– ಧೂಮಜ್ವಾಲೆಗಳೊಡನೆ ಭುಗಿಭುಗಿಲು ಛಿಟಿಲೆನುತ ಆ ಮಹಾ ರಕ್ಕಸನ ಪೊಡೆಯ ಸೀಳಿ
– ನೋಡಯ್ಯ ನಿನ್ನ ದಾಸರ (ಬೆ–೮೫–೪)
– ಚೇತನದ ರಾವಣೇಶ್ವರ ಕುಂಭಕರ್ಣ ಸತ್ತ್ವಾತಿಶಯ ರಕ್ಕಸರ ಇರಿದೊರಗಿಸಿ
– ನೋಡಯ್ಯ ನಿನ್ನ ದಾಸರ (ಬೆ–೮೫–೭)
– ಕದ್ದುಕೊಂಡೊಯ್ವ ರಕ್ಕಸರನೆಲ್ಲರ ಕಾಲ ಲೊದ್ದೊರಸಿದ ಕಳ್ಳ ಕೋ ಎನ್ನಿರೊ
– ಕೋ ಕೋ ಕೋ ಎನ್ನಿರೊ (ಬೆ–೧೦೧–೧)
– ಕೇಸರಿಯೆಂಬ ರಕ್ಕಸರನೆಲ್ಲರ ಕೊಂದ ವೇಷಧಾರಿ ಕಳ್ಳ ಕೋ ಎನ್ನಿರೊ
– ಕೋ ಕೋ ಕೋ ಎನ್ನಿರೊ (ಬೆ–೧೦೧–೩)
– ಮದವೆತ್ತ ರಕ್ಕಸರು ಮಹಿಯೊಳಗೆ ಹೆಚ್ಚಲು

ತ್ರಿದಶಾಂತ ನಡನಡನೆ ನಡುಗುತಿರಲು
- ನೋಡಯ್ಯ ನಿನ್ನ ದಾಸರ (ಬೆ-೮೫-೧೦)
- ಮಣ್ಣನಗಿದು ಬೇರ ಮೆದ್ದವನೆಂದೆನೆ ರಕ್ಕಸರೊಳು ಹೋರಾಡಿದವನೆಂದು ಹೊಗಳಿದೆ ನಲ್ಲದೆ
- ನಿನ್ನ ನಾನೇನೆಂದೆನೊ ರಂಗಯ್ಯ (ಬೆ-೯೧-೧)

೩೭೯೧. ರಕ್ತಕಾಳಿ - ಪುಸಿಯನಾಡುವ ಪುರುಷಗೆ ರಕ್ತಕಾಳಿ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೩)

೩೭೯೨. ರಕ್ಷ (ರಕ್ಷಿಸು) - ಪಕ್ಷಿವಾಹನ ವಿಷ್ಣು ಪಾಹಿ ಪರಮೇಶ ರಕ್ಷ ಕೌಸ್ತುಭಭೂಷ ವೈಕುಂಠವಾಸ
- ಲಾಲಿ ಪಾವನಚರಣ ಲಾಲಿ ಅಘಹರಣ (ಸ-೨೭೯-೪)

೩೭೯೩. ರಕ್ಷ /ರಕ್ಷಕ - ಅಂಬುಜದಳಾಕ್ಷಗೆ ಮಂಗಳ ಸರ್ವ ಜೀವ ರಕ್ಷಗೆ ಮಂಗಳ
- ಅಂಬುಜದಳಾಕ್ಷಗೆ ಮಂಗಳ (ಬೆ-೧೭೦-ಪ)
- ಮರಕತನಗರಿಯ ಬಾಡ ಬಂಕಾಪುರದರಸು ಭಕ್ತರಕ್ಷಕ ಆದಿಕೇಶವನ ಪಾದ
- ಎಂಥ ಕೀರುತಿ ಪೊತ್ತುವೆರಡು ಪಾದ (ಬೆ-೮೩-೩)
- ದ್ರುಪದನ ಮಗಳ ಅಭಿಮಾನ ರಕ್ಷಕನಾರು
- ಆತನ ಪಾಡುವೆ ಅನವರತ (ಬೆ-೭೦-೩)
- ನರಮೃಗಾಕಾರಿ ಹಿರಣ್ಯಕವೈರಿ ಕರಿರಾಜ ರಕ್ಷಕ ಕಾರುಣ್ಯಮೂರ್ತಿ
- ಲಾಲಿ ಪಾವನ ಚರಣ ಲಾಲಿ ಅಘಹರಣ (ಸ-೨೭೯-೫)
- ಸಾವಿರ ತೋಳವನ ಸರಸದಿಂದಲಿ ಕಡಿದ ಭುವನ ರಕ್ಷಕನಾದ ಮದ್ದಾನೆ
- ಆನೆ ಬರುತಾದೆ ನೋಡಮ್ಮ (ಸ-೧೫-೪)
- ಗರುಡವಾಹನವೇರಿ ಧಿಮಕೆಂದು ಬರುತಾನೆ ಸರುವ ಲೋಕ ರಕ್ಷಕನೆಂಬ ಮದ್ದಾನೆ
- ಆನೆ ಬರುತಾದೆ ನೋಡಮ್ಮ (ಸ-೧೫-೫)

೩೭೯೪. ರಕ್ಷಣ - ನರರಂಗಕೆ ಬಹುದು ರಕ್ಷಣ ಮಾಡುವ ಕಾಶಿಪೀತಾಂಬರ ಮಕರ ಕುಂಡಲಾಭರಣನ ನೆನೆ ಮನವೆ
- ಬೆರೆಯದಿರು ಬೆರೆಯದಿರು (ಬೆ-೧೪೪-೧)
- ರಕ್ಷಣವಮಾಡುವ ಕಾಶಿಪೀತಾಂಬರ ಮಕರಕುಂಡಲಾಭರಣನ ನೆನೆ ಮನವೆ
- ಬೇಕೆಂದರೆ ಬಾರದು (ಸ-೧೮೭-೧)

೩೭೯೫. ರಕ್ಷಿಸು - ಸಾಕಾರದಿಂದ ಸರ್ವರನು ರಕ್ಷಿಪನ ಜೋಕೆಯಲಿ ತನ್ನ ನೆನೆವರ ಪಾಲಿಪನ ಅನೇಕ ಮೂರುತಿ
- ನೆನೆಯಬಾರದೆ ಮನವೆ ಪರಮಪಾವನನ (ಸ-೧೫೨-೧)
- ಕುಕ್ಷಿಯೊಳು ಈರೇಳು ಜಗವನ್ನು ಸಲಹುವನ ರಕ್ಷಿಪರು ಉಂಟೆ ತ್ರೈಜಗದೊಳಗೆ
- ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ-೧೯೫-೪)
- ರಾಜಮುಖಿಯಳ ರಕ್ಷಿಸಿ ಮೃಗರಾಜಗೆ ಒಲಿದಾತಗೆ
- ಶರಣು ಶರಣು ದಶರಥರಾಮ ದೂತಗೆ (ಸ-೨೩೬-೨)
- ವರನಂದಿಯ ಚಂದದಿ ರಕ್ಷಿಸಿದೆ
- ಯಾದವಗಿರಿವಾಸನಹುದೋ (ಸ-೨೧೯-೩)
- ಕರಿ ಧ್ರುವ ಪ್ರಹ್ಲಾದ ವಿಭೀಷಣರ ರಕ್ಷಿಸಿದೆ ಪರಂದೇವಿ ವಲ್ಲಭನೆ ವರದಾ
- ಮೊರೆಹೊಕ್ಕೆ ಹರಿ ನಿಮ್ಮ ಚರಣಕಮಲವ (ಸ-೨೧೩-ಅ)
- ಒಲಿದು ರಕ್ಷಿಸು ನಾಗವೈರಿವಾಹನನೆ ನಳಿನಲೋಚನನೆ ನೀನೆನ್ನ ಬಿಡದೆ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೨)
- ಶೇಷಗಿರಿವಾಸ ರಂಗಯ್ಯ ಆದಿಕೇಶವನೆ ರಕ್ಷಿಸೊ ರಂಗಯ್ಯ
- ಯಾತಕೆ ದಯಮಾಡಲೊಲ್ಲೆ ರಂಗಯ್ಯ (ಸ-೨೧೭-ಗ)
- ಪರಮಾತ್ಮ ಪರಿಪೂರ್ಣ ಪುಂಡರೀಕಾಕ್ಷ ರಕ್ಷಿಸು ಎಂದು ಮೊರೆಯಿಟ್ಟಳಂಡಜತುರಂಗ

ಗಾಗ
- ವಾಸುದೇವಾಯ ನಮೋ (ಬೆ-೯೦-೧)
- ಮಾನವಮೃಗೇಂದ್ರ ರಾಮಚಂದ್ರ ರಕ್ಷಿಸಯ್ಯ
- ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-ಪ)
- ಮಂದರೋದ್ಧರ ಮಧುಸೂದನ ಮಾಧವ ಗೋವಿಂದ ರಕ್ಷಿಸು ಬಾಡದಾದಿಕೇಶವ ರಾಯ
- ಆ ವೇಳೆಯಲ್ಲ ಆರಾರ ಕಾಯ್ದೆಯೊ (ಬೆ-೬೬-೩)
- ದಕ್ಷಸುತೆಪತಿಸಖನೆ ಪಕ್ಷಿವಾಹನ ದೇವ ರಕ್ಷಿಸು ಅನಾಥಬಂಧು
- ವಾಸುದೇವಾಯ ನಮೋ (ಬೆ-೯೦-೭)
- ತಲ್ಲಣಿಸದಿರು ಕಂಡೆಯಾ ತಾಳು ಮನವೆ ನಿಲ್ಲದಲೆ ರಕ್ಷಿಸುವ ಸಂದೇಹ ಬೇಡ
- ತಲ್ಲಣಿಸದಿರು ಕಂಡೆಯಾ ತಾಳು ಮನವೆ (ಬೆ-೩೪-ಪ)
- ಪಡೆದ ಜನನಿಯಂತೆ ಸಾರಥಿಯಾಗಿ ತಾ ಬಿಡದೆ ರಕ್ಷಿಸುವನು ಇದಕೆ ಸಂದೇಹ ಬೇಡ
- ತಲ್ಲಣಿಸದಿರು ಕಂಡೆಯಾ ತಾಳು ಮನವೆ (ಬೆ-೩೪-೨)
- ಹುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ ಕೊಟ್ಟು ರಕ್ಷಿಸುವನು ಇದಕೆ ಸಂದೇಹ ಬೇಡ
- ತಲ್ಲಣಿಸದಿರು ಕಂಡೆಯಾ ತಾಳು ಮನವೆ (ಬೆ-೩೪-೧)
- ಜನನಿ ರಕ್ಷಿಸುವಳೆಂತೆಂಬೆನೇ ಆ ಕುಂತಿ ತನಯ ರಾಧೇಯನಿಗೆ ಎರಡನೆಣಿಸಿದ ಮೇಲೆ
- ಆರು ಹಿತವರು ಎಂದು ನಂಬಬೇಡ (ಬೆ-೩೩-೧)
- ಪೌಂಡ್ರಿಕನು ವಾಲ್ಮೀಕಿ ಭೃಗು ಕಶ್ಯಪ ವಸಿಷ್ಠ ಮುನಿ ನಿಕರವಿದೆ ರಕ್ಷಿಸುವುದೆನುತ
- ಪೂಸರನ ಜನಕನೇ (ಬೆ-೧೬೮-೪)
- ಕ್ಷೀರದೊಳಗದ್ದು ನೀರೊಳಗದ್ದು ನೀನೆ ಗತಿ ನಾರಾಯಣನೆ ರಕ್ಷಿಸೈ
- ವಾಸುದೇವಾಯ ನಮೋ (ಬೆ-೯೦-೫)
- ಬಲ್ಲಿದನು ಕಾಗಿನೆಲೆಯಾದಿಕೇಶವ ರಾಯ ನಿಲ್ಲದೇ ರಕ್ಷಿಪನು ಇದಕೆ ಸಂದೇಹ ಬೇಡ
- ತಲ್ಲಣಿಸದಿರು ಕಂಡೆಯಾ ತಾಳು ಮನವೆ (ಬೆ-೩೪-೩)
- ಬಡತನವು ಬಂದರೆ ಬಹಳ ರಕ್ಷಿಪುದು
- ಮರ ನುಂಗುವ ಪಕ್ಷಿ (ಬೆ-೧೬೧-೨)
- ಭೂಸುರಪ್ರಿಯಭಜಕ ಪೋಷಕನೆ ರಕ್ಷಿಪುದು ಕೇಶವನೃಸಿಂಹರೂಲಿದು
- ವಾಸುದೇವಾಯ ನಮೋ (ಬೆ-೯೦-ಪ)
- ಮಿಳಿತ ಮಾನಿಸ ಪಿಂಡ ಪೂರ್ವಕರ್ಮ ದಿಂದ ನೆಲಕೆ ಬೀಳಲು ಅದು ಸಲಹಿ ರಕ್ಷಿಪುದೆ
- ಮಗನಿಂದೆ ಗತಿಯುಂಟೆ (ಬೆ-೧೪೫-೨)
- ಆ ವಿಧದೊಳವರ ಸುರಲೋಕದೊಳು ನೆಲೆಗೊಳಿಸಿ ಭಾವ ಮೈದುನರೈವರನು ರಕ್ಷಿಸಿ
- ನೀನಾವ ಬಾಂಧವನೊ (ಬೆ-೭೮-೧೦)
- ಪೋದ ನಿಗಮಂಗಳನು ತಂದು ಸಲೆ ರಕ್ಷಿಸಿದೆ ಆದಿಮತ್ಸ್ಯವತಾರ ಶರಣೆಂಬೆನು
- ನೋಡಯ್ಯ ನಿನ್ನ ದಾಸರ (ಬೆ-೮೫-೧)
- ಸುಮತವನು ಬೆನ್ನಲ್ಲಿ ಸಲೆ ಆತು ರಕ್ಷಿಸಿದೆ ಕಮಠ ಮೂರುತಿ ನಿನಗೆ ಶರಣೆಂಬೆನು
- ನೋಡಯ್ಯ ನಿನ್ನ ದಾಸರ (ಬೆ-೮೫-೨)
- ಚೆನ್ನಾಗಿ ಧರಣಿಯನು ತಂದು ಸಲೆ ರಕ್ಷಿಸಿದ ಹನ್ನೆರಡು ಪೆಸರವನೆ ಶರಣೆಂಬೆನು
- ನೋಡಯ್ಯ ನಿನ್ನ ದಾಸರ (ಬೆ-೮೫-೩)
- ಅಸುರ ಬೆನ್ನಟ್ಟಿ ಬರೆ ಪಶುಪತಿಯ ರಕ್ಷಿಸಿದೆ
- ವಾಸುದೇವಾಯ ನಮೋ (ಬೆ-೯೦-೬)

೩೭೯೬. ರಕ್ಷೆ - ಪಕ್ಷಿವಾಹನ ನೀನು ಅಂಜ ಬೇಡ ಎನುತಲಿ ರಕ್ಷೆ ಇಡುವ ಪುಣ್ಯವನೆಂತು ಪಡೆದಳಯ್ಯ
- ಮಗನೆಂದಾಡಿಸುವಳು ಮೊಗನೋಡಿ ನಗುವಳು (ಸ-೧೯೫-೪)

೩೭೯೭. ರಗಡು (ಅತಿರೇಕ)- ಬುಗುಡಿಯ ಕೊಟ್ಟೇನೆಂದು ರಗಡು ಕಿವಿಹಿಂಡಿ ತಂದ
- ಎಂಥ ಟವಳಗಾರನಮ್ಮ (ಸ-೪೩-೬)

೩೭೯೮. ರಘುನಾಥ/ರಘುಪತಿ/ ರಘುಪುಂಗವ /ರಘುರಾಯ/ ರಘುವರ/ರಘುವೀರ - ಸೀತಾ ಪತಿ ರಘುನಾಥನೆಂಬಾತನು ಈತನೇನೆ ಸಖಿ ಈತನೇನೆ
- ಸೀತಾಪತಿ ರಘುನಾಥ (ಬೆ-೧೦೦-ಪ)
- ಮಾತು ಲಾಲಿಸಿ ವಿಭೀಷಣಗೆ ಪಟ್ಟವನಿತ್ತ ದಾತ ರಘುನಾಥನೇ ಶರಣೆಂಬೆನು

- ನೋಡಯ್ಯ ನಿನ್ನ ದಾಸರ (ಬೆ-೮೫-೭)
- ರಘುಪತಿ ಕೃಷ್ಣನೆ ಪೊಡವಿಪತಿ ವೈಕುಂಠ ವೆನಿಪ ಶೇಷಾದ್ರಿಯೊಳು ಸಡಗರದಿ
- ಪೂಸರನ ಜನಕನೇ (ಬೆ-೧೬೮-೫)
- ದೇವ ಜಾನಕಿರಮಣ ಪೇಳು ರಘುಪತಿಯೆ
- ಆವ ಸಿರಿಯಲಿ ನೀನು ಎನ್ನ ಮರೆತೆ (ಬೆ-೬೭-)
- ಮುರಹರ ರಾಮ ರಘುಪುಂಗವನ ನಾಮಂಗಳಂ ಬಿಡದೆ
- ಅಭ್ಯಾಸವನು ಮಾಡಬೇಕು (ಬೆ-೩೮-೨)
- ಮಾಯದೊಳು ಸಿಲುಕಿ ಬಲುಕಾಲದಿಂದ ಶ್ರೀ ರಘುರಾಯನೆಂಬ ವಸ್ತುವಿನ ಸ್ಮರಣೆ ಬಿಟ್ಟು ಭವದಿ ಮಮತೆ ಇಟ್ಟು
- ದಾಸನಾಗೋ ಭವಪಾಶ ನೀಗೋ (ಬೆ-೨೦-೩)
- ಧುರದೊಳಗೆ ರಘುವರನು ಶರದಿಂದ ಈರೈದು ಶರಗಳನೆ ಹೋಗಾಡಿಸಿದ ಪರಿಯ ನರಿತು
- ನೋಡಿ ಮರುಳಾಗದಿರು (ಬೆ-೧೨೭-೪)
- ಧೀರ ಕಾಗೆನೆಲೆಯಾದಿಕೇಶವ ರಘುವೀರನ ಕರೆದು ತೋರೆ
- ಏಣನಯನೆ ಏಣಭೋಜ ಮಧ್ಯಳೆ (ಬೆ-೯೯-೫)
- ಸ್ಥಿರವಾಗಿ ಹೇಳೆನಗೆ ಹೇಳು ರಘುಪತಿಯೆ
- ಆವ ಸಿರಿಯಲಿ ನೀನು ಎನ್ನ ಮರೆತೆ (ಬೆ-೬೭-೧)
- ತಾಯಿಯಪ್ಪಣೆಗೊಂಡು ಸೇವೆಗೆ ರಘುಪತಿ ರಾಯನಲ್ಲಿ ನಿಂದು
- ಎಷ್ಟು ಪೊಗಳಲಿ ನಾನು (ಸ-೫೩-೧)

೩೭೯೯. **ರಘುವಂಶ** - ಸಗರತನಯಾರ್ಚಿತ ಸನಕಾದಿ ವಿನುತ ರಘುವಂಶ ಕುಲತಿಲಕ ರಮಣೀಯಗಾತ್ರ
- ಲಾಲಿ ಪಾವನಚರಣ ಲಾಲಿ ಅಘಹರಣ (ಸ-೨೭೯-೨)

೩೮೦೦. **ರಚನೆ** - ಇಂತೆಸೆವ ಲೀಲಾ ವಿನೋದ ರಚನೆಯುಲಿ ಲೋಕಾಂತರಗಳೆಲ್ಲವನು ಸಂತೈಸುವ
- ಬೊಂಬೆಯಾಟವನಾಡಿಸಿದ (ಬೆ-೭೯-೫)
- ಕೆರೆ ಕಟ್ಟೆ ಪೂದೋಟಗಳ ರಚಿಸುವನೆ ದ್ರೋಹಿ
- ಸಹಜವಿದು ಈ ನುಡಿಯು (ಬೆ-೧೪೯-೩)

೩೮೦೧. **ರಚಿಸು** - ರಾಜಸೂಯವ ರಚಿಸ ಬೇಕೆಂದು ರಾಜರ ಸೀಳಿದಾತಗೆ
- ಶರಣು ಶರಣು ದಶರಥರಾಮದೂತಗೆ (ಸ-೨೩೬-೨)

೩೮೦೨. **ರಜ** (ಧೂಳು) - ಭುಜ ಚಕ್ರಧರ ಸಾತ್ತ್ವಿಕರ ಪಾದಾಂಬುಜ ರಜ ಭಜಕರ ಭಜಕ ನೆಂದೆನಿಸೆನ್ನ
- ದೇಶಾಧಿಪತಿ ನರಹರಿಯೆ (ಬೆ-೨೧-೧)
- ಚಿತ್ರದ ಚಾವಡಿರಜವನು ಬಳಿವೆ
- ಬಂಟನಾಗಿ ಬಾಗಿಲಕಾಯ್ವೆ (ಬೆ-೪೫-೪)

೩೮೦೩. **ರಜ/ರಜಸು** (ರಜೋಗುಣ) - ರಜ ತಮ ಗುಣ ಪ್ರವರ್ತಕ ಮೂಲಾಂತರದಿಂದ ಯಜಮಾನತನದ ಅಹಂಕಾರ ನಾನೊಲ್ಲೆ
- ದೇಶಾಧಿಪತಿ ನರಹರಿಯೆ (ಬೆ-೨೧-೧)
- ರಜಸು ತಾಮಸವೆಂಬ ರಯವನೆಲ್ಲವ ಕಳೆದು
- ಆರಿಗಳವಲ್ಲಾತ್ಮ ಯೋಗಸಿದ್ಧಿ (ಬೆ-೧೨೬-೧)

೩೮೦೪. **ರಜನಿ** - ಗಜಬಜಿಸುವ ಪಂಚಭೂತ ಗಳ ರಜನಿಗೆ ಸಿಲುಕದೆ
- ಆರಿಗಳವಲ್ಲಾತ್ಮ ಯೋಗಸಿದ್ಧಿ (ಬೆ-೧೨೬-೧)

೩೮೦೫. **ರಣ** - ಮೇರೆಯಿಲ್ಲದೆ ಅಸುರರ ಸಂಹರಿಸಿದ ರಣ ಶೂರಗೆ
- ಶರಣು ಶರಣು ದಶರಥರಾಮದೂತಗೆ (ಸ-೨೩೬-೧)
- ರಣದಲ್ಲಿ ತಲೆಹೊಯ್ದು ರುಂಡವು ಬೀಳಲು ಹೆಣನೆದ್ದು ಕುಣಿದಾಡಿತು
- ಮುತ್ತುಗಳ ಹಣ್ಣು ಕಾಯದ ಬಳಕ (ಸ-೨೦೯-೩)
- ಖಂಡಿಸಿದರು ರಣದೊಳು ಗುರುಹಿರಿಯರ ಪುಂಡರೀಕಾಕ್ಷನ ಒಲುಮೆಯೊಂದಲ್ಲದೆ
- ನಡತೆ ಹೀನನಾದರೇನಯ್ಯ (ಸ-೧೨೭-೧)
- ಕಟ್ಟಾಳು ಭೀಮಸೇನನು ರಣದಿ ಗದೆಯಿಂದೆ

ಕುಟ್ಟಿ ಬಿಸುಟಲಿ ನಿನ್ನ ತೊಡೆಗಳೆರಡನು
– ವಾಸುದೇವಾಯ ನಮೋ (ಬೆ–೯೦–೧೧)
– ಸಕಲ ಸೈನ್ಯ ಬಂಧುಬಳಗ ರಣದಿ ಮಡಿಯದೆ
– ನಂಬಬೇಡಿ ಸಿರಿಯು ತನ್ನದೆ (ಬೆ–೧೧೫–೨)
– ರಣದೊಳಗೆ ದೇಹವ ಖಂಡತುಂಡವ ಮಾಡಿ ರಣವನುತ್ತರಿಸಿ ಮರಣವ ತೋರಿದೆ
– ಸಾಲದೆ ನಿನದೊಂದು ದಿವ್ಯನಾಮ (ಬೆ–೧೭೪–೧)
– ಪಡೆಯನೆಲ್ಲವ ನಡುರಣದಲಿ ಸೋಲಿಸಿ ಜಡಿದು ಗೋವುಗಳನೆಲ್ಲ
– ಏಣನಯನೆ ಏಣಭೋಜಮಧ್ಯಳೆ (ಬೆ–೯೯–೩)
– ಶಪಥದಲಿ ರಣದೊಳರಸನ ಹಿಡಿವನೆಂದು ಬಲು ತಪಸಿಗಳ ಕಳುಹಿ ತತ್ತ್ವ ಬೋಧಿಸಿ
– ನೀನಾವ ಬಾಂಧವನೊ (ಬೆ–೭೮–೫)
– ರಣದೊಳು ಸುರೇಂದ್ರನೋ ಗುಣದಲಿ ಸುಧನ್ವನೊ
– ಬೆರೆಯದಿರು ಬೆರೆಯದಿರು (ಬೆ–೧೪೩–೪)
– ನೆಟ್ಟನೆ ರಣದೊಳು ಕಾದದೆ ಪ್ರಾಣವ ಬಿಟ್ಟು ಕೊಂದವನು ಕರ್ಣನೊ ಪಾಂಡವರೊ
– ಬಂದಿದೆ ದೂರು ಬರಿದೆ (ಬೆ–೮೬–೪)
– ತ್ಯಾಗಿ ಧರ್ಮಜ ಬಲ್ಲ ರಣದೊಳರ್ಜುನ ಬಲ್ಲ ಕಾಗೆನೆಲೆಯಾದಿಕೇಶವ ಕೈವಲ್ಯನೆಂಬು ದನು
– ಬಲ್ಲವರೆನಿಪರು ಬಲ್ಲವರರಿಯರು (ಬೆ–೭೩–೫)
– ರಣದೊಳಗೆ ದೇಹವ ಖಂಡತುಂಡವ ಮಾಡಿ ರಣವನುತ್ತರಿಸಿ ಮರಣವ ತೋರಿದೆ
– ಸಾಲದೆ ನಿನದೊಂದು ದಿವ್ಯನಾಮ (ಬೆ–೧೭೪–೧)
– ಹನುವೊಂದಕ್ಷೋಹಿಣಿ ಬಲವುಳ್ಳ ಕೌರವನು ರಣದೊಳಗೆ ತೊಡೆಮುರಿದು ಬಿದ್ದಿರ್ಪನಂತೆ
– ಆರಿಗಾದರು ಪೂರ್ವಕರ್ಮಬಿಡದು (ಬೆ–೧೦೮–೩)
೩೮೦೬. ರಣಶೂರ – ಮೇರೆಯಿಲ್ಲದೆ ಅಸುರರ ಸಂಹರಿಸಿದ ರಣಶೂರಗೆ
– ಶರಣು ಶರಣು ದಶರಥರಾಮದೂತಗೆ (ಸ–೨೩೬–೧)
೩೮೦೭. ರಣರಂಗ – ರಣರಂಗ ಧೀರಂ ಗುಣಗಂಭೀರಂ ದಾನವ ದೈತ್ಯಾರಣ್ಯ ಕುಠಾರಂ
– ಭಜರೇ ಹನುಮಂತಂ ಮಾನಸ (ಸ–೧೯೦–೪)
೩೮೦೮. ರಣಾಂಗಣ – ತ್ರಿಣಯನನೊಲಿದ ರಾವಣನ ಗರ್ವವ ರಣಾಂಗಣದೊಳೊರಗಿಸಿದ ಗೋವಿಂದ
– ಪರಮಪುರುಷ ಹರಿ ಗೋವಿಂದ (ಬೆ–೩೯–೭)
೩೮೦೯. ರತಿ – ರತಿಯಲ್ಲಿ ಮೊದಲೇನು ಮೊದಲಿಗೆ ತುದಿಯೇನು
– ಹೆಣ್ಣುಗಳೊಳು ಹೆಮ್ಮೆಕಾರಿಕೆ (ಬೆ–೧೨೯–೧)
– ರತಿಗೆ ಶೃಂಗರವೇನು ಶೃಂಗರದಲಿ ರತಿಯೇನು
– ಹೆಣ್ಣುಗಳೊಳು ಹೆಮ್ಮೆಕಾರಿಕೆ (ಬೆ–೧೨೯–೧)
– ಮತಿಗೆಟ್ಟು ಮನಸೋತು ಅನ್ಯಪುರುಷರ ಕೂಡಿ ರತಿಯೊಳಗೆ ಸಿಲುಕುವರು ರಮ್ಯ ದೊಳಗಿಹರು
– ಕಲಿಯೇರಿ ಬಂತು (ಬೆ–೧೩೦–೬)
೩೮೧೦. ರತಿಪತಿ (ಮನ್ಮಥ) – ಗತಿಯಿಲ್ಲದರಿಗೆ ಸದ್ಗತಿಯು ನೀನೆ ದೇವ ರತಿಪತಿಯ ಪಿತನೆ ಕಾಯೊ
– ವಾಸುದೇವಾಯ ನಮೋ (ಬೆ–೯೦–೩)
೩೮೧೧. ರತಿಪತಿಪಿತ – ನುತ ಬೌದ್ಧ ರೂಪದಿ ಬಹು ಭಂಗಪಡಿಸಿದ ರತಿಪತಿಪಿತನೆಂಬ ಮಾಸಾಳಮ್ಮ
– ತಾಳಲ್ಲಲ್ಲಲ್ಲೋ ಮಾಸಾಳಲ್ಲಲ್ಲಲ್ಲೋ (ಸ–೧೧೦–೯)
– ಶ್ರುತಿತತಿಗೆ ಗೋಚರಿಸದ ಅಚ್ಯುತನು ಭುವನಾದಿಮೂರ್ತಿ ರತಿಪತಿ ಪಿತನು
– ಮಗುವು ಕಾಣೇರಯ್ಯ (ಸ–೧೯೯–೫)
೩೮೧೨. ರತ್ನಗಂಬಳಿ – ರತ್ನಗಂಬಳಿ ಹೊತ್ತು ಹಾಸುವೆನು
– ಬಂಟನಾಗಿ ಬಾಗಿಲಕಾಯ್ವೆ

(ಬೆ-೪೫-೪)

೩೮೧೩. ರಥ - ವಿಜಯ ದಶಮಿಯಲ್ಲಿ ವಿಜಯ ರಥದಲ್ಲಿ ಕೂತು ವಿಜಯಳ ಸಹಿತದಿ ವಿಜಯ ಮಾಡುತ ಬಾರೊ
- ಬಾರೊ ಭಾಗ್ಯದ ನಿಧಿಯೆ (ಸ-೧೮೨-೧)
- ರಥದಿಂದಿಳಿದು ಪೋಗಿ ಕುರುವಂಶ ಸವರಿದ ಹಿತಶತ್ರುವಾರು ಶಲ್ಯನೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೫)
- ಅಂಕಕೆ ರಥವ ನಡಿಸಿದವರೊಳು ನಿಶ್ಶಂಕ ಧರ್ಮವ ಗೆದ್ದ ಹಿರಿಯರೊಳು
- ಶೇಷ ಶಯನ ನಿನ್ನ ಭಾಗವತರ (ಬೆ-೨೭-೪)
- ಒಲಿದು ಪಾರ್ಥನ ರಥವ ಧರೆಗೊತ್ತಿದ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-೨)
- ಅತಿ ಸ್ನೇಹದಿಂದ ಅರ್ಜುನಗೆ ಸಾರಥಿಯಾಗಿ ರಥವ ನಡೆಸಿದವನಾರು
- ಆತನ ಪಾಡುವೆ ಅನವರತ (ಬೆ-೭೦-)
- ಅರ್ಜುನನ ಶಿರವ ಕಾಯಲು ಬಾಣದಿಂದ ರಥವ ಗುಜ್ಜೆಯಲೂರಿ ನೆಲಕೊತ್ತಿದ ಪಾದ
- ಎಂಥ ಕೀರುತಿ ಪೊತ್ತುವೆರಡು ಪಾದ (ಬೆ-೮೩-೧)
- ರಥವನಡರಿ ಸುರಪಥದಲಿ ತಿರುಗುವ ಸುತನಿಗೆ ಶಾಪವನಿತ್ತವನ
- ಮಂಗಲಂ ಜಯ ಮಂಗಲಂ (ಬೆ-೧೭೨-೨)
- ವಿಜಯಸಾರಥಿ ಆದಿ ವಿಜಯ ರಥದಿ ಪರ ರವಿಜನ ಸೋಲಿಸಿ
- ಬಾರೊ ಭಾಗ್ಯದ ನಿಧಿಯೆ (ಸ-೧೮೨-೧)
- ತರಣಿಸುತನ ಬಾಣವೆರಗದಂದದಿ ರಥವ ಧರೆಗೆ ಒತ್ತಿದ ದೇವನ
- ತೋರೆ ಬೇಗನೆ ಸಖಿ (ಬೆ-೯೪-೧)
- ಧರಣಿಕೀಲಿಸಿದ ರಥವನು ನೆಗಹುತಿರೆ ಸಹೋದರನ ಕೈಯಿಂದೆ ನಿರ್ದಯದಿ ಕೊಲ್ಲಿಸಿದೆ
- ನೀನಾವ ಬಾಂಧವನೊ (ಬೆ-೭೮-೬)
- ಸಮರದಲಿ ರವಿಸುತನ ರಥಕೆ ಸೂತನ ಮಾಡಿ ಯಮಸುತನ ಕೈಲಿ ಮಾವನನು ಕೊಲ್ಲಿಸಿದೆ
- ನೀನಾವ ಬಾಂಧವನೊ (ಬೆ-೭೮-೭)
- ಲೋಕವೀರೇಳನ್ನು ತಿರುಗುವಾ ರವಿರಥಕೆ ಏಕಗಾಲಿಯು ಏಳು ಕುದುರೆಯಿಂದ
- ಪ್ರಾಚೀನ ಕರ್ಮವಿದು (ಬೆ-೧೦೭-೨)
- ಕನಕ ರಥಗಳಂದು ಕಾಲುನಡಿಗೆಯಿಂದು
-ಎನ್ನ ಕಂದ ಹಳ್ಳಿಯ ಹನುಮಾ (ಬೆ-೬_೩)
- ಮಾವ ಕಂಸನ ಕೊಂದು ಮನುಜ ವೇಷದಲಿ ಗಾಂಡೀವಿಯಾ ರಥದ ಬಂಡಿಯ ಬೋವನಾದೆ
- ನೀನಾವ ಬಾಂಧವನೊ (ಬೆ-೭೮-೧)
- ಸ್ವರ್ಣ ಖಚಿತವಾದ ರಥದೊಳು ಪೊಕ್ಕನ ನಾರಾಯಣ ಎನ್ನಿರೊ
- ನಾರಾಯಣ ಎನ್ನಿ ನಾರದವರದನ (ಬೆ-೭೬-೩)

೩೮೧೪. ರಥೋತ್ಸವ - ಚೆಲುವರಾಯನ ರಥೋತ್ಸವದೀ ತೀರ್ಥಕೊಲಿದು ಗಂಗಾದೇವಿ ಬರುವ ಸಂಭ್ರಮವ
- ಕೈಯ ತೋರಿದ ಬಗೆಯ (ಸ-೯೧-೪)

೩೯೧೫. ರನ್ನ (ರತ್ನ) - ಬಣ್ಣ ಸರವಲ್ಲಾಡೆ ವರ ರನ್ನ ನೇವಳದ ಹೊನ್ನ ಗಂಟೆಯು ಘಣ ಘಣರೆನಲು
- ಮಗನೆಂದಾಡಿಸುವಳು ಮೊಗ ನೋಡಿ ನಗುವಳು (ಸ-೧೯೫-೨)
- ರನ್ನ ಮಾಣಿಕವಿರಲಿಕ್ಕೆ ಕಾಜಿನ ಹರಳೇಕೆ
- ಮರೆಯದಿರು ಮರೆಯದಿರು (ಬೆ-೩೬-೩)
- ಸುಗುಣರನ್ನ ಕಾಗೆನೆಲೆಯಾದಿಕೇಶವನ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ (ಬೆ-೮೦-೩)

೩೯೧೬. ರಪಣ (ಐಶ್ವರ್ಯ) - ರಪಣ ನಿಪುಣತ್ವ ಜಾಣುವೆ ಇಲ್ಲದಿಹ ಜಡಗೆ ಸುಪವಿತ್ರ ನೀನಲ್ಲದಿಲ್ಲ
- ನೀನುಪೇಕ್ಷೆಯ ಮಾಡೆ (ಬೆ-೪೯-೧)

೩೮೧೭. ರಬ್ಬಳಿಗೆ (ಅಂಬಲಿ) - ದುರ್ಜನರ ಮನೆಯ ಪಾಯಸಾನ್ನಕ್ಕಿಂತ ಸಜ್ಜನರ ಮನೆಯ ರಬ್ಬಳಿಗೆ ಲೇಸು
- ಅರಿತು ನಡೆಯಲಬೇಕು (ಸ-೭-೧)

೩೮೧೮. ರಭಸ – ಆತ ತನ್ನಮಳ ಹಯವನೇರಿ ಕೊಂಡು ಪ್ರಖ್ಯಾತ ದುಂದುಭಿಯ ರಭಸ ದೊಡನೆ
– ತಂಗದಿರನನಿಮಿಷ ತಾರಕೆಗಳು (ಬೆ-೧೬೯-೪)

೩೮೧೯. ರಮಣ – ಶ್ರೀಲತಾಂಗಿಯ ರಮಣ ಆದಿಕೇಶವನ
– ಕಾವನಯ್ಯನ ಕಳುಹು (ಬೆ-೧೫೩-೩)

೩೮೨೦. ರಮಣಿ – ರಮಣಿ ಕೇಳೆಲೆ ಮೋಹನ ಶುಭಕಾಯನ ಅಮರವಂದಿತ ರವಿಶತಕೋಟಿ ತೇಜನ
– ರಮಣಿ ಕೇಳೆಲೆ ಮೋಹನ (ಬೆ-೯೬-ಪ)
– ತಮನೊಡನೆ ಹೋರಿ ಬೆಟ್ಟವನು ಬೆನ್ನಲಿ ಮೊತ್ತು ರಮಣಿ ಧರೆಯನು ತಂದ ಆಯಾಸವೊ
– ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೧)
– ರಾಶಿ ವಿದ್ಯೆಯ ಬಲ್ಲ ರಮಣೀ ಹಂಬಲ ನೊಲ್ಲ ಭಾಷಿಗನಿವನಾರಮ್ಮ
– ನಮ್ಮಮ್ಮ ಶಾರದೆ (ಬೆ-೧_೩)
– ರಮಣಿಯ ತಂದೆ ವರಹರೂಪೀ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ-೮೮-೧)
– ಕಾವನಯ್ಯನ ಕಳುಹು ರಮಣಿ ಕೋವಿದರು ಪಡೆವ ಬಾಡದಾದಿಕೇಶವನ
– ಕಾವನಯ್ಯನ ಕಳುಹು (ಬೆ-೧೫೩-ಪ)
– ಭೂರಮಣಿಯನೊತ್ತಿ ಅಡಿಗೆ ಬೀಗನ ಶಿರವನ್ನು ಕಾಯ್ದ ಶ್ರೀರಮಣ ಆದಿಕೇಶವನನ್ನು ನೋಡಿರೊ
– ಈತನೀಗ ವಾಸುದೇವನು (ಬೆ-೭೫-೩)
– ರಮಣಿಯರ ರಂಜಕದ ನುಡಿಯನು ಕೇಳಿ ಪ್ರಣಮವೆಂದು ತೋಷಿಸುವ ಕರ್ಣೇಂದ್ರಿಯಕೆ
– ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-೪)
– ರಮಣಿಯರಿಗೊಲಿದು ಬತ್ತಲೆ ನಿಂತೆ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ-೮೮-೧)

೩೮೨೧. ರಮಣೀಯ – ಸಗರತನಯಾರ್ಚಿತ ಸನಕಾದಿ ವಿನುತ ರಘುವಂಶ ಕುಲತಿಲಕ ರಮಣೀಯಗಾತ್ರ
– ಲಾಲಿ ಪಾವನಚರಣ ಲಾಲಿ ಅಘಹರಣ (ಸ-೨೨೯-೨)

೩೮೨೨. ರಮಾಧವ (ವಿಷ್ಣು) – ಕಮಲ ಬ್ರಹ್ಮಾಂಡ ಕೋಟಿ ಒಡಲೊಳು ತಾಳ್ದಂಥ ರಮಾಧವ ನಿಮಗೆ ನೀರೊಳಗೆ ವಾಸವಾಯಿತು
– ನಮಗೆಲ್ಲ ಮನೆಗಳಯ್ಯ (ಸ-೧೩೨-೭)

೩೮೨೩. ರಮೆ – ರಮೆಯ ಗಂಡನೊಲಿದು ಪ್ಪವಡಿಸಯ್ಯ ಹರಿಯೆ
– ಸಿಂಗರದ ಸಿರಿಧರನೆ (ಬೆ-೧೬೭-೩)
– ಯಮದೂತರಿನ್ನೇನ ಮಾಡುವರು ಪೇಳೊ ರಮೆಯರಸನೆ ನಿನ್ನ ಅರಿಕೆಯುಳ್ಳವರಿಗೆ
– ಯಮದೂತರಿನ್ನೇನ ಮಾಡುವರು (ಬೆ-೪೪-ಪ)

೩೮೨೪. ರಮ್ಯ – ಮತಿಗೆಟ್ಟು ಮನಸೋತು ಅನ್ಯಪುರುಷರ ಕೂಡಿ ರತಿಯೊಳಗೆ ಸಿಲುಕು ವರು ರಮ್ಯದೊಳಗಿಹರು
– ಕಲಿಯೇರಿ ಬಂತು (ಬೆ-೧೩೦-೬)

೩೮೨೫. ರಯ (ರಭಸ) – ರಜಸು ತಾಮಸ ವೆಂಬ ರಯವನೆಲ್ಲವ ಕಳೆದು
– ಆರಿಗಳವಲ್ಲಾತ್ಮ ಯೋಗಸಿದ್ಧಿ (ಬೆ-೧೨೬-೧)

೩೮೨೬. ರವಕೆ – ಧಿಮಿಧಿಮಿ ಗಣಗಣವೆಂಬ ಗಂಟೆಯ ರವಕೆ ಬೆಮೆಗೊಳುತಿರುವಾ ಹರಿಣ ನಂದದಲಿ
– ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-೪)

೩೮೨೭. ರವಿ – ದೃಕುಯುಗದಿ ರವಿ ಶಶಿಯು ಎವೆಯಲಿ ನಕ್ಷತ್ರ ಪ್ರಕಟ ಜಿಹ್ವೆಯ ವಾಣಿ ಕರ್ಣದ್ವಯದಿ
– ವಿಶ್ವಲೋಕೇಶ ವಿಶ್ವಲೋಕೇಶ (ಸ-೨೩೪-೧)
– ಲೋಕವೀರೇಳನ್ನು ತಿರುಗುವಾ ರವಿರಥಕೆ ಏಕಗಾಲಿಯು ಏಳು ಕುದುರೆಯಿಂದ
– ಪ್ರಾಚೀನ ಕರ್ಮವಿದು (ಬೆ-೧೦೭-೨)
– ದುರಿತಜೀಮೂತಪವನ ದುರಿತಾಂಧಕಾರ ರವಿ ದುರಿತಲತಾಲವಿತ್ರ ನಾರಾಯಣಾ
– ನಾರಾಯಣಾ ನಮೋ (ಬೆ-೫೧-೩)
– ಪೆಸರಗೊಳುತ ಬಂದು ಮೊರೆಹೊಕ್ಕ

ವಿಭೀಷಣಗೆ ಶಶಿ ರವಿಪರ್ಯಂತ ಪಟ್ಟಗಟ್ಟ ಲಿಲ್ಲವೆ
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೪)
- ರಮಣಿ ಕೇಳೆಲೆ ಮೋಹನ ಶುಭಕಾಯನ ಅಮರವಂದಿತ ರವಿಶತಕೋಟಿತೇಜನ
- ರಮಣಿ ಕೇಳೆಲೆ ಮೋಹನ (ಬೆ-೯೬-ಪ)
- ರವಿ ಕೋಟಿ ತೇಜ ಪ್ರಕಾಶೆ ಮಹಾ ಕವಿಜನರ ಹೃತ್ಕಮಲವಾಸೆ
- ವರವ ಕೊಡು ಎನಗೆ ವಾಗ್ದೇವಿ (ಬೆ-೨-೩)

೩೮೨೮. ರವಿಜ/ರವಿಸುತ (ಕರ್ಣ) - ವಿಜಯ ಸಾರಥಿ ಆದಿ ವಿಜಯ ರಥದಿ ಪರ ರವಿಜನ ಸೋಲಿಸಿ
- ಬಾರೊ ಭಾಗ್ಯದ ನಿಧಿಯೆ (ಸ-೧೮೨-೧)
- ಸಮರದಲಿ ರವಿಸುತನ ರಥಕೆ ಸೂತನ ಮಾಡಿ ಯಮಸುತನ ಕೈಲಿ ಮಾವನನು ಕೊಲ್ಲಿಸಿದೆ
- ನೀನಾವ ಬಾಂಧವನೊ (ಬೆ-೭೮-೭)

೩೮೨೯. ರವಿಜ(ಸುಗ್ರೀವ)- ವಾಲಿಯನು ಪಾಯದಿಂದಲಿ ಕೊಲ್ಲಿಸಿ ರವಿಜಗೆ ಸಹಾಯ ಮಾಡಿದೆ ವಾಯುತನಯ
- ಎಷ್ಟು ಪೊಗಳಲಿ ನಾನು (ಸ-೫೩-೧)

೩೮೩೦. ರವಿಮಂಡಲ - ಪಿರಿದು ರವಿ ಮಂಡಲವ ಮರೆಯ ಚಕ್ರವ ಮಾಡಿ ನರನ ಕೈಯಿಂದ ಸೈಂಧವನ ಕೊಲ್ಲಿಸಿದೆ
- ನೀನಾವ ಬಾಂಧವನೊ (ಬೆ-೭೮-೪)

೩೮೩೧. ರವೆ - ತುಂಬಿವರ್ಣನ ತೆತ್ತವೆ ನಾಲ್ಕು ರವೆ ಎಂಟು ಜಾಂಬವರು ಮೆಚ್ಚುವರು ಜಾಣರಿಗಳವಲ್ಲ
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೨)

೩೮೩೨. ರಸ - ಕಾಡುವ ಕಪಿ ಸಾಯದನಕ ಸತ್ತ ಓಡಿನೊಳಗೆ ರಸ ತೊಟ್ಟಿಕ್ಕದನಕ
- ಸದರವಲ್ಲವೊ ನಿಜಯೋಗ (ಸ-೨೪೩-೨)
- ಗಾನರಸಲೋಲ ಆಗಮಶೀಲ ಭಕ್ತಪರಿಪಾಲ ಗೋಪಾಲಬಾಲ
- ನೀನುಪೇಕ್ಷೆಯ ಮಾಡೆ (ಬೆ-೪೯-ಪ)
- ಮೇದಿನಿಯ ಹೊರೆಗಳೆವ ಮೃತ್ಯುವಿನ ಹಾಸ್ಯರಸ
- ಬೊಂಬೆಯಾಟವನಾಡಿಸಿದ (ಬೆ-೭೯-೨)
- ಕೆಂಬಲ್ಲಿನ ಪಕ್ಷಿ ಕೊಂಬುದು ರಸಗಳ ಹಂಬಲ ಮಾಳ್ಪುದು ಹರುಷದಿಂದ
- ಪಕ್ಕಿಯ ಕುರುಹ ಬಲ್ಲರು (ಬೆ-೧೬೫-೨)

೩೮೩೩. ರಸಪೂರಿತ - ರಸಪೂರಿತ ಶ್ರುತಿ ಮಸುಳಿಸದಲೆ ತಂದೆ ಬಿಸಜಸಂಭವನಯ್ಯ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೧)

೩೮೩೪. ರಸಾತಳ - ಭೂತಳವೆರಸಿ ರಸಾತಳ ಕೊಯ್ದನ ಪಾತಾಳದೊಳು ಕಂಡೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೩)

೩೮೩೫. ರಸಿಕ - ಹುಸಿಯನಾಡಿ ಹೊಟ್ಟೆ ಹೊರೆವ ವಿಷಯದಲ್ಲಿ ರಸಿಕನೆಂದು
- ಈಶ ನಿನ್ನ ಚರಣ ಭಜನೆ (ಬೆ-೬೫-೯)

೩೮೩೬. ರಹಸ್ಯ - ಗುರುವಿನುಪದೇಶದಲಿ ಪರಮ ರಹಸ್ಯವನರಿತು ಮರೆಯದಲೆ ಅಲ್ಲಿ ಅಧಿಕಾರಿಯಾಗೊ
- ನಾರಾಯಣೆನು ಮನವೆ (ಬೆ-೧೪೧-೧)
- ಇದು ರಹಸ್ಯವು ಎಂದು ಹಿತವು ತೋರಿತು ಇಂದು ಪದವ ಜಯಿಸಿದೆ ನಾನು ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೪)

೩೮೩೭. ರಹಿತ - ಅಖಿಳ ಸುವ್ರತ ಕ್ಷೋಣಿ ಯಿಂದಲಿ ಹಿರಿಯ ಪ್ರಕೃತಿರಹಿತಾಂಬರೀಷ
- ಸಿಂಗರದ ಸಿರಿಧರನೆ (ಬೆ-೧೬೭-೨)

೩೮೩೮. ರಾಕೇಂದುಮುಖಿ (ಚಂದ್ರಮುಖಿ) - ರಾಕೇಂದುಮುಖಿಯ ದ್ರೌಪದಿಯ ಮಾನವ ಕಾಯ್ದೆ ಆಕೆಗಕ್ಷಯವಿತ್ತೆ ಕೃಷ್ಣ
- ಪೂರ್ವಜನ್ಮದಲಿ ನಾ ಮಾಡಿದಾ (ಬೆ-೮-೩)

೩೮೩೯. ರಾಕ್ಷಸ - ವಿಷ್ಣುವೆ ಪರಮದೈವವೆಂದು ದುಷ್ಟ ರಾಕ್ಷಸರ ಕೊಂದೆ
- ಎಷ್ಟು ಪೊಗಳಲಿ ನಾನು (ಸ-೫೩-೮)

೩೮೪೦. ರಾಗ - ರಾಗ ರಂಗು ಬಲು ಭಕ್ತಿಭಾವ

ದೊಳು ಬೀಗಿ ಚೆನ್ನಕೇಶವನನು ನೆನೆಯದೆ
– ವ್ಯರ್ಥವಾಯಿತಲ್ಲ ಜನ್ಮ ಸಾರ್ಥಕಾಗಲಿಲ್ಲ (ಸ–೨೩೧–೩)
– ಪರಿಪರಿ ವಿಧದಲಿ ರಾಗವ ನುಡಿಸುತ ತುರು ಹಿಂಡುಗಳ ಕೂಡುತ ಪಾಡುತ
– ಯಾದವರಾಯ ಬೃಂದಾವನದೊಳು (ಸ–೨೨೦–೨)
– ರಾಗ ದ್ವೇಷಾದಿಯಲಿ ಮುಳುಗೇಳುವನ ಸಂಗ
– ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ–೧೧೯–೫)
– ರಂಜಕದ ಬೇರಿಗೆ ರಾಗ ಮೂವತ್ತೆರಡು
– ಬೀಜ ಮೂರನು ಬಿತ್ತಿ (ಬೆ–೧೬೨–೧)
– ಭೋಗಿಶಯನನ ಪಾದ ರಾಗದಿ ಭಜಿಸದೆ ಕಾಗೆನೆಲೆಯಾದಿಕೇಶವನ ದಾಸ ನೀನು
– ಹೇಗೆ ನೀ ದಾಸನಾದೆ (ಬೆ–೨೨–೨೧)
– ತ್ರಯದಶದ್ವಯ ರಾಗದಿಂ ಸಪ್ತಸ್ವರದಿ ಪಾಡುತಲೈದಿಹರು
– ಪೂಸರನ ಜನಕನೇ (ಬೆ–೧೬೮–೨)
– ರಾಗದಲಿ ತುಂಬುರನೊ ಯೋಗದಲಿ ಸನಕನೋ
– ಮೆರೆಯುದಿರು ಮೆರೆಯುದಿರು (ಬೆ–೧೪೮–೩)

**೩೮೪೧. ರಾಘವ** – ತನ್ನ ವಂಶದ ಬಲವುಳ್ಳ ರಾವಣ ಶಿರಕೆ ಘನ್ನ ರಾಘವಸ್ವಾಮಿ ಶರವ ತೊಡುವಾಗ
– ಆವ ಬಲವಿದ್ದರೇನು (ಬೆ–೧೩೩–೩)
– ಶ್ರೀಪತಿ ರಾಘವ ಕ್ಷೇಮದಲ್ಯೆದಾರೆ
– ಎನ್ನ ಕಂದ ಹಳ್ಳಿಯ ಹನುಮಾ (ಬೆ–೬_೧)
– ಶ್ರೀವರ ರಾಘವ ಕ್ಷೇಮದಲ್ಯೆದಾರೆ
– ಎನ್ನ ಕಂದ ಹಳ್ಳಿಯ ಹನುಮಾ (ಬೆ–೬_೨)
– ಸನಕಾದಿಗಳೋಲೈಪ ಆದಿಕೇಶವ ನಮ್ಮ ಹನುಮೇಶ ರಾಘವ ಕ್ಷೇಮದಲ್ಯೆದಾರೆ
– ಎನ್ನ ಕಂದ ಹಳ್ಳಿಯ ಹನುಮಾ (ಬೆ–೬_೩)
– ಸಡಗರದಿಂದ ವಾರಿಧಿಯು ದಾಂಟಿ ಪೆರ್ಮುಡಿಯ ಮಾಣಿಕವ ರಾಘವಗಿತ್ತೆ ಹನುಮ
– ಅರಸಿನಂತೆ ಬಂಟನೊ (ಬೆ–೫_೧)

**೩೮೪೨. ರಾಜ** – ರಾಜ ಧರ್ಮಗೆ ಅನುಜನಾದಗೆ ರಾಜಪೂಜಿತ ರಾಜಗೆ
– ಶರಣು ಶರಣು ದಶರಥರಾಮದೂತಗೆ (ಸ–೨೩೬–೨)
– ರಾಜವದನೆ ಸುರರಾಜನ ಪುರದೊಳು ರಾಜಿಸುತಿಹ ಕುಜವ
– ರಾಜವದನೆ ಸುರ ರಾಜನ (ಬೆ–೯೭–ಪ)
– ಉಗ್ರಾಹಿ ಅಹೋಬಲಪತಿರಾಜ ಕನಕಗೆ ಭಾಗ್ಯವನೀವ ಕಾಗೆನೆಲೆಯಾದಿಕೇಶವನು
– ಸೀತಾಪತಿ ರಘುನಾಥ (ಬೆ–೧೦೦–೩)
– ಋಷಿವಾಲ್ಮೀಕಿ ಬಲ್ಲ ರಾಜ ವಿದೇಹ ಬಲ್ಲ ಶಶಿಮಿತ್ರನೇತ್ರ ಸರ್ವೋತ್ತಮನೆಂಬುದನು
– ಬಲ್ಲವರೆನಿಪರು ಬಲ್ಲವರರಿಯರು (ಬೆ–೭೩–೩)
– ರಾಜೀವಮುಖಿಯೆನಿಸುವ ಸಖಿಗೊಲಿದಿತ್ತ ರಾಜನ ತೋರೆನಗೆ
– ರಾಜವದನೆ ಸುರರಾಜನ (ಬೆ–೯೭–ಅ)
– ಸಮರದಲ್ಲಖಿಳ ರಾಜರ ಕೊಂದೆ ಗೋವಿಂದ ಸಲಹೆನ್ನನು
– ಗೋವಿಂದ ಸಲಹೆನ್ನನು (ಬೆ–೮೮–೧)
– ರಾಜರಿಗೆ ಒಂದು ಫಲ ರಾಜ್ಯಕ್ಕೆ ಎರಡು
– ಬೀಜ ಮೂರನು ಬಿತ್ತಿ (ಬೆ–೧೬೨–ಪ)

**೩೮೪೩. ರಾಜಪೂಜಿತ** – ರಾಜ ಧರ್ಮಗೆ ಅನುಜನಾದಗೆ ರಾಜಪೂಜಿತ ರಾಜಗೆ
– ಶರಣು ಶರಣು ದಶರಥರಾಮದೂತಗೆ (ಸ–೨೩೬–೨)

**೩೮೪೪. ರಾಜಮುಖಿ** (ಚಂದ್ರಮುಖಿ) – ರಾಜಮುಖಿಯಳ ರಕ್ಷಿಸಿ ಮೃಗರಾಜಗೆ ಒಲಿದಾತಗೆ
– ಶರಣು ಶರಣು ದಶರಥರಾಮದೂತಗೆ (ಸ–೨೩೬–೨)

**೩೮೪೫. ರಾಜರೋಗ** – ಪುರ ಅಗ್ರಹಾರ ಕೆಡಿಸಿದವಗೆ ರಾಜರೋಗವೆಂದು ಅರಿವುದು ಸಕಲ ಜನರು
– ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ–೧೨೪–೧)

**೩೮೪೬. ರಾಜಸ** – ಪರಮಮೂರ್ಖನು ನಿನ್ನ ಅರಿವಿದ್ದ ದಾಸರಿಗೆ ಶರಣೆನದ ರಾಜಸವೊ

ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೩)
೩೮೪೭. **ರಾಜಸೂಯ** - ರಾಜಸೂಯವ ರಚಿಸಬೇಕೆಂದು ರಾಜರ ಸೀಳಿದಾತಗೆ
- ಶರಣು ಶರಣು ದಶರಥರಾಮದೂತಗೆ (ಸ-೨೩೬-೨)
೩೮೪೮. **ರಾಜಿಸು** - ಗಂಡುವೆಣ್ಣಿನ ರೂಪುವೆತ್ತು ರಾಜಿಸುವವನು
- ಸಿಂಗರದ ಸಿರಿಧರನೆ (ಬೆ-೧೬೭-೩)
- ರಾಜವದನೆ ಸುರರಾಜನ ಪುರದೊಳು ರಾಜಿಸುತಿಹ ಕುಜವ
- ರಾಜವದನೆ ಸುರ ರಾಜನ (ಬೆ-೯೭-೫)
- ಸೂಜಿಯ ಬೆನ್ನಲಿ ರಾಜಿಪ ತೆರದಿ ಸಹಾಜರ ಒಳಗಿಪ್ಪೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೧೦)
೩೮೪೯. **ರಾಜೀವಮುಖಿ** - ರಾಜೀವಮುಖಿ ಯೆನಿಸುವ ಸಖಿಗೊಲಿದಿತ್ತ ರಾಜನ ತೋರೆನಗೆ
- ರಾಜವದನೆ ಸುರರಾಜನ (ಬೆ-೯೭-೮)
೩೮೫೦. **ರಾಜ್ಯ** - ಲಂಕೆಯ ಅನುದಿನ ಸ್ಥಿರ ರಾಜ್ಯವಾಳಿದ ಕಿಂಕರರೊಳಿರಿಸು ಕಂಡೆಯ ಎನ್ನನು
- ಶೇಷಶಯನ ನಿನ್ನ ಭಾಗವತರ (ಬೆ-೨೭-೪)
- ಶಕ್ರಜಿತುಪಿತ ಸಹೋದರಗೆ ಸ್ಥಿರರಾಜ್ಯವನು ಉತ್ಕೃಷ್ಟದಿಂ ಕೊಟ್ಟೆ ನಾರಾಯಣಾ
- ನಾರಾಯಣಾ ನಮೋ (ಬೆ-೫೧-೨)
- ರಾಯ ತಾ ಮುನಿದರೆ ರಾಜ್ಯವನು ಬಿಡಬಹುದು
- ತೊರೆದು ಜೀವಿಸಬಹುದೆ (ಬೆ-೫೫-೧)
- ರಾಜರಿಗೆ ಒಂದು ಫಲ ರಾಜ್ಯಕ್ಕೆ ಎರಡು
- ಬೀಜ ಮೂರನು ಬಿತ್ತಿ (ಬೆ-೧೬೨-೫)
೩೮೫೧. **ರಾಣಿ** - ಪಟ್ಟದ ರಾಣಿ ಪಾರ್ವತಿಯ ಕುಮಾರನು ಹೊಟ್ಟೆಯ ಗಣನಾಥನೆ
- ನಮ್ಮಮ್ಮ ಶಾರದೆ (ಬೆ-೧_೨)
- ಅತಿಶಯ ನರಹರಿ ವಾಮನ ರೂಪಿನ ಪಿತನ ಮೋಹದ ರಾಣಿಯ
- ಹರಿಮುಖಿ ಹರಿವಾಣಿ (ಬೆ-೯೮-೩)
- ಗುರುವಿನ ಮುಂದೆ ಮುಂದಿಹ ಬಾಹನ ಕಿರಿಯ ಮಗನ ರಾಣಿಯ
- ಹರಿಮುಖಿ ಹರಿವಾಣಿ (ಬೆ-೯೮-೧)
- ಯಮಸುತನ ರಾಣಿಗಕ್ಷಯವಸನವನ್ನಿತ್ತೆ ಸಮಯದಲಿ ಅಜಮಿಳನ ಪೊರೆದೆ
- ಬಾಗಿಲನು ತೆರೆದು ಸೇವೆಯನು (ಬೆ-೪೬-೩)
- ಜಗದೇಕ ಪೊಡವಿಗೊಡಯನ ರಾಣಿ ಪರಮ ಕಲ್ಯಾಣಿ
- ಏಕೆ ನಡುಗಿದೆ ತಾಯೆ (ಸ-೫೬-೫)
೩೮೫೨. **ರಾಣಿವಾಸೆ** (ಹೆಂಡತಿ) - ಅವಿರಳಾ ಪುರಿಯ ಸಿರಿ ಕಾಗೆನೆಲೆಯಾದಿ ಕೇಶವನ ಸುತನಿಗೆ ಸನ್ನುತದ ರಾಣಿವಾಸೆ
- ವರವ ಕೊಡು ಎನಗೆ ವಾಗ್ದೇವಿ (ಬೆ-೨_೩)
೩೮೫೩. **ರಾಣ್ಯ** (ರಾಣುವೆ, ಸೈನ್ಯ) - ಧೀರ ರಾಹುತ ಪರಿವಾರದಹಂಕಾರ ಭಾರವನು ತೆಗೆದೆಯೋ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೫)
೩೮೫೪. **ರಾತ್ರಿ** - ಸುಖ ದುಃಖ ದಿವ ರಾತ್ರಿಯ ತೆರವದರಿಂದಲಿ
- ಬೆರೆಯದಿರು ಬೆರೆಯದಿರು (ಬೆ-೧೪೪-೧)
- ಕಡೆಗೆ ಅಪರರಾತ್ರಿಯಲ್ಲಿ ತಿಂದು ಒರಗುವೆ
- ಸಾಕು ಸಾಕು ಮನುಜ ಸೇವೆಯು (ಬೆ-೪೨-೧)
- ಸುಖ ದುಃಖ ದಿವರಾತ್ರಿಯ ತೆರವದರಿಂದಲಿ
- ಬೆರೆಯದಿರು ಬೆರೆಯದಿರು (ಬೆ-೧೪೪-೧)
೩೮೫೫. **ರಾಧೆ** - ಸತಿ ರುಕ್ಮಿಣಿ ರಾಧೆಯ ಚುಂಬಿಸಿದಾತನ ಗೋವಿಂದ ಎನ್ನಿರೊ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೨)
- ರಾಧೆ ಮುಂತಾದ ಗೋಪಿಯರೆಲ್ಲ ಮಧುಸೂದನ ನಿಮ್ಮನು ಸೇವಿಸುತ್ತಿರೆ
- ಯಾದವರಾಯ ಬೃಂದಾವನದೊಳು (ಸ-೨೨೦-೮)
೩೮೫೬. **ರಾಧೇಯ** (ಕರ್ಣ) - ಜನನಿ ರಕ್ಷಿಸುವಳೆಂತೆಂಬೆನೇ ಆ ಕುಂತಿ ತನಯ

ರಾಧೇಯನಿಗೆ ಎರಡನೆಣಿಸಿದ ಮೇಲೆ
- ಆರು ಹಿತವರು ಎಂದು ನಂಬಬೇಡ (ಬೆ-೩೩-೧)

೩೮೫೭. ರಾಮ/ರಾಮಚಂದ್ರ - ರಾಮ ಎಂದವನೆ ಧನ್ಯನೆಂದು ಶ್ರುತಿತತಿಗಳು ಪೊಗಳುತಿರೆ
- ರಾಮ ನಾಮವ ನೆನೆ ಮನವೆ (ಸ-೨೨೬-ಅ)
- ರಾಮ ಗೋವಿಂದ ಹರೆ ಕೃಷ್ಣ ಗೋವಿಂದ ದಾಮೋದರ ಹರಿ ವಿಷ್ಣು ಮುಕುಂದ
- ರಾಮ ಗೋವಿಂದ ಹರೆ (ಬೆ-೪೦-ಪ)
- ಮುರಹರ ರಾಮ ರಘುಪುಂಗವನ ನಾಮಂಗಳಂ ಬಿಡದೆ
- ಅಭ್ಯಾಸವನು ಮಾಡಬೇಕು (ಬೆ-೩೮-೨)
- ಪಾಪವನು ತಪ್ಪಿಸಿ ರಾಮನಾಮವ ಕೊಡಲು ಕಾಪಥಕ ವಾಲ್ಮೀಕಿ ಮುನಿಯಾಗಲಿಲ್ಲವೆ
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೧)
- ನೇಮವಿಲ್ಲದ ಹೋಮವೇತಕಯ್ಯ ರಾಮ ನಾಮವಲ್ಲದೆ ಮತ್ತೆ ನಮಗೆ ಬೇರೊಂದೆ
- ನೇಮವಿಲ್ಲದ ಹೋಮವೇತಕಯ್ಯ (ಬೆ-೧೭-ಪ)
- ಹರಿಶ್ಚಂದ್ರ ಮೊದಲಾದ ಚಕ್ರವರ್ತಿಗಳೆಲ್ಲಿ ಧುರದಿ ರಾಮ ತೇಜವೆಲ್ಲಿ
- ಇರಬಂದುದಿಲ್ಲ ಸಂಸಾರ (ಬೆ-೧೧೩-೧)
- ಮಾನವಮೃಗೇಂದ್ರ ರಾಮಚಂದ್ರ ರಕ್ಷಿಸಯ್ಯ
- ಏನು ಮಾಡಲಯ್ಯ ಬಯಲಾಸೆ ಬಿಡದು (ಬೆ-೧೧೮-ಪ)
- ರಾಮಚಂದ್ರನ ಸೇವೆ ಮಾಡಿ ಮೆಚ್ಚಿಸಿ ಮಹಾತಾಮಸನ ಗರ್ವವನು ಮುರಿದುಬಂದ
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೦೯-೧)
- ರಾಮ ನಾಮವ ನೆನೆ ಮನವೆ
- ರಾಮ ನಾಮವ ನೆನೆ ಮನವೆ (ಸ-೨೨೬-ಪ)
- ಎಲ್ಲಿ ನೋಡಿದರಲ್ಲಿ ರಾಮ
- ಎಲ್ಲಿ ನೋಡಿದರಲ್ಲ ರಾಮ (ಸ-೫೧-ಪ)
- ತಾಮಸವಿಲ್ಲದೆ ಕ್ಷತ್ರಿಯರ ಸಂಹರಿಸಿದ ರಾಮ ಭಾರ್ಗವನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೊ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೬)
- ತ್ರೇತಾಯುಗದಿ ಬಂದು ರಾಮನೆನಿಸಿಕೊಂಡೆ
- ಯಾದವಗಿರಿವಾಸನಹುದೋ (ಸ-೨೧೯-೩)
- ಘನ ಕೋಪದಿ ದಶಶಿರನ ಕತ್ತರಿಸಿದ ಇನಕುಲ ರಾಮನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೊ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೭)
- ರಾಮ ಗೋವಿಂದ ಹರೆ ಕೃಷ್ಣ ಗೋವಿಂದ ದಾಮೋದರ ಹರಿ ವಿಷ್ಣು ಮುಕುಂದ
- ರಾಮ ಗೋವಿಂದ ಹರೆ (ಬೆ-೪೦-ಪ)
- ಕಾಣುತಲೆ ಕರೆಕರೆದು ಕೊಟ್ಟೆಯ್ಯೆ ನೀನು ಪೂಬಾಣಜನಕನೆ ರಾಮ ಶರಣೆಂಬೆನು
- ನೋಡಯ್ಯ ನಿನ್ನ ದಾಸರ (ಬೆ-೮೫-೬)
- ತಾಮಸದ ಖಳ ತನ್ನ ತನುಜನನು ಮಥಿಸುತಿರೆ ರಾಮನನು ತೋರೆಂದು ಬಾಧಿಸುತಿರೆ
- ನೋಡಯ್ಯ ನಿನ್ನ ದಾಸರ (ಬೆ-೮೫-೪)
- ತ್ರಾಣದಲಿ ಭೀಮನೋ ಬಾಣದೊಳು ರಾಮನೋ
- ಬೆರೆಯದಿರು ಬೆರೆಯದಿರು (ಬೆ-೧೪೩-೪)
- ಧಾರಿಣಿಯ ಭಾರವನು ತಾಳಲಾರದೆ ದೇವಿ ಶ್ರೀರಾಮ ರಾಮೆಂದು ಶಿರವ ತೂಗುವಳಯ್ಯ
- ಕಲಿಯೇರಿ ಬಂತು (ಬೆ-೧೩೦-೪)

೩೮೫೮. ರಾಮರಾಯ - ರಾಮರಾಯರಿಗೆ ನೀ ಪ್ರೇಮದ ಬಂಟನು ಭೀಮರಾಯ
- ಭೀಮನೆಂಬುವರಿಗೆ ಯಾತರ ಭಯವಿಲ್ಲ (ಸ-೧೯೩-೪)

೩೮೫೯. ರಾಮಾನುಜ - ತೊಡೆದ ದ್ವಾದಶ ನಾಮ ಶ್ರೀ ಚೂರ್ಣದಿ ಒಪ್ಪುವ ಒಡೆಯ ರಾಮಾನುಜರೆ ನಮೋ
- ರಾಮಾನುಜರೇ ನಮೋ ನಮೋ (ಬೆ-೪_೧)
- ರಾಮಾನುಜರೇ ನಮೋ ನಮೋ ಸ್ವಾಮಿ

ಲಕ್ಷ್ಮಣ ರೂಪ ನಮೋ ನಮೋ
- ರಾಮಾನುಜರೇ ನಮೋ ನಮೋ
(ಬೆ-೪_ಪ)

೩೮೬೦. ರಾಮೇಶ್ವರ - ಕಾಶಿ ವಾರಣಾಸಿ ಕಂಚಿ ಕಾಳಹಸ್ತಿ ರಾಮೇಶ್ವರ ಏಸು ದೇಶ ತಿರುಗಿದರೆ ಬಾಹುದೇನೊ ಅಲ್ಲಿ ಆಹೋದೇನೊ
- ದಾಸನಾಗೋ ಭವಪಾಶ ನೀಗೋ
(ಬೆ-೨೦-೧)

೩೮೬೧. ರಾಯ - ಅರವಿಂದನಯನ ಆದಿ ಕೇಶವರಾಯ ಕರುಗಳ ಸಹಿತ ಗೋವ್ಗಳ ತಿರುಹುತ
- ಯಾದವರಾಯ ಬೃಂದಾವನದೊಳು
(ಸ-೨೨೦-೩)
- ಎನ್ನ ಕಾಯೋ ಇಂದಿರಾಪ್ರಿಯ ಬಾಡದಾದಿ ಕೇಶವ ರಾಯ
- ಯಾದವಗಿರಿವಾಸನಹುದೋ
(ಸ-೨೧೯-೩)
- ತಾಯಿಯಪ್ಪಣೆಗೊಂಡು ಸೇವೆಗೆ ರಘುಪತಿ ರಾಯನಲ್ಲಿ ನಿಂದು
- ಎಷ್ಟು ಪೊಗಳಲಿ ನಾನು (ಸ-೫೩-೧)
- ಬಡನಡುವಿನ ಠಾವಿಗೆ ಸಿಲ್ಕಿ ಸುಖ ಪಡದಿರೆ ರಾಯನಾ ಹಿಡಿದು ತೋಳು ಕಟ್ಟಿದುದರಿಂದ
- ಚೆಲ್ವ ಕಂಗಳ ಚೆಲ್ವಕಾರ (ಸ-೯-೨)
- ಸಾಕು ಸಾಕು ಮನುಜ ಸೇವೆಯು ಶ್ರೀರಂಗ ರಾಯ ಸಾಕು ಸಾಕು ಮನುಜಸೇವೆಯು
- ಸಾಕು ಸಾಕು ಮನುಜ ಸೇವೆಯು
(ಬೆ-೪೨-ಪ)
- ಬಗೆಯಿಂದ ಜೂಜಲಿ ಸೋಲಿಸಿ ರಾಯನ ಬಗೆದು ಕೊಂದವನು ಶಕುನಿಯೊ ಪಾಂಡವರೊ
- ಬಂದಿದೆ ದೂರು ಬರಿದೆ (ಬೆ-೮೬-೧)
- ಆಯದಿ ದ್ವಾದಶಿವ್ರತವ ಸಾಧಿಸಿದಂಥ ರಾಯರೊಳು ಇರಿಸು ಕಂಡೆಯ ಎನ್ನನು
- ಶೇಷಶಯನ ನಿನ್ನ ಭಾಗವತರ
(ಬೆ-೨೭-೨)
- ಆರಿಗಂಜೆನೊ ನಾನು ಅಧಿಕಪುರಿ ಕಾಗೆನೆಲೆ ಯಾದಿಕೇಶವ ರಾಯ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೫)
- ಉನ್ನತದ ಕಾಗೆನೆಲೆಯಾದಿಕೇಶವ ರಾಯ ಚೆನ್ನ ಶ್ರೀರಂಗಪಟ್ಟಣದ ರಂಗೇಶ
- ಏಕೆ ನೀನಿಲ್ಲಿ ಪವಡಿಸಿದೆ (ಬೆ-೬೪-೫)
- ರಾಯ ತಾ ಮುನಿದರೆ ರಾಜ್ಯವನು ಬಿಡ ಬಹುದು
- ತೊರೆದು ಜೀವಿಸಬಹುದೆ (ಬೆ-೫೫-೧)
- ಒಲಿದವರ ಕಾಗೆನೆಲೆಯಾದಿಕೇಶವ ರಾಯನ ಸಲೆ ನಂಬಿದವರಿಗೆ ಮುಕುತಿಯಿತ್ತುದಿಲ್ಲವೆ
- ಬ್ರಹ್ಮಲಿಖಿತವ ಮೀರಿ ಬಾಳ್ವರು
(ಬೆ-೨೫-೫)
- ಕಲಿ ಬಾಡದಾದಿಕೇಶವರಾಯ ಚಕ್ರದಲಿ ತಲೆಗಳನು ಚೆಂಡಾಡಿಸುವ ಕಾಣೊ ಬೇಡ
- ಬೇಡ ಬೇಡ ಎಲೆಲೆ ದುರಿತಗಳಿರ
(ಬೆ-೨೯-೩)
- ಕಾಯಜಪಿತ ಕಾಗೆನೆಲೆಯಾದಿಕೇಶವರಾಯ ನೀ ಕಾಯಯ್ಯ ತಪ್ಪುಗಳೆಣಿಸದೆ
- ನನ್ನಿಂದ ನಾನೇ ಜನಿಸಿ ಬಂದೆನೆ
(ಬೆ-೫೪-೫)
- ಕಂತುಪಿತ ಕಾಗೆನೆಲೆಯ ಆದಿಕೇಶವ ರಾಯನ ಸಂತೋಷದಲಿ ಪಾಡಿ ಸುಖಿಯಾಗೊ ಮನುಜ
- ಆರು ಸಮಯಕ್ಕೊದಗಲಿಲ್ಲ
(ಬೆ-೩೨-೫)
- ಕಾಟಿಗೆ ಕಾಸು ಕಾಣದರು ರಾಯರ ಪಂಕ್ತಿ ಯೂಟ ಬಯಸಿದಂತೆ ನಾ ಬೇಡಿದೆ
- ಶೇಷಶಯನ ನಿನ್ನ ಭಾಗವತರ
(ಬೆ-೨೭-೫)
- ಕಾಗೆನೆಲೆಯ ಆದಿಕೇಶವ ರಾಯ
- ಮುಟ್ಟದಿರೊ ಎನ್ನನು (ಬೆ-೧೦೨-೩)
- ಕಾಗೆನೆಲೆಯಾದಿಕೇಶವ ರಾಯನಮರ ಸಂಯೋಗಿ ಒಲಿದುಪ್ಪವಡಿಸು ಹರಿಯೆ
- ತಂಗದಿರನನಿಮಿಷ ತಾರಕೆಗಳು
(ಬೆ-೧೬೯-೭)
- ಕೀರ್ತಿಯಲಿ ಹರಿಶ್ಚಂದ್ರರಾಯನೋ ನೀನು
- ಬೆರೆಯದಿರು ಬೆರೆಯದಿರು
(ಬೆ-೧೪೩-೬)
- ಗೋಪಿಯರ ಮೋಹ ಸಲಿಸಿದೆ ಚೆಲುವ ಶ್ರೀಪತಿ ಆದಿಕೇಶವರಾಯ ಮೆರೆದೆ
- ನಿನಗಿಂತ ಕುಂದೇನೊ (ಬೆ-೮೭-೫)
- ತನ್ನಯ ಬೀಯಗನ ತಲೆಯನ್ನು ಕಾಯಿ ದಂಥ ರಾಯನ ಕರೆದು ತೋರೆ

- ರಮಣಿ ಕೇಳೆಲೆ ಮೋಹನ (ಬೆ-೯೬-೧)
- ಚಂದ್ರವಂಶದ ರಾಯನನುಜ ಸಖನಾದವನ
- ಕಾವನಯ್ಯನ ಕಳುಹು (ಬೆ-೧೫೩-೧)
- ಧರಣಿಪ ತ್ರಿಶಂಕು ಆಳಿದ ರಾಯ ತಾನೆಲ್ಲಿ
-ಇರಬಂದುದಿಲ್ಲ ಸಂಸಾರ (ಬೆ-೧೧೩-೧)
- ಮಚ್ಛ್ಯ ರೂಪದಿಂದ ಪೋಗಿ ಅವನ ಕೊಂದ ಅಚ್ಯುತರಾಯನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಯೋ (ಸ-೧೧೦-೧)

**೩೮೬೨. ರಾವಣ/ರಾವಣಾಸುರ/ರಾವಣೇಶ್ವರ**
- ಅಂದು ಕೌಸಲ್ಯಗರ್ಭ ಚಂದ್ರಮನಾಗಿ ಬೆಳಗಿ ಕೊಂದೆ ರಾವಣ ಕುಂಭಕರ್ಣಾದಿಗಳನೆಲ್ಲ
- ಯಾದವಗಿರಿವಾಸನಹುದೋ (ಸ-೨೧೯-೩)
- ಅಂದು ರಾವಣ ವಿಭೀಷಣನ ನೂಕಲು ಕಂಡು ಇಂದಿರಾರಮಣ ನೀ ಕಾಯ್ದೆಯಂತೆ
- ಆ ವೇಳೆಯಲ್ಲಿ ಆರಾರ ಕಾಯ್ದೆಯೊ (ಬೆ-೬೬-೩)
- ದುರುಳ ರಾವಣನ ಸಂಪದವೆ ನಿನಗೆ
- ಮೆರೆಯದಿರು ಮೆರೆಯದಿರು (ಬೆ-೧೪೮-೧)
- ಸೇತುವೆ ದಾಟಿ ಲಂಕೆಗೆ ಪೋಗಿ ಹನುಮಂತ ಖ್ಯಾತಿಯಲಿ ರಾವಣನ ಪುರವನಳಿಸಿ
- ಪ್ರಾಚೀನ ಕರ್ಮವಿದು (ಬೆ-೧೦೭-೧)
- ಥಲದೊಳಗೆ ರಾವಣನೊ ಬಲದಲ್ಲಿ ವಾಲಿಯೋ
- ಬೆರೆಯದಿರು ಬೆರೆಯದಿರು (ಬೆ-೧೪೩-೩)
- ಶರಧಿಮಧ್ಯದೊಳಿದ್ದ ರಾವಣಾಸುರನೆಲ್ಲಿ
- ಇರಬಂದುದಿಲ್ಲ ಸಂಸಾರ (ಬೆ-೧೧೩-೧)
- ಚೇತನದ ರಾವಣೇಶ್ವರ ಕುಂಭಕರ್ಣ ಸತ್ತ್ವಾತಿಶಯ ರಕ್ಕಸರ ಇರಿದೊರಗಿಸಿ
- ನೋಡಯ್ಯ ನಿನ್ನ ದಾಸರ (ಬೆ-೮೫-೭)
- ರಾವಣಗಾಗಿ ಅಂಬುತೆಗೆದು ಹೂಡ್ದಾ
- ನಾರಾಯಣನೆ ಈತ (ಸ-೧೩೮-೧)
- ತಮ್ಮನ ನುಡಿ ಕೇಳದೆ ರಾವಣನು ಕೆಟ್ಟ
- ನಾ ನಿಮ್ಮ ದಾಸರ ದಾಸ (ಸ-೧೩೪-೪)
- ತನ್ನ ವಂಶದ ಬಲವುಳ್ಳ ರಾವಣ ಶಿರಕೆ ಘನ್ನ ರಾಘವಸ್ವಾಮಿ ಶರವ ತೊಡುವಾಗ
- ಆವ ಬಲವಿದ್ದರೇನು (ಬೆ-೧೩೩-೩)
- ತ್ರಿಣಯನನೊಲಿದ ರಾವಣನ ಗರ್ವವ ರಣಾಂಗಣದೊಳೊರಗಿಸಿದೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೭)

**೩೮೬೩. ರಾವುತ/ರಾಹುತ** - ಕ್ಷಿತಿಯೊಳು ರಾವುತನಾದ ಬಾಡದಾದಿಕೇಶವನ ತಂದು ತೋರೆ
- ಹರಿಮುಖ ಹರಿವಾಣಿ (ಬೆ-೯೮-೩)
- ಒಳ್ಳೆಯ ರಾವುತನಾಗಿ ಮ್ಲೇಚ್ಛರ ಡೊಳ್ಳ ಹೊಟ್ಟೆಯ ಮೇಲೆ ಒದ್ದಾನ್ಯಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೧೦)
- ಓಜೆಯ ಮರಕತ ತೇಜಿಯನೇರಿ ಕನೋಜ ರಾವುತನಾದೆ ಗೋವಿಂದ
- ಪರಮಪುರುಷ ಹರಿ ಗೋವಿಂದ (ಬೆ-೩೯-೧೦)
- ಕುದುರೆವಾಹನನಾಗಿ ಕುಂಭಿನಿಯ ಮೇಲೆ ತನಗಿದಿರಾದ ರಾವುತರನಿರಿದೊರಗಿಸಿ
- ನೋಡಯ್ಯ ನಿನ್ನ ದಾಸರ (ಬೆ-೮೫-೧೦)
- ಧೀರ ರಾಹುತ ಪರಿವಾರದಹಂಕಾರ ಭಾರ ವನು ತೆಗೆದೆಯೋ ಹರಿಯೆ
- ಹರಿ ನಿನ್ನ ಪರಮಾರ್ಥ
- ದೊಡ್ಡ ದೊಡ್ಡ ಕುದುರೆಯನೇರಿ ನೇಜೆ ಹೊತ್ತು ರಾಹುತನಾಗಿ ಹೊಡೆದಾಡಿ ಸಾಯು ವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
- ಎಲ್ಲರೂ ಮಾಡುವುದು ಹೊಟ್ಟೆಗಾಗಿ (ಬೆ-೧೩೪-೫)

**೩೮೬೪. ರಾಶಿ** - ರಾಶಿ ವಿದ್ಯೆಯ ಬಲ್ಲ ರಮಣೀ ಹಂಬಲನೊಲ್ಲ ಭಾಷಿಗನಿವನಾರಮ್ಮ
- ನಮ್ಮಮ್ಮ ಶಾರದೆ (ಬೆ-೧_೩)
- ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರ ಕೂಡಿ ಆಣಿಮುತ್ತ ಹಿಡಿದು ಹಿಡಿದು ಬಿಡುವ ಭ್ರಮಿತ ನಾನಯ್ಯ
- ಎಳ್ಳು ಕಾಳನಷ್ಟು ಭಕ್ತಿ (ಬೆ-೧೨-೨)
- ಅಪ್ಪರೂಪವಾದ ಕಜ್ಜಾಯ ರಾಶಿಗಳ ಭಪ್ಪನ್ನ

ದೇಶಕೆ ಮಾರುವ ಶೆಟ್ಟಿ
- ಬಂದೆವಯ್ಯ ಗೋವಿಂದಶೆಟ್ಟಿ (ಬೆ-೧೫೧-೧)
- ಗಳಿಸದಿರು ನೀ ದುರಿತ ರಾಶಿಗಳನು
- ನೆಚ್ಚದಿರು ಸಂಸಾರ ನೆಲೆಯಲ್ಲ (ಬೆ-೧೧೬-೧)
- ಆ ಬೆಟ್ಟದಂತೊಟ್ಟಿರ್ದ ವಸ್ತ್ರರಾಶಿಗಳೆಲ್ಲ
- ವಾಸುದೇವಾಯ ನಮೋ (ಬೆ-೯೦-೧೧)

೩೮೬೫. ರಾಹು - ಸೂರ್ಯಚಂದ್ರಮರಂತೆ ರಾಹುವಟ್ಟುಳಿಯಂತೆ
- ಆರಿಗಾದರು ಪೂರ್ವ ಕರ್ಮಬಿಡದು (ಬೆ-೧೦೮-೧)

೩೮೬೬. ರಿಕ್ತ - ರಿಕ್ತ ಹಸ್ತದಿಂದ ಮನೆಯ ಸೇರುವೆ ಈ ಉದರಕಾಗಿ ಮತ್ತೆ ಕಂಡ ಕಡೆಗೆ ತಿರುಗುವೆ
- ಸಾಕು ಸಾಕು ಮನುಜ ಸೇವೆಯು (ಬೆ-೪೨-೧)

೩೮೬೭. ರಿಪು - ಸಾಧಿಸುವಸಮ ಚಕ್ರವ್ಯೂಹ ವನೆ ಬಲಿದು ರಿಪು ಸಾಧಕರ ಷಡುರಥರ ಕೈಲಿ ಕೊಲ್ಲಿಸಿದೆ
- ನೀನಾವ ಬಾಂಧವನೊ (ಬೆ-೭೮-೩)

೩೮೬೮. ರಿಪುಗಂಡ - ಕಂಡೆನಾ ತಂಡತಂಡದ ಹಿಂಡು ದೈವ ಪ್ರಚಂಡ ರಿಪುಗಂಡ ಉದ್ದಂಡ ನರಸಿಂಹನ
- ಕಂಡೆ ನಾ ತಂಡತಂಡದ ಹಿಂಡು ದೈವ (ಬೆ-೮೪-ಪ)

೩೮೬೯. ರಿಪುಮಾನ್ಯ - ಜಯಜಯಾಸನ ಶುಕ ಪರಾಶರ ರಿಪುಮಾನ್ಯ ಪಯೋಜಸಂಭವ ಸಂತತಿ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೬)

೩೮೭೦. ರುಂಡ - ರಣದಲ್ಲಿ ತಲೆಹೊಯ್ದು ರುಂಡವು ಬೀಳಲು ಹೆಣನೆದ್ದು ಕುಣಿದಾಡಿತು
- ಮುತ್ತುಗಳ ಹಣ್ಣು ಕಾಯಾದ ಬಳಿಕ (ಸ-೨೮೯-೩)

೩೮೭೧. ರುಕುಮಾಂಗದ/ರುಕ್ಮಾಂಗದ - ರುಕುಮಾಂಗದ ಬಲ್ಲ ಋಷಿ ಪರಾಶರ ಬಲ್ಲ ಮಕರಕುಂಡಲಧರ ಮಹಾತ್ಮನೆಂಬುದನು
- ಬಲ್ಲವರೆನಿಪರು ಬಲ್ಲವರರಿಯರು (ಬೆ-೭೩-೨)
- ರಂಜಕದ ಮೋಹಿನಿಯ ಗೆಲಿದ ರುಕು ಮಾಂಗದನು ಧನಂಜಯನಾತ್ಮಸಂಭವನ ಸಂಜಾತ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೩)
- ವಿಕಟ ವಧುವಿನ ಮಾಯೆ ಗೆಲಿದ ರುಕು ಮಾಂಗದನು
- ಸಿಂಗರದ ಸಿರಿಧರನೆ (ಬೆ-೧೬೭-೨)
- ವಿದುರ ಪ್ರಹ್ಲಾದ ರುಕ್ಮಾಂಗದ ವಿಭೀಷಣರು ಮದಗಜ ಅಜಾಮಿಳ ರುದ್ರ
- ಪೂಸರನ ಜನಕನೇ (ಬೆ-೧೬೮-೩)
- ದೃಢಮನಸಿನಲ್ಲಿ ರುಕ್ಮಾಂಗದನೊ ನೀನು
- ಬೆರೆಯದಿರು ಬೆರೆಯದಿರು (ಬೆ-೧೪೩-೨)

೩೮೭೨. ರುಕುಮಿಣಿಯರಸ/ರುಕುಮಿಣಿಯರಸು (ಕೃಷ್ಣ) - ಅಕಳಂಕ ಶ್ರೀಹರಿ ಭಕುತಿಗೆ ಮನ ಬೆಳೆದು ರುಕುಮಿಣಿಯರಸ ಕೈವಶವಾದನೆನಗೆ
- ಬದುಕಿದೆನು ಬದುಕಿದೆನು (ಸ-೧೭೧-೨)
- ರುಕುಮಿಣಿಯರಸು ನೀನಿಂದುಪ್ಪವಡಿಸಯ್ಯ ಹರಿಯೆ
- ಪೂಸರನ ಜನಕನೇ (ಬೆ-೧೬೮-೪)

೩೮೭೩. ರುಕ್ಮ - ರುಕ್ಮನನುಜೆಯಾಳಿದವನ ಮೂರ್ತಿಯನ್ನು ನೋಡಿರೊ
- ಈತನೀಗ ವಾಸುದೇವನು (ಬೆ-೭೫-೧)

೩೮೭೪. ರುಕ್ಮಿಣಿ - ಸತಿ ರುಕ್ಮಿಣಿ ರಾಧೆಯ ಚುಂಬಿಸಿದಾತನ ಗೋವಿಂದ ಎನ್ನಿರೊ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೨)
- ಅಂತರಾತ್ಮಕ ಕೃಷ್ಣ ದ್ವಾರಕಾಪುರದೊಳಗೆ ಕಾಂತೆ ರುಕ್ಮಿಣಿ ಸತ್ಯಭಾಮೆಯರ ಒಡನೆ ಏಕಾಂತ ಭವನದೊಳು ತಿಳಿದು
- ವಾಸುದೇವಾಯ ನಮೋ (ಬೆ-೯೦-೯)
- ಶ್ರೀ ವಾಸುದೇವನಾಜ್ಞಾಪಿಸಿದ ರುಕ್ಮಿಣಿಗೆ
- ವಾಸುದೇವಾಯ ನಮೋ (ಬೆ-೯೦-೧೪)

೩೮೭೫. ರುಚಿ - ಷಡುರಸದನ್ನಕೆ ನಲಿದಾಡುವ ಜಿಹ್ವೆ ಕಡುರುಚಿಗೊಂಡರಾರುಚಿ ನಿನ್ನದಯ್ಯ
- ತನು ನಿನ್ನದು ಜೀವನ ನಿನ್ನದು

(ಬೆ-೫೭-೨)
**೩೮೭೬. ರುಚಿಗೊಳ್ಳು** - ಷಡುರಸದನ್ನಕೆ ನಲಿದಾಡುವ ಜಿಹ್ವೆ ಕಡುರುಚಿಗೊಂಡರಾರುಚಿ ನಿನ್ನದಯ್ಯ
- ತನು ನಿನ್ನದು ಜೀವನ ನಿನ್ನದು (ಬೆ-೫೭-೨)
**೩೮೭೭. ರುದ್ರ** - ಸುಳಿದ ವಿಷ್ಣು ಬ್ರಹ್ಮನೆಂಬ ಹಣೆಯ ಕಣ್ಣ ರುದ್ರನೆಂಬ ಮಣೆಯಗಾರ ರೆಪ್ಪತ್ತೇಳು ಕೋಟಿ ಸಂಖ್ಯೆಯು
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೬)
- ನಗಜೆಯಾಳ್ದನ ಬ್ರಹ್ಮೇತಿ ಬಂದು ಕಾಡಲಾಗಿ ರುದ್ರಾದಿಗಳೇನ ಮಾಡುತಿರ್ದರಾ ಶೈಲದೊಳಗೆ
- ಬಂಧುಗಳದಾರಿಗಾರಿದ್ದರೇನು (ಸ-೧೭೩-೧)
- ಮಸ್ತಕದಲಿ ರುದ್ರ ಪಾದದಲ್ಲಿ ವಿಷ್ಣು ಮಸ್ತಕ ಮಹೇಶ ಎಂತೆಂಬಿರಿ
- ಶಂಕರನಾರಾಯಣ ಬಿಡು (ಬೆ-೧೭೫-೭)
- ಕಮಲಜ ಹರಿ ರುದ್ರ ವಿಮಲ ಸುರರು ಸಾಧು ಸಮರಲ್ಲವೆಂಬುವ ಶ್ರುತಿ ಸಾರಿ ಬಂತು ಸ್ವಾಮಿ
- ಕ್ಷಮಿಸುವುದೆನ್ನ ತಪ್ಪುಗಳ (ಬೆ-೬೧-೮)
- ಮಂಗಳಂ ಬುದ್ಧ ಕಲ್ಕಿಗೆ ಬ್ರಹ್ಮ ರುದ್ರೇಂದ್ರ ವಂದಿತಗೆ ಮಧುವೈರಿಗೆ
- ವಾಸುದೇವಾಯ ನಮೋ (ಬೆ-೯೦-೧೫)
- ವಿದುರ ಪ್ರಹ್ಲಾದ ರುಕ್ಮಾಂಗದ ವಿಭೀಷಣರು ಮದಗಜ ಅಜಾಮಿಳ ರುದ್ರ
- ಪೂಸರನ ಜನಕನೇ (ಬೆ-೧೬೮-೩)
- ಅಂಬುಜೋದ್ಭವ ರುದ್ರರ ಕಂಡೆ ಶಂಬರಾರಿ ಪಿತನೆ ರಂಗಶಾಯಿ
- ಇಷ್ಟು ದಿನ ಈ ವೈಕುಂಠ (ಬೆ-೨೮-೪)
**೩೮೭೮. ರುದ್ರವೀಣೆ** - ವರ ರುದ್ರವೀಣೆಗಳ ಪಿಡಿದು ಸನಕಾದಿಗಳು ಹರಷದಲಿ
- ಪೂಸರನ ಜನಕನೇ (ಬೆ-೧೬೮-೨)
**೩೮೭೯. ರೂಢಿ** (ಭೂಮಿ) - ಕೂಡಿದ ಶಿರವರಿದು ರೂಢಿಗೀಶ್ವರ ಕೆಟ್ಟ
- ನಾ ನಿಮ್ಮ ದಾಸರ ದಾಸ (ಸ-೧೩೪-೨)
- ರೂಢಿಯೊಳಗೆ ಶುದ್ಧ ಮೂಢ ಈ ಕಾಡುಕಲ್ಲುಗಳನ್ನು ನಂಬಲಿಬೇಡ
- ಎಲ್ಲ ನೋಡಿದರಲ್ಲ ರಾಮ (ಸ-೫೧-೫)
- ರೂಢಿಯೊಳು ಬಾಳುವರ ಸಹಿಸದನೆ ದ್ರೋಹಿ
- ದ್ರೋಹಿಗಳ ವಿವರವನು ನಾ ಪೇಳ್ವೆನಯ್ಯ (ಸ-೧೨೩-೧)
- ರೂಢಿಯೊಳತಿ ಸೇವಕನಾದ ಗರುಡನಿಗೆ ಬೋಡು ಮರದ ಮೇಲೆ ಪ್ರಾಪ್ತಿಯಾಯಿತು
- ನಮಗೆಲ್ಲ ಮನೆಗಳಯ್ಯ (ಸ-೧೩೨-೩)
- ಹದ್ದುಕಾಗೆಗಳು ಕಾದಾಡಿದುವು ಮೃಗಜಾತಿ ಚಲಿಸಿದುವು ಶಿಲೆಪ್ರತಿಮೆ ರೂಢಿ ಗಡಗಡ ನಡುಗಿತು
- ವಾಸುದೇವಾಯ ನಮೋ (ಬೆ-೯೦-೧೨)
- ರೂಢಿಯಲಿ ಗುರುದ್ರೋಹವನು ಮಾಡಿದವನ ಮೊಗನೋಡಿದಾಗಲೆ ಪ್ರಾಯಶ್ಚಿತ್ತವುಂಟು
- ಆವುದೊಳ್ಳೆಯದೊ ನಿನ್ನಂಗ (ಬೆ-೬೮-೩)
- ರೂಢಿಗೀಶನ ಸೇವೆ ಮಾಡಿದ ಮುಕ್ತರ ಈಡಿಲ್ಲವೆಂಬುದನು ಇತರರರಿವರೆ ಸ್ವಾಮಿ
- ಕ್ಷಮಿಸುವುದೆನ್ನ ತಪ್ಪುಗಳ (ಬೆ-೬೧-೨)
- ರೂಢಿಯ ಕದ್ದುಕೊಂಡೋಡುವ ದೈತ್ಯ ನೀಡಿತಿವಿದು ಕೋರೆದಾಡೆಯಿಂದ
- ತಾಳಲ್ಲಲ್ಲಲ್ಲಯ್ಯೋ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೩)
- ದೂಡಿ ಧ್ವಂಸವ ಮಾಡಿ ರೂಢಿಯ ತಂದ ಕಾಡು ವರಾಹ ರೂಪಿ ಮಾಸಾಳಮ್ಮ
- ತಾಳಲ್ಲಲ್ಲಲ್ಲಯ್ಯೋ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೩)
**೩೮೮೦. ರೂಢಿಪಾಲ** (ರಾಜ)- ಬೇಡುತಿದೆ ದಾನವನು ನೀಡುತಿದೆ ಪಾದವನು ರೂಢಿಪಾಲರ ಕಂಡು ಕೊಲ್ಲುತಿದೆಕೊ
- ಮಗುವ ತಡೆಯಬಾರದೆ ಮಾನಿನಿಯರು (ಸ-೧೯೭-೨)
**೩೮೮೧. ರೂಪ/ರೂಪು** - ಅತಿಶಯದಿಂದ ಸತಿ ರೂಪ ತಾಳ್ದನ ಗೋವಿಂದ ಎನ್ನಿರೊ
- ಮಂದರಧರ ಪಾವನ ಇಂದಿರಾರಮಣ (ಸ-೨೦೦-೨)

- ಮಾಡಲು ನೀನಾರು ಮಾಡೆನಲು ನೀನಾರು ಮಾಡದವರಿಂದ ಮಾಡಿಪ ಮೋಡಿರೂಪ
- ಕೊಡಲು ನೀನಾರು (ಸ-೯೨-೧)
- ತಿಳಿದು ಕೂರ್ಮರೂಪಾಗಿ ಮಂದರವನು ಪೊತ್ತು ಉಳಿಸಿದೆ ಲೋಕವನುನ್ನತ ಪರಾಕ್ರಮಿ
- ಯಾದವಗಿರಿವಾಸನಹುದೋ (ಸ-೨೧೯-೧)
- ದಶಮತಿವಂದಿತ ದಶಶಿರ ಸಂಹರ ದಶ ರೂಪದಲಿ ಖಳ ದಶನ ಮೂರುತಿಯೆಂದು ಹೆಸರು ಹೇಳುವರು
- ಬಾರೊ ಭಾಗ್ಯದ ನಿಧಿಯೆ (ಸ-೧೮೨-೨)
- ಪಶುಪತಿಯ ರೂಪಿನ ಬಲದ ಶಿಶುಪಾಲನ ಅಸುರಮರ್ದನ ಕೃಷ್ಣ ಶಿರವ ಭೇದಿಸುವಾಗ
- ಆವ ಬಲವಿದ್ದರೇನು (ಬೆ-೧೩೩-೧)
- ಸಣ್ಣ ಸೀರೆಯ ನಲುವೆಣ್ಣುರೂಪಾದನ ಶ್ರೀಕೃಷ್ಣ ಎನ್ನಿರೊ
- ವನಜಮುಖಿಯರ ಮನದಿಷ್ಟಾರ್ಥವ (ಬೆ-೮೦-೧)
- ಗಂಡುವೆಣ್ಣಿನ ರೂಪುವೆತ್ತು ರಾಜಿಸುವವನು
- ಸಿಂಗರದ ಸಿರಿಧರನೆ (ಬೆ-೧೬೭-೩)
- ನುತ ಬೌದ್ಧ ರೂಪದಿ ಬಹು ಭಂಗಪಡಿಸಿದ ರತಿಪಿತನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೯)
- ಮಚ್ಛ್ಯ ರೂಪದಿಂದ ಪೋಗಿ ಅವನ ಕೊಂದ ಅಚ್ಯುತರಾಯನೆಂಬ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೧
- ಮೂರು ರೂಪವ ತಾಳಿ ಮಹಾಯೋಗ್ಯರು ಗಳಿಗೆ ಸಾರ ತತ್ತ್ವವ ಪೇಳ್ದೆ
- ಎಷ್ಟು ಪೊಗಳಲಿ ನಾನು (ಸ-೫೩-೩)
- ಧರ್ಮಕ್ಕೆ ಸಾಕ್ಷಾತ್ ರೂಪಾಗಿ ತೋರುವನ ನಿರ್ಮಲಾತ್ಮಕವಾಗಿ ಥಳಥಳಿಸುವವನ
- ನೆನೆಯಬಾರದೆ ಮನವೆ ಪರಮಪಾವನನ (ಸ-೧೫೨-೨)
- ಸಾಕಾರ ರೂಪ ಸರ್ವೋತ್ತಮ ನೀ ಕರುಣಾಕರನೆಂಬ ಪೆಂಪುಂಟಾದಡೀಗೆನ್ನ
- ಕಡಹಾಯಿಸೊ ಕಮಲಲಲೋಚನನೊಲ್ಲೆ (ಬೆ-೬೨-೧)
- ಅಣುಮಯ ರೂಪ ಕಾಣೆ ನಿನ್ನ ಮಗ ಚಿನುಮಯ ರೂಪ ಕಾಣೆ
- ನೆರೆದು ಗೋಪಿಯರೆಲ್ಲರು (ಬೆ-೧೦೩-೧೦)
- ಮಾಯಕಾರಗೆ ರೂಪ ಕಾಯ ಬಡಲಿಗ ಚೆಲ್ವ ಕಾಯಗಿರಿ ಪೊತ್ತವನು ಕಡು ಧರ್ಮಿಯು
- ಮೂವರೇರಿದ ಬಂಡಿ (ಬೆ-೧೬೦-೨)
- ಹರಿಯೆನಲು ಹರಿ ರೂಪ ತಾಳಿದೆ ಹರಿ ಯೊಳಡಗಿದೆ ಮತ್ತೆ
- ಭವಭಯವಿನಾಶ ಭೋ (ಬೆ-೪೧-೧)
- ವ್ಯಾಸನ ಜನನಿಯ ವಾಸರೂಪ ತಾಳ್ದನು ದೇಶದೊಳಗೆ ಬಲು... ಉಳ್ಳವನು
- ಸೀತಾ ಪತಿ ರಘುನಾಥ (ಬೆ-೧೦೦-೧)
- ಕಣ್ಣು ಕೆಟ್ಟ ಮೇಲೆ ಕಡು ರೂಪ ಚೆಲ್ವಿಕೆಯೆ
- ಬಾಯಿ ನಾರಿದ ಮೇಲೆ (ಬೆ-೧೪೨-೧)
- ಏತರವನೆಂದು ಪೇಳಲಿ ಜಗನ್ನಾಥ ಮಾಡಿದ ನನ್ನ ನರರೂಪಕಾಯವ
- ಏತರವನೆಂದು ಪೇಳಲಿ (ಬೆ-೧೨೨-ಪ)
- ರಾಮಾನುಜರೇ ನಮೋ ನಮೋ ಸ್ವಾಮಿ ಲಕ್ಷ್ಮಣ ರೂಪ ನಮೋ ನಮೋ
- ರಾಮಾನುಜರೇ ನಮೋ ನಮೋ (ಬೆ-೪_ಪ)
- ಬೇರೊಂದು ರೂಪದಿ ಜನಿಸಿ ಖಳನ ಕೊಂದು ಧಾರಿಣಿಸುರರಿಗಿತ್ತನ
- ಏಣನಯನೆ ಏಣಭೋಜಮಧ್ಯಳೆ (ಬೆ-೯-೫)
- ಕಾಲ ತೂಗಿ ನೋಡುತ್ತ ಗಜ ಉನ್ಮತ್ತ ಕಾಲಿ ನಿಂದಲಿ ಕೊಲುವ ರೂಪದಿ
- ಇಂದು ನೀ ಕರೆದುತಾರೆ (ಬೆ-೯೨-೧)
- ಘೋರಸಂಸಾರ ಭವದೂರ ಋಷಿಜನ ಮನೋಹಾರಸಾಕಾರ ಸಿರಿಧರ ರೂಪನೆ ನಮೋ
- ನಾರಾಯಣಾ ನಮೋ (ಬೆ-೫೧-ಅ)
- ರಂಗರೂಪವ ತೋರಿ ಭಂಗ ಭವಗಳನಳಿದು ಡಂಗುರವ ಹೊಯ್ಯೊ ನಿನ್ನ ಡಿಂಗರಿಗನೆಂದು
- ಹೂವ ತರುವರ ಮನೆಗೆ (ಬೆ-೪೩-೧)
- ಹರಿಯ ರೂಪವ ತಾಳಿ ಇರುಳು ದೈತ್ಯನ

ಕೊಂದ ಸಿರಿಧರನು ಕಾಗೆನೆಲೆ ಆದಿಕೇಶವ ರಾಯ
- ಮೂವರೇರಿದ ಬಂಡಿ (ಬೆ-೧೬೦-೩)
- ನವಮೋಹನಾಂಗಿಯರ ರೂಪವ ಕಣ್ಣಿಂದ ಎವೆಯಿಕ್ಕದಲೆ ನೋಡುವ ನೋಟ ನಿನ್ನದಯ್ಯ
- ತನು ನಿನ್ನದು ಜೀವನ ನಿನ್ನದು (ಬೆ-೫೭-೧)

೩೮೮೨. ರೂಪಿ - ದೂಡಿ ಧ್ವಂಸವ ಮಾಡಿ ರೂಢಿಯ ತಂದ ಕಾಡು ವರಾಹ ರೂಪಿ ಮಾಸಾಳಮ್ಮ
- ತಾಳಲ್ಲಲ್ಲಲ್ಲಲ್ಯೋ ಮಾಸಾಳಲ್ಲಲ್ಲಲ್ಲಲ್ಯೋ (ಸ-೧೧೦-೩)
- ರಮಣಿಯ ತಂದೆ ವರಹರೂಪೀ ಗೋವಿಂದ ಸಲಹೆನ್ನನು
- ಗೋವಿಂದ ಸಲಹೆನ್ನನು (ಬೆ-೮೮-೧)

೩೮೮೩. ರೇಣು - ಅಣುರೇಣು ಪರಿಪೂರ್ಣ ಮೂರುತಿಗೆ ನಾ ಪ್ರದಕ್ಷಿಣೆಯೆಂತು ಸುತ್ತಿ ಬರಲಿ
- ಆವ ಪರಿಯಲಿ ನಿನ್ನನೊಲಿಸಿ (ಬೆ-೩೭-೩)
- ಅಣುರೇಣುತೃಣಗಳಲಿ ಪರಿಪೂರ್ಣನೈ ನೀನು
- ಏನೆಂದು ಕೊಂಡಾಡಿ ಸ್ತುತಿಸುವೆನೊ (ಬೆ-೬೩-೨)
- ಅಣುರೇಣುತೃಣದೊಳು ಪರಿಪೂರ್ಣ ನಾದನ ಶ್ರೀರಾಮನೆನ್ನಿರಿ
- ಶ್ರೀರಾಮನೆನ್ನಿರಿ ಮೂಜಗದವರೆಲ್ಲ (ಬೆ-೮೧-೩)
- ಇಂತು ಅಣುರೇಣುತೃಣಕಾಷ್ಠದೊಳಗೆಲ್ಲ ಸಂತೋಷವಾಗಿಹುದು ನಿನ್ನ ಸ್ಮರಣೆ
- ಜಗದಂತರ್ಯಾಮಿ ಎಂತೆಂದು (ಬೆ-೫೮-೫)

೩೮೮೪. ರೇಣುಕೆ - ರೇಣುಕೆಯ ಬಸುರಿನಲಿ ಜನಿಸಿ ಪಿತನಾಜ್ಞೆಯನು ಮಾಣಬಾರದು ಎಂಬ ಮತವ ಪಿಡಿದು
- ನೋಡಯ್ಯ ನಿನ್ನ ದಾಸರ (ಬೆ-೮೫-೬)

೩೮೮೫. ರೊಕ್ಕ - ಹೊತ್ತುಕೊಂಡು ತಿರುಗಿದೆ ರೊಕ್ಕದಾ ಪ್ರಾಣಿಯನ್ನು
- ಓಹೋ ಎನ ಜೀವ ಮೈಯೆಲ್ಲ ನವಗಾಯ (ಸ-೭೧-೨)
- ಒಕ್ಕಲಿಗಾಗದ ಗವುಡ ರೊಕ್ಕವ ಪಡೆವಾ ಕೊರಗ
- ಅಹುದಾದಡಹುದೆನ್ನಿ (ಬೆ-೧೩೨-೨)
- ರೊಕ್ಕವಿಲ್ಲದವಗೆ ಬಂಧುಗಳು ಇದ್ದರೇನು
- ಆರು ಬಾಳದರೇನು (ಬೆ-೩೦-೨)

೩೮೮೬. ರೊಟ್ಟಿ - ನುಸಿಯೊಂದು ರೊಟ್ಟಿಯ ಸುಡುವುದ ಕಂಡೆ ಆಡೊಂದು ಮದ್ದಳೆ ಬಡಿವುದ ಕಂಡೆ
- ಲಟಪಟ ನಾ ಸಟೆಯಾಡುವನಲ್ಲ (ಬೆ-೧೫೯-೩)

೩೮೮೭. ರೋಗ - ಅಷ್ಟವುದದಿಂದ ಮರೆವವಗೆ ಬೆರಗಿನ ರೋಗ
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೪)
- ಸರಸವಿಲ್ಲದ ಸತಿಯ ಭೋಗ ತನುರೋಗ
- ಎನ್ನ ನುಡಿ ಹುಸಿಯಲ್ಲ (ಸ-೪೭-೧)
- ಮುಸುಕಿಕವಿವ ವ್ಯಾಘ್ರದಂತೆ ಅಡಗಿ ಮುಪ್ಪುಗೊಂಬ ರೋಗ
- ಎಷ್ಟು ಪ್ರೀತಿಯೊ ಮನಕೆ (ಸ-೫೨-೧)
- ರೋಗದಲಿ ಆವಾಗಲು ಮುಲುಗುವನ ಸಂಗ
- ಸಜ್ಜನರ ಸಂಗದೊಳಗಿರಿಸೆನ್ನ (ಸ-೨೪೧-೩)
- ಹಿರಿಯರನು ಜರೆದವಗೆ ಪೀನಾಶಿ ರೋಗವು
- ಧರ್ಮವೆಂದೆನಿಪ ಮಾರ್ಗವನು ಬಿಟ್ಟು (ಸ-೧೨೪-೧)
- ಅಮರರಿಗೊದಗದ ಯಾಗ ಆಡಿನ ಮೇಲಣ ರೋಗ
- ಅಹುದಾದಡಹುದೆನ್ನಿ (ಬೆ-೧೩೨-೫)
- ನಿಮ್ಮ ರೋಗದ ಮೂಲವ ಕೆಡಿಪ ಔಷದವಿದು ಶಿವ ಶಿವ ಎನ್ನಿರೊ
- ಶಿವ ಶಿವ ಶಿವ ಎನ್ನಿರೊ (ಬೆ-೩_೧)

೩೮೮೮. ರೋಪಣಾಸಿ (ರೋಪಣ + ಅಸಿ ?) (ಬಾಣ+ಕತ್ತಿ) - ಎಸೆವ ರೋಪಣಾಸಿ ಪೆಸರ್ವಕ್ಕಿ ಝೇಂಕರ ಮಾಡೆ
- ಸಿಂಗರದ ಸಿರಿಧರನೆ (ಬೆ-೧೬೭-೧)

೩೮೮೯. ರೋಮ - ತೃಣವ ಹಿಡಿದು ಬರೆಯುತಿಪ್ಪ ಒಂದು ರೋಮ ಕೂಪದಲ್ಲಿ

ಕುಣಿಕೆಯೊಳಗೆ ಜಗದ ಜೀವರಾಶಿ ಎಲ್ಲವ
- ಎರಡು ಸಾವಿರದ ಜಿಹ್ವೆಯುರಗ (ಸ-೪೮-೬)
- ಸೋಮನ ಜನಕನ ಸತಿಯ ಧರಿಸಿದನ ರೋಮಕೋಟಿಯೊಳಿಟ್ಟಿಹನ
- ಹರಿಮುಖ ಹರಿವಾಣಿ (ಬೆ-೯೮-೨)
- ತನುರೋಮ ಗಿಡ ವೃಕ್ಷ ತಳಿರು ಭುಜಲತೆ ಮೆರೆವ ಘನ ಸಿಂಹ ಮೃಗ ಗಜಗಳಿಂದೊಪ್ಪುವ
- ಪಥ ನಡೆಯದಯ್ಯ (ಬೆ-೯_೨)
- ರೋಮರೋಮಕೆ ಕೋಟಿ ಲಿಂಗವೆನಿಸಿದ ಹನುಮ ಗ್ರಾಮಗಳ ಕಾಯ್ದುಕೊಂಡಿಹುದೆ ಗತಿಯಾಯ್ತು
- ಆರಿಗಾದರು ಪೂರ್ವ ಕಲ್ಪನೆಯು ತಪ್ಪದು (ಬೆ-೧೯-೧)
- ಇನ್ನು ಅವನನು ಸೆಣಸಿ ಜಯಿಸುವವರನು ಕಾಣೆನೆನ್ನುತಲಿ ರೋಮಗಳನುಬ್ಬೆತ್ತುತ
- ನೋಡಯ್ಯ ನಿನ್ನ ದಾಸರ (ಬೆ-೮೫-೩)

೩೮೯೦. **ರೋಮಕೂಪ** - ಮುಂದೊರೆದಿಹ ರೋಮಕೂಪದಗ್ರದಳತೆಯು ವೃಂದಗಳ ಶೋಭಿಪ ರೀತಿಯ ಪಡೆದೆಯೆಲೊ ಹರಿಯೆ
- ವಿಶ್ವಲೋಕೇಶ ವಿಶ್ವಲೋಕೇಶ (ಸ-೨೩೪-೨)

೩೮೯೧. **ರೋಮಶ** (ಒಬ್ಬ ಋಷಿ) - ಮೂಜಗದ ವ್ಯವಹಾರಿ ಮುಂಕೊಂಡು ಭರದ್ವಾಜ ರೋಮಶ ಅತ್ರಿ ಗಾರ್ಗೇಯ
- ತಂಗದಿರನನಿಮಿಷ ತಾರಕೆಗಳು (ಬೆ-೧೬೯-೬)
- ಸಿರಿಯೊಳಗೆ ಮಾಧವನೊ ಹಿರಿಯರೊಳು ರೋಮಶನೊ
- ಮೆರೆಯದಿರು ಮೆರೆಯದಿರು (ಬೆ-೧೪೮-೧)

೩೮೯೨. **ರೋಷ** - ರೋಷದಿ ದೈತ್ಯನ ಕರುಳ ಕಿತ್ತ ನರಕೇಸರಿ ರೂಪಿನ ಮಾಸಾಳಮ್ಮ
- ತಾಳಲ್ಲಲ್ಲಲ್ಲಯ್ಯೊ ಮಾಸಾಳಲ್ಲಲ್ಲಲ್ಲಯ್ಯೋ (ಸ-೧೧೦-೪)

೩೮೯೩. **ರೋಹಿತ** - ಕರುಳು ಖಂಡ ನಾರುವ ಚರ್ಮ ರೋಹಿತ ನರಪಂಜರದೀ ಹುರುಳಿಲ್ಲದ
- ಯಾತರವನೆಂದುಸುರಲಿ (ಸ-೨೧೮-೪)
- ಎಲುವು ಖಂಡ ರೋಹಿತ ನರಪಂಜರ ಪಳುವಿನೊಳಗೆ ನಮ್ಮ ಕುಲವ ಕೇಳುವರೆ
- ಏತರವನೆಂದು ಪೇಳಲಿ (ಬೆ-೧೨೨-೪)
- ತೂಂತಿಕೊಂಡೆನ್ನ ಬೆನ್ನಲೊಸರುವ ರೋಹಿತಕೆ ಅಂತ್ಯಮುಖ ಗ್ರಹಗಳನು ಕಳಚಿ ಬಿಸುಟಿ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೨)

## ಲ

೩೮೯೪. **ಲಂಕಿಣಿ** - ಮುನ್ನ ಗೆಲಿದ ಬಲ ಮುಕ್ಕಣ್ಣ ಹರನ ಬಲ ತನ್ನ ಲಂಕಿಣಿಯ ಕಾವಲಿನ ಬಲವು
- ಆವ ಬಲವಿದ್ದರೇನು (ಬೆ-೧೩೩-೩)

೩೮೯೫. **ಲಂಕೆ** - ಕೋ ಎಂದ ಲಂಕೆಗೆ ಬೆಂಕಿಮಲ್ಲ
- ನಾರಾಯಣನೆ ಈತ (ಸ-೧೩೮-೨)
- ಜಲನಿಧಿಯನುತ್ತರಿಸಿ ಲಂಕೆಯನೈವುದಕೆ ಕುಲಗಿರಿಯ ಕಿತ್ತು ತಂದು ಸೇತುವೆ ಕಟ್ಟಿ
- ನಮಗೆಲ್ಲಿ ಮನೆಗಳಯ್ಯ (ಸ-೧೩೨-೧)
- ಲಂಕೆಯ ಅನುದಿನ ಸ್ಥಿರರಾಜ್ಯವಾಳಿದ ಕಿಂಕರರೊಳಿರಿಸು ಕಂಡೆಯ ಎನ್ನನು
- ಶೇಷಶಯನ ನಿನ್ನ ಭಾಗವತರ (ಬೆ-೨೭-೪)
- ಕಲಿ ವಿಭೀಷಣ ನಂಬಿ ಲಂಕೆಯಲಿ ಸ್ಥಿರವಾದ, ಛಲದ ಪಾರ್ಥನು ನಂಬಿ ವಿಶ್ವರೂಪವ ಕಂಡ
- ನಂಬು ನಾರಾಯಣನ (ಬೆ-೫೩-೧)
- ಭಂಗನೆ ಲಂಕೆಗೆ ಪೋಗಿ ನಮ್ಮ ರಂಗ ಹೆಂಗಸುಗಳ್ಗನ ಕೊಂದಾನ್ನಾ
- ದೇವಿ ನಮ್ಮ ದೇವರು ಬಂದರು (ಬೆ-೭೭-೭)
- ಸೇತುವೆ ದಾಟಿ ಲಂಕೆಗೆ ಪೋಗಿ ಹನುಮಂತ ಖ್ಯಾತಿಯಲಿ ರಾವಣನ ಪುರವನಳಿಸಿ
- ಪ್ರಾಚೀನ ಕರ್ಮವಿದು (ಬೆ-೧೦೭-೧)
- ಪಿಂಗಳ ಕಣ್ಣಿನ ಕೊಂಗಗಳನು ಕೂಡಿ ಭಂಗನೆ

ಲಂಕೆಗೆ ಪೋದನ್ಹಾ
– ದೇವಿ ನಮ್ಮ ದೇವರು ಬಂದರು (ಬೆ–೭೭–೭)
– ಕೋ ಎಂದ ಲಂಕೆಗೆ ಬೆಂಕಿಮಲ್ಲ
– ನಾರಾಯಣನೆ ಈತ (ಸ–೧೩೮–೨)
೩೮೯೬. ಲಂಘಿಸು – ಲಂಘಿಸುವ ಹುಲಿಯ ಕಂಡ ನರಿಯು ನುಂಗಿತು
– ಎಂದೆಂದು ಇಂಥ ಚೋದ್ಯ (ಬೆ–೧೬೬–೧)
– ವಾತಜಾತನು ಆಗಿ ಖ್ಯಾತಿಯಲಿ ಮೆರೆದಗೆ ಸೇತುವೆಯ ಭರದಿಂದ ಲಂಘಿಸಿದಗೆ
– ಜಯಮಂಗಲಂ ನಿತ್ಯ (ಬೆ–೧೭೧–೧)
೩೮೯೭. ಲಂಡ (ದುಷ್ಟ) – ಗಂಡರೈವರ ಮುಂದೆ ದ್ರುಪದನಂದಿನಿ ಸೆರಗ ಲಂಡ ದುಶ್ಶಾಸ ಪಿಡಿದು
– ವಾಸುದೇವಾಯ ನಮೋ (ಬೆ–೯೦–೧)
– ನಾರಾಯಣ ಅಚ್ಯುತಾನಂತಾದಿಕೇಶವನ ಸಾರಾಮೃತವನುಂಡು ಸುಖಿಸೊ ಲಂಡ ಜೀವವೆ
– ದಾಸನಾಗೋ ಭವಪಾಶ ನೀಗೋ (ಬೆ–೨೦–೫)
– ಲಂಡರಿಗೆ ಎದೆಗೊಡುವ ಪುಂಡ ಆನೆ
– ಆನೆಯ ನೋಡಿರಯ್ಯ (ಬೆ–೧೫೬–೧)
೩೮೯೮. ಲಕುಮಿ/ಲಕ್ಷ್ಮಿ – ಆವುದೊಳ್ಳೆಯದೊ ನಿನ್ನಂಗ ಚೆಲುವ ದೇವ ಬಂಕಾಪುರದ ಲಕುಮಿ ನರಸಿಂಗ
– ಆವುದೊಳ್ಳೆಯದೊ ನಿನ್ನಂಗ (ಬೆ–೬೮–ಪ)
– ಸಾಧನಸಿರಿಯ ಸಂಪತ್ತು ಭಾಗ್ಯವನೀವ ಆ ದಯಾನಿಧಿ ಲಕ್ಷ್ಮಿ ನಿನ್ನ ಸತಿಯು ದೇವ
– ಜಗದಂತರ್ಯಾಮಿ ಎಂತೆಂದು (ಬೆ–೫೮–೧)
೩೮೯೯. ಲಕ್ಷ – ಎಂಬತ್ತುನಾಲ್ಕು ಲಕ್ಷ ಜೀವ ರಾಶಿ ಯೋನಿಯೊಳು ಹಂಬಲಿಸಿ ನಾ ಬಂದೆ ವರದಾ
– ಮೊರೆಹೊಕ್ಕೆ ಹರಿ ನಿಮ್ಮ ಚರಣಕಮಲವ (ಸ–೨೧೩–೧)
– ಕಾಸಿಗಾಸೆಯ ಪಟ್ಟು ಸಹಸ್ರ ಲಕ್ಷದ ಪುಸಿಯ ಬೇಸರಿಸದೆ ಬೊಗಳಿದೆ ವರದಾ
– ಮೊರೆಹೊಕ್ಕೆ ಹರಿ ನಿಮ್ಮ ಚರಣಕಮಲವ (ಸ–೨೧೩–೬)
– ಶತ ಸಾಹಸ್ರ ಲಕ್ಷ ಪಣತೆಯ ಗೋಘೃತ ದೀಪ ಬೆಳಗಲಚ್ಯುತ ನಿಳಯದಿ
– ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ–೧೧–೪)
– ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳನ್ನು ಬೊಂಬೆಗಳನು ಮಾಡಿ ಭವದಿಂದಲಿ
– ಜಗದಂತರ್ಯಾಮಿ ಎಂತೆಂದು (ಬೆ–೫೮–೨)
– ಹತ್ತು ಎಂಟು ಲಕ್ಷ ಗಳಿಸಿ ಮತ್ತೆ ಸಾಲದೆನುತ
– ಡಿಂಬಿನೊಳು ಪ್ರಾಣವಿರಲು (ಬೆ–೧೧೭–೪)
– ಬಂದೆ ಎಂಬತ್ತು ನಾಲುಕು ಲಕ್ಷ ಯೋನಿ ಯೊಳು
– ನೊಂದೆನಾ ಹರಿಯೆನ್ನದೆ (ಬೆ–೧೩–೧)
– ಏಸೋ ಕಾಯಂಗಳ ಕಳೆದು ಎಂಬತ್ನಾಲ್ಕು ಲಕ್ಷ ಜೀವರಾಶಿಯನ್ನು ದಾಟಿ ಬಂದಿ
– ದಾಸನಾಗೋ ಭವಪಾಶ ನೀಗೋ (ಬೆ–೨೦–೧)
೩೯೦೦. ಲಕ್ಷಣ – ಅಕ್ಷಯ ಫಲದಾತ ಅಖಿಳ ಲೋಕೇಶ ಲಕ್ಷಣ ಪರಿಪೂರ್ಣ ಲಕ್ಷ್ಮಿಪ್ರಾಣೇಶ
– ಲಾಲಿ ಪಾವನಚರಣ ಲಾಲಿ ಅಘಹರಣ (ಸ–೨೪೯–೪)
೩೯೦೧. ಲಕ್ಷ್ಮಣ – ರಾಮಾನುಜರೇ ನಮೋ ನಮೋ ಸ್ವಾಮಿ ಲಕ್ಷ್ಮಣ ರೂಪ ನಮೋ ನಮೋ
– ರಾಮಾನುಜರೇ ನಮೋ ನಮೋ (ಬೆ–೪_ಪ)
– ಎನ್ನ ಕಂದ ಹಳ್ಳಿಯ ಹನುಮಾ ಚೆನ್ನಾಗಿ ಇಹರೆ ಲಕ್ಷ್ಮಣ ದೇವರು
– ಎನ್ನ ಕಂದ ಹಳ್ಳಿಯ ಹನುಮಾ (ಬೆ–೬_ಪ)
– ವ್ರತದೊಳಗೆ ಲಕ್ಷ್ಮಣನೊ ಸ್ತುತಿಯಲ್ಲಿ ಕಾಶ್ಯಪನೊ
– ಬೆರೆಯದಿರು ಬೆರೆಯದಿರು (ಬೆ–೧೪೩–೭)
೩೯೦೨. ಲಕ್ಷ್ಮಿಪ್ರಾಣೇಶ/ಲಕ್ಷ್ಮೀಕಾಂತ/ಲಕ್ಷ್ಮೀ ದೇವಿಪತಿ/ಲಕ್ಷ್ಮೀರಮಣ (ವಿಷ್ಣು) – ಅಕ್ಷಯ

ಫಲದಾತ ಅಖಿಳ ಲೋಕೇಶ ಲಕ್ಷಣ ಪರಿಪೂರ್ಣ ಲಕ್ಷ್ಮಿಪ್ರಾಣೇಶ
- ಲಾಲಿ ಪಾವನ ಚರಣ ಲಾಲಿ ಅಘಹರಣ (ಸ-೨೨೯-೪)
- ಭೋಗೀಶಯನ ಶ್ರೀ ಲಕ್ಷ್ಮೀಕಾಂತನೆ ಭಾಗವತಪ್ರಿಯ
- ನಾ ನಿಮ್ಮ ದಾಸರ ದಾಸ (ಸ-೧೩೪-೫)
- ಕಂತುಪಿತ ಕಾಗೆನೆಲೆಯಾದಿಕೇಶವ ಲಕ್ಷ್ಮೀಕಾಂತ ತನ್ನಲ್ಲಿಗೆ ಕರೆಕಳುಹುವನಕ
- ಒಲ್ಲೆನೆಂದರಾಗುವುದೆ (ಬೆ-೧೧೦-೩)
- ಲಕ್ಷ್ಮೀ ಮನೋಹರನೆ ಇಕ್ಷುಚಾಪನ ಪಿತನೆ
- ವಾಸುದೇವಾಯ ನಮೋ (ಬೆ-೯೦-೭)
- ಏಳು ನಾರಾಯಣ ಏಳು ಲಕ್ಷ್ಮೀರಮಣ
- ಏಳು ನಾರಾಯಣ (ಸ-೫೯-೬)

೩೯೦೩. **ಲಚ್ಚಿಕೆ** - ಹಚ್ಚಡದ ಮೇಲೆ ಲಚ್ಚಿಕೆಯಿಟ್ಟಂತೆ ಹೆಚ್ಚುಕಡಮೆ ಎಂದು ಹೆಣಗಾಡುತ
- ಯಾತರವನೆಂದುಸುರಲಿ (ಸ-೨೧೮-೫)

೩೯೦೪. **ಲಚ್ಚಿಗೆ** (??) - ಹಚ್ಚಡದ ಮೇಲೊಂದು ಲಚ್ಚಿಗೆಯಿಟ್ಟಂತೆ ಹೆಚ್ಚು ಕುಂದಿಗೆ ಲೋಕ ಹೆಣಗಾಡುತ
- ಏತರವನೆಂದು ಪೇಳಲಿ (ಬೆ-೧೨೨-೫)

೩೯೦೫. **ಲಜ್ಜೆ** - ಹರಗೆ ನಯನವಾಗಿ ಮಕುಟವ ಬೆಳಗುವನ ತರುಣಿಯೈವರ ಲಜ್ಜೆ ಕಾಯ್ದವನ
- ನೆನೆಯಬಾರದೆ ಮನವೆ ಪರಮಪಾವನನ (ಸ-೧೫೨-೩)
- ಗೆಜ್ಜೆಯ ಕಟ್ಟಿ ಆಡೊ ಲಜ್ಜೆಯ ಬಿಟ್ಟು ಪಾಡೊ
- ಹಿಂಗದೆ ಮನದಣಿಯ ರಂಗನ ಭಜಿಸೊ (ಸ-೨೫೯-೨)
- ಉತ್ಕಚದ ಬಾಲೆಯ ಕಡುಲಜ್ಜೆ ಸಭೆಯೊಳಗೆ ವಿಸ್ತರಿಸಿ ಕಾಯ್ದೆ ಶ್ರೀ ನಾರಾಯಣಾ
- ನಾರಾಯಣಾ ನಮೋ (ಬೆ-೫೧-೧)
- ಜನಿಸಿದಾ ಬಳಿಯಲ್ಲಿ ತಾ ಲಜ್ಜೆ ತೊರೆದಿಹುದು
- ಬಲ್ಲವರು ಪೇಳರಿ (ಬೆ-೧೬೪-೩)
- ಜೀವವಿದ್ದಂತೆ ಲಜ್ಜೆಯ ಕಳೆದುಕೊಳಲಾರೆ ಆವ ಪರಿಯಲಿ ನಿನ್ನ ನಂಬಿದೆ
- ವಾಸುದೇವಾಯ ನಮೋ (ಬೆ-೯೦-೨)

೩೯೦೬. **ಲಟಪಟ** - ಲಟಪಟ ನಾ ಸಟೆಯಾಡುವನಲ್ಲ ವಿಠಲನ ನಾಮ ಮರೆತು ಪೋದೆನಲ್ಲ
- ಲಟಪಟ ನಾ ಸಟೆಯಾಡುವನಲ್ಲ (ಬೆ-೧೫೯-೬)

೩೯೦೭. **ಲತಾಂಗಿ** - ಶ್ರೀಲತಾಂಗಿಯ ರಮಣ ಆದಿಕೇಶವನ
- ಕಾವನಯ್ಯನ ಕಳುಹು (ಬೆ-೧೫೩-೩)

೩೯೦೮. **ಲತೆ** - ದುರಿತಜೀಮೂತಪವನ ದುರಿತಾಂಧಕಾರರವಿ ದುರಿತಲತಾಲವಿತ್ರ ನಾರಾಯಣಾ
- ನಾರಾಯಣಾ ನಮೋ (ಬೆ-೫೧-೩)
- ತನುರೋಮ ಗಿಡ ವೃಕ್ಷ ತಳಿರು ಭುಜಲತೆ ಮೆರೆವ ಘನ ಸಿಂಹ ಮೃಗ ಗಜಗಳಿಂದೊಪ್ಪುವ
- ಪಥ ನಡೆಯದಯ್ಯ (ಬೆ-೯೨)

೩೯೦೯. **ಲಯ** - ಭೋಗಿಶಯನನು ಆಗಿ ಭೋಗಿಭೂಷಣನಾಗಿ ವಾಗೀಶನಾಗಿ ಸ್ಥಿತಿಲಯಗಳಿಂಗೆ
- ಆರು ಬಲ್ಲರು ಹರಿಹರರ (ಬೆ-೮೨-೩)

೩೯೧೦. **ಲಯವಾಗು** - ಭೇದವು ಲಯವಾಗದನಕ ಬಾಡದ ಆದಿಕೇಶವ ನಿಮ್ಮ ನೆಲೆಗಾಣದನಕ
- ಸದರವಲ್ಲವೊ ನಿಜಯೋಗ (ಸ-೨೪೩-೩)

೩೯೧೧. **ಲಲನೆ** - ಪಾಂಡವರೈವರು ಲಲನೆ ದ್ರೌಪದಿಯೊಂದಿಗೆ ವನವಾಸ ಹೋಗಿ ಹೊಲದೊಳಗೆ ಇಹ ಪ್ರಾಪ್ತಿಯಾಯಿತು
- ನಮಗೆಲ್ಲ ಮನೆಗಳಯ್ಯ (ಸ-೧೩೨-೪)
- ಲಲನೆಯರ ಒಲಿಸುವ .....ಇದೇನು
- ಬಲ್ಲವರು ಪೇಳರೈ (ಬೆ-೧೬೩-೨)
- ಲಲನೆಯರು ಪುರುಷರು ತಮ್ಮತಮ್ಮ ಕಾಮದ ಸಲುವಾಗಿ ಕೂಡಲು ಶುಕ್ಲ ಶೋಣಿತದಿ
- ಮಗನಿಂದೆ ಗತಿಯುಂಟೆ (ಬೆ-೧೪೫-೨)

೩೯೧೨. **ಲಲಿತ** - ಲಾಲಿ ಪಾವನಚರಣ ಲಾಲಿ ಅಘಹರಣ ಲಾಲಿ ವೆಂಕಟರಮಣ ಲಲಿತ ಕಲ್ಯಾಣ
- ಲಾಲಿ ಪಾವನಚರಣ ಲಾಲಿ ಅಘಹರಣ (ಸ-೨೨೯-೬)

೩೯೧೩. ಲಲಿತ (ಒಂದು ರಾಗದ ಹೆಸರು)- ಮಾಳವಿ ಶ್ರೀದೇವಿ ಗಾಂಧಾರಿ ಮಲಹರಿ ಸಾಳಗವು ಸೌರಾಷ್ಟ್ರ ಗುಂಡಕ್ರಿಯಾ ಲಲಿತ
- ತಂಗದಿರನನಿಮಿಷ ತಾರಕೆಗಳು (ಬೆ-೧೭೬-೫)

೩೯೧೪. ಲಲಿತಾಂಗಿ - ಏನೆ ಮನವಿತ್ತೆ ಲಲಿತಾಂಗಿ ಅಸಮಾನ ಗೋವಳ ಕುಲವಿಲ್ಲ ದವನೊಳು
- ಏನೆ ಮನವಿತ್ತೆ ಲಲಿತಾಂಗಿ (ಬೆ-೧೫೪-ಪ)

೩೯೧೫. ಲವಣ - ಬಳಿಕ ಅಳುವ ನಯನ ಜಲವು ತಿಳಿದು ನೋಡಿದರೆ ಲವಣಾರ್ಣವಕೆ ಮೂರು ಮಡಿ
- ನೊಂದೆನಾ ಹರಿಯೆನ್ನದೆ (ಬೆ-೧೩-೩)

೩೯೧೬. ಲವಣಾರ್ಣವ (ಸಮುದ್ರ) - ಹಲವು ಬಗೆಯಲಿ ಅಳುವ ಅಶ್ರುಜಲವನು ಕೂಡಿ ಅಳೆದು ನೋಡಿದರೆ ಲವಣಾರ್ಣವಕೆ ಮೂರು ಮಡಿ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೪)

೩೯೧೭. ಲವಿತ್ರ (ಕುಡುಗೋಲು) - ದುರಿತಜೀಮೂತಪವನ ದುರಿತಾಂಧಕಾರರವಿ ದುರಿತಲತಾಲವಿತ್ರ ನಾರಾಯಣಾ
- ನಾರಾಯಣಾ ನಮೋ (ಬೆ-೫೧-೩)

೩೯೧೮. ಲಾಂಛನ - ತಿರುಮಂತ್ರವನು ಭಜಿಸು ತಿರುಲಾಂಛನವ ಧರಿಸು
- ನಾರಾಯಣೆನು ಮನವೆ (ಬೆ-೧೪೧-೧)

೩೯೧೯. ಲಾಭ - ಸುತಲಾಭದಿಂದ ಅಧಿಕ ಲಾಭವುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೨)
- ಧನಲಾಭದಿಂದ ಅಧಿಕ ಲಾಭವುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೩)
- ಬೆಲೆಬಿದ್ದ ಸರಕಿನೊಳು ಲಾಭವುಂಟೆ
- ಬಾಯಿ ನಾರಿದ ಮೇಲೆ (ಬೆ-೧೪೨-೨)

೩೯೨೦. ಲಾಲಿ - ಲಾಲಿ ಪಾವನಚರಣ ಲಾಲಿ ಅಘಹರಣ ಲಾಲಿ ವೆಂಕಟರಮಣ ಲಲಿತ ಕಲ್ಯಾಣ
- ಲಾಲಿ ಪಾವನಚರಣ ಲಾಲಿ ಅಘಹರಣ (ಸ-೨೨೯-ಪ)

೩೯೨೧. ಲಾಲಿಸು - ಕಂದಬಾರೆಂದು ಲಾಲಿಸಿದವರ ನಾಕಾಣೆ
- ಮುಂದೆ ದಯವಿರಲಿ ಶ್ರೀಹರಿಯೆ (ಸ-೨೧೪-೫)
- ಹಸ್ತದಿಂ ಹಣ ಭತ್ತ ಹಚ್ಚಡಂಗಳ ಕೊಟ್ಟು ಕುಸ್ತರಿಸಿ ಬಿನುಗು ಚಾರಿತ್ರ್ಯಗಳ ಲಾಲಿಸುತ
- ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ-೧೧-೧)
- ಮಾತು ಲಾಲಿಸಿ ವಿಭೀಷಣಗೆ ಪಟ್ಟವನಿತ್ತ ದಾತ ರಘುನಾಥನೇ ಶರಣೆಂಬೆನು
- ನೋಡಯ್ಯ ನಿನ್ನ ದಾಸರ (ಬೆ-೮೫-೭)
- ಕರಿಮೊರೆಯ ಲಾಲಿಸಿದೆನೆಂಬ ಸಿರಿಯೆ
- ಆವ ಸಿರಿಯಲಿ ನೀನು ಎನ್ನ ಮರೆತೆ (ಬೆ-೬೭-೧)

೩೯೨೨. ಲಾವಣ್ಯ - ಚಿತ್ತಜಕೋಟಿ ಲಾವಣ್ಯ ಮುಪ್ಪುರದೊಳು ಉತ್ತಮ ಸ್ತ್ರೀಯರ ವ್ರತವಳಿದೆ
- ನಿನ್ನ ನಾನೇನೆಂದೆನೊ ರಂಗಯ್ಯ (ಬೆ-೯೧-೩)

೩೯೨೩. ಲಿಂಗ - ಮೂತೆರದ ಭೇದಗಳ ಕಡಿದು ಕಣ್ಣಿಯ ಮಾಡಿ ಚಿತ್‌ಲಿಂಗಕಗ್ಗವಣಿ ತಂದವರ ತೋರು - ನಿಜವರಿತು ಅಂಗವನು ಪೂಜೆ ಮಾಡುವರು (ಸ-೧೪೨-೧)
- ಬೆನ್ನಿನಲಿ ವಸುನಿಕರ ಸ್ಮರನು ಲಿಂಗದಲಿ
- ವಿಶ್ವಲೋಕೇಶ ವಿಶ್ವಲೋಕೇಶ (ಸ-೨೩೪-೩
- ಅಂತರ್ಯದ ಸಂತತ ಭೇರಿ ಶಬ್ದವ ಕೇಳಿ ಅಂತರಾತ್ಮ ಲಿಂಗವ ಪೂಜಿಪರ ತೋರು
- ನಿಜವರಿತು ಅಂಗವನು ಪೂಜೆ ಮಾಡುವರು (ಸ-೧೪೨-೪)
- ಲಿಂಗ ಪೂಜೆಯ ಬಲ ನಿಶ್ಚಿಂತನಾಗಿಹ ಬಲ ಹಿಂಗದೆ ಹರನು ಬಾಗಿಲ ಕಾಯ್ದ ಬಲವು
- ಆವ ಬಲವಿದ್ದರೇನು (ಬೆ-೧೩೩-೪)
- ಭವಿ ಮಾಡಿದ ಲಿಂಗ ಬಚ್ಚಿಟ್ಟು ಪೂಜೆಯ ಗೊಂಬ ಕವಿಗಳು ಶರಣರು ಕೇಳಿ ಸಭೆಯೊಳು
- ಶಂಕರನಾರಾಯಣ ಬಿಡು (ಬೆ-೧೭೫-೧)

- ಲೀಲಾ ಸಾದೃಶ್ಯವ ತೋರುತ ಲಿಂಗಭಂಗ ವಿಲ್ಲದ ದೇಹ ಹಾರುತ
- ಅಂಧಂತಮಸು ಇನ್ನಾರಿಗೆ (ಬೆ-೮೯-೨)
- ಗುರು ಲಿಂಗ ಜಂಗಮವ ಅರಿಯಬೇಕಾದರೆ ಶಿವ ಶಿವ ಎನ್ನಿರೊ
- ಶಿವ ಶಿವ ಶಿವ ಎನ್ನಿರೊ (ಬೆ-೩_೬)
- ಪರಬ್ರಹ್ಮ ತನ್ನೊಳಗೆ ಪರಿಪೂರ್ಣವಾಗಿರಲು ಪರಂಜ್ಯೋತಿ ಲಿಂಗವ ಬಯಸಿ ನೋಡು
- ನಿಜವರಿತು ಲಿಂಗವನು ಪೂಜೆ ಮಾಡುವರು (ಸ-೧೪೨-೫)
- ನಿಜವರಿತು ಲಿಂಗವನು ಪೂಜೆ ಮಾಡುವ ರಾರು
- ನಿಜವರಿತು ಲಿಂಗವನು ಪೂಜೆ ಮಾಡುವರು (ಸ-೧೪೨-ಪ)
- ರೋಮರೋಮಕೆ ಕೋಟಿ ಲಿಂಗವೆನಿಸಿದ ಹನುಮ ಗ್ರಾಮಗಳ ಕಾಯ್ದುಕೊಂಡಿಹುದೆ ಗತಿ ಯಾಯ್ತು
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೮೯-೧)
- ಲಿಂಗವೆ ಗತಿಯೆಂದು ಹೆಚ್ಚು ಕುಂದಾಡುವ ಸಂಗನ ಶಿವಶರಣರು ಕೇಳಿರೊ
- ಶಂಕರನಾರಾಯಣ ಬಿಡು (ಬೆ-೧೭೫-೫)
- ಲಿಂಗದ ನೈವೇದ್ಯವ ಮುಟ್ಟದಂತಾಯಿತು ರಂಗನ ಪ್ರಸಾದ ಲೋಕವದು
- ಶಂಕರನಾರಾಯಣ ಬಿಡು (ಬೆ-೧೭೫-೫)
- ಧರೆಯೊಳು ಲಿಂಗದ ವೀರ ಪವಾಡವ ಇರಿದು ಎಬ್ಬಿಸುವೆವು ಎಂತೆಂಬಿರಿ
- ಶಂಕರನಾರಾಯಣ ಬಿಡು (ಬೆ-೧೭೫-೬)

೩೯೨೪. ಲಿಂಗವಂತ (ಲಿಂಗಾಯತ) - ಜಂಗಮಸ್ಥಾವರದ ಹೊಲಬನರಿಯದ ಇಂಥ ಭಂಗಿಮುಕ್ಕುಗಳೆಲ್ಲ ಲಿಂಗವಂತರಹುದೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೪)

೩೯೨೫. ಲಿಂಗಾಂಗ - ಲಿಂಗಾಂಗದೊಳ ಗಿರುವ ಅನುಭವವ ತಿಳಿಯದೆ ಅಂಗ ಲಿಂಗದ ನೆಲೆಯ ಗುರುತರಿಯದೆ
- ತೀರ್ಥ ಪಿಡಿದವರು ತಿರುನಾಮಧಾರಿಗಳೆ (ಬೆ-೧೩೮-೪)

೩೯೨೬. ಲೀಲಾವಿಲಾಸ - ಮೂಗನಾದರೆ ವಿಶೇಷ ಒಳ ಮೂಗಲಿ ನೊಡಣ್ಣ ಲೀಲಾ ವಿಲಾಸ
- ಎಲ್ಲಿ ನೋಡಿದರಲ್ಲಿ ರಾಮ (ಸ-೫೧-೨)

೩೯೨೭. ಲೀಲೆ - ಮೂಗನಾದರೆ ವಿಶೇಷ ಒಳ ಮೂಗಲಿ ನೊಡಣ್ಣ ಲೀಲಾವಿಲಾಸ
- ಎಲ್ಲಿ ನೋಡಿದರಲ್ಲಿ ರಾಮ (ಸ-೫೧-೨)
- ವಸುಂಧರೆಯ ಮೇಲೆ ಲೀಲೆಯಾಡುತ ಕೃತಯುಗದಿ ನಿಂದು ಯಾದವಗಿರಿಯ ಮೇಲೆ
- ಯಾದವಗಿರಿವಾಸನಹುದೋ (ಸ-೨೧೯-೩)
- ಪೊಡವಿಗೊಡೆಯ ಶ್ರೀಹರಿಲೀಲೆಯಿದು
- ಕೊಡಲು ನೀನಾರು (ಸ-೯೨-ಪ)
- ಲೀಲಾ ಸಾದೃಶ್ಯವ ತೋರುತ ಲಿಂಗಭಂಗ ವಿಲ್ಲದ ದೇಹ ಹಾರುತ
- ಅಂಧಂತಮಸು ಇನ್ನಾರಿಗೆ (ಬೆ-೮೯-೨)
- ಇಂತೆಸೆವ ಲೀಲಾ ವಿನೋದ ರಚನೆಯಲಿ ಲೋಕಾಂತರಗಳೆಲ್ಲವನು ಸಂತೈಸುವ
- ಬೊಂಬೆಯಾಟವನಾಡಿಸಿದ (ಬೆ-೭೯-೫)
- ಲೀಲೆಯಿಂದಲಿ ಕಿತ್ತೆತ್ತಿದ ಧೀರನ ಕಾಳೆಗದಲಿ ಕೊಂದನ
- ರಮಣಿ ಕೇಳೆಲೆ ಮೋಹನ (ಬೆ-೯೬-೨)
- ಲೀಲೆಯಿಂದಲಿ ಭಕ್ತರನು ಸಲಹುತಿಹನ
- ಕಾವನಯ್ಯನ ಕಳುಹು (ಬೆ-೧೫೩-೩)
- ಪ್ರಣವ ಗೋಚರನಾಗಿ ಲೀಲೆಯಿಂದಲಿ ಬಂದು ಹೆಣಕೆ ಪ್ರಾಣವನು ತಂದಿತ್ತ ಮಹಾ ತುಮನೆ
- ಸಾಲದೆ ನಿನದೊಂದು ದಿವ್ಯನಾಮ (ಬೆ-೧೭೪-೧)

೩೯೨೮. ಲುಬ್ಧ (ಆಸೆಬುರುಕ)
- ಅತಿಥಿಯಾದರಿಸುವನು ಅತಿ ಲುಬ್ಧನು
- ಸಹಜವಿದು ಈ ನುಡಿಯು (ಬೆ-೧೪೯-೧)

೩೯೨೯. ಲೆಂಕ (ಸೇವಕ) - ಆದರಿಸು ನಿನ್ನ

ಲೆಂಕನ ಪ್ರತಿಲೆಂಕನ ಭೇದವೇತಕೆ ನಿನ್ನ ದಾಸ ನಾನು
– ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ (ಸ–೧೪೫–೩)

೩೯೩೦. **ಲೆಕ್ಕ** – ಬರೆದೂ ಅರಿಯದ ಲೆಕ್ಕ ಕಡೆಯಲಿ ಬಹು ದುಃಖ
– ಅಹುದಾದಡಹುದೆನ್ನಿ (ಬೆ–೧೩೨–೪)
– ಆಥಕದೊಳಗಂಬರವನಳೆದು ಲೆಕ್ಕ ಕೂಡಿದ ಮಿತಿಯ ಪೇಳಲುಬಹುದು
– ಕ್ಷಮಿಸುವುದೆನ್ನ ತಪ್ಪುಗಳ (ಬೆ–೬೧–೨)

೩೯೩೧. **ಲೆಕ್ಕಿಸು** (ಲಕ್ಷಿಸು) – ವೇದಮುಖ ದಣ್ಣನಿರೆ ಉರಿನಯನದಿಂದ ಸ್ಮರನು ಬೂದಿಯಾದಾಗ ಲೆಕ್ಕಿಸಲಿಲ್ಲವೇಕೆ
– ಆರು ಸಮಯಕ್ಕೊದಗಲಲ್ಲ (ಬೆ–೩೨–೨)
– ಅಂಧರಾಯನಾತ್ಮಜರು ಮದಾಂಧರಾಗಿ ಮಲೆತು ಗೋತ್ರಬಂಧುಗಳನು ಲೆಕ್ಕಿಸದೆ
– ನಂಬಬೇಡಿ ಸಿರಿಯು ತನ್ನದೆ (ಬೆ–೧೧೫–೨)
– ಪಕ್ಷಿವಾಹನನ ಗುಣ ಲೆಕ್ಕಿಸಿ ಪೊಗಳದೆ ಬೆಕ್ಕಸಬೆರಗಾಗಿ ಅಕ್ಕಿಗೆ ತಿರುಗುವವ
– ಹೇಗೆ ನೀ ದಾಸನಾದೆ (ಬೆ–೨೨–೨೦)

೩೯೩೨. **ಲೆತ್ತ** (ಪಗಡೆ) – ದುಸ್ತರದ ಲೆತ್ತ ಚದುರಂಗ ಪಗಡೆಯೊಳುದಯಾಸ್ತಮಯ ತನಕ ಕುಳಿತು ಏಳದಿಹೆ ಮರುಳೆ
– ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ (ಬೆ–೧೧–೧)
– ಲೆತ್ತಪಗಡೆ ಚದುರಂಗ ಆಟದಲ್ಲೆ ಹೊತ್ತು ಕಳೆಯುತಿದ್ದೆ
– ಛೀ ನಿನ್ನ ಮೋರೆ ಮೇಲೆ (ಸ–೧೦೦–೧)

೩೯೩೩. **ಲೇಪ** – ಚಳಿಯುರಿಗೆ ಚಂದನದ ಲೇಪ ಹಿತವೆ
– ಬಾಯಿ ನಾರಿದ ಮೇಲೆ (ಬೆ–೧೪೨–೨)

೩೯೩೪. **ಲೇಪಿಸು** – ಒಡಗೂಡಿ ಗಂಧ ಕಸ್ತೂರಿ ಪರಿಮಳಗಳ ಬಿಡದೆ ಲೇಪಿಸಿಕೊಂಬುದು ನಿನ್ನದು
– ತನು ನಿನ್ನದು ಜೀವನ ನಿನ್ನದು (ಬೆ–೫೭–೨)

೩೯೩೫. **ಲೇಸು** – ಭೂಸುರಪ್ರಿಯ ಕಾಗಿನೆಲೆಯಾದಿಕೇಶವನ ಮೀಸಲಿನ ಪಾದಭಜನೆ ಕಡುಲೇಸು ಮನವೆ
– ಅರಿತು ನಡೆಯಲಿಬೇಕು (ಸ–೭–೩)
– ದುರ್ಜನರ ಮನೆಯ ಪಾಯಸಾನ್ನಕ್ಕಿಂತ ಸಜ್ಜನರ ಮನೆಯ ರಬ್ಬಳಿಗೆ ಲೇಸು
– ಅರಿತು ನಡೆಯಲಿಬೇಕು (ಸ–೭–೧)
– ಭಕ್ತಿಹೀನರ ಮನೆಯ ಪಟ್ಟ ಸುಪ್ಪತ್ತಿಗೆಗಿಂತ ಭಕ್ತರ ಮನೆಯ ಕಡೆಬಾಗಿಲ ಕಾಯುವುದು ಲೇಸು
– ಅರಿತು ನಡೆಯಲಿಬೇಕು (ಸ–೭–೨)
– ವಾಸುದೇವನೆಂಬ ಒಳಗಿದ್ದ ಹಂಸನ ಸೇರಿ ಲೇಸನುಂಡು ಮೋಸಗೊಳದೆ ಮುಕ್ತನಾಗೊ ನೀ ಶಕ್ತನಾಗೊ
– ದಾಸನಾಗೋ ಭವಪಾಶ ನೀಗೋ (ಬೆ–೨೦–೧)
– ಭಾವೆಯ ತಂದ ಮನೆಯಲಿ ಜೀವಿಪುದಕಿಂತ ಸಾವುದೇ ಲೇಸು ಅಭಿಮಾನಿಗಳಿಗೆ
– ಮಾವನ ಮನೆಯೊಳಗೆ (ಬೆ–೧೪೬–೧)
– ಕತ್ತಲೆಕಾವಳದೊಳು ಕಾಣಬಾರದೆ ನೀನು ಸತ್ಯವೆಂಬ ದಾರಿಯನು ಸೇರಲಿಲ್ಲ ಲೇಸು ತೋರಲಿಲ್ಲ
– ದಾಸನಾಗೋ ಭವಪಾಶ ನೀಗೋ (ಬೆ–೨೦–೨)
– ಮುಂದರಿತು ಹರಿಪದ ಹೊಂದುವುದು ಲೇಸು
– ಎಂದಿದ್ದರೀ ಕೊಂಪೆ ಎನಗೆ ನಂಬಿಕೆಯಿರದು (ಬೆ–೧೦_ಪ)
– ಲೇಸಾಗಿ ಜನರ ಸಲಹುವ ಕಾಗೆನೆಲೆಯಾದಿಕೇಶವನದಾಸ ಕಾಣೆ
– ನಮ್ಮಮ್ಮ ಶಾರದೆ (ಬೆ–೧_೩)
– ಲೇಸು ತಪ್ಪಿದನೆಂದು ಹಿರಣ್ಯಕತನಯನ ಘಾಸಿ ಮಾಡಲು ಕಂಬ ಒಡೆದುದಿಸಿ
– ತಾಳಲ್ಲಲ್ಲಲ್ಲೋ ಮಾಸಾಳಲ್ಲಲ್ಲಲ್ಲೋ (ಸ–೧೧೦–೪)
– ಆಶೆಕಾರರ ಮನೆಯ ವಿಲಾಸ ಸುಖಕಿಂತ ಆಶಾರಹಿತರ ಮನೆಯ ನಿರ್ಗತಿಕ ದೈನ್ಯ ಲೇಸು
– ಅರಿತು ನಡೆಯಲಿಬೇಕು (ಸ–೭–೩)

- ಈ ಪರಿಯಲುಂಬಂಥ ಅಳಿಯ ಭೋಜನ ದಿಂದ ಗೋಪಾಳ ಲೇಸು ಅಭಿಮಾನಿಗಳಿಗೆ
- ಮಾವನ ಮನೆಯೊಳಗೆ (ಬೆ-೧೪೬-೫)
- ದೇಶಕಧಿಕ ಕಾಗಿನೆಲೆಯಾದಿಕೇಶವನ ಲೇಸಾದ ಚರಣಕಮಲದ ಬಲವಿರದನಕ
- ಆವ ಬಲವಿದ್ದರೇನು (ಬೆ-೧೩೩-೫)
- ಶ್ರೀಶ ನೆಲೆಯಾದಿಕೇಶವ ನಿಮ್ಮ ಪಾದವನು ಲೇಸಾಗಿ ಸ್ಮರಿಸಿ ಪೊಗಳುವರು ಹರಿಯೇ
- ಏಳು ನಾರಾಯಣ (ಸ-೫೯-೩)

೫೯೩೬. ಲೋಕ - ಗರುಡವಾಹನವೇರಿ ಧಿಮಕೆಂದು ಬರುತಾನೆ ಸರುವ ಲೋಕ ರಕ್ಷಕನೆಂಬ ಮದ್ದಾನೆ
- ಆನೆ ಬರುತಾದೆ ನೋಡಮ್ಮ (ಸ-೧೫-೫)
- ತಿಳಿದು ಕೂರ್ಮರೂಪಾಗಿ ಮಂದರವನು ಪೊತ್ತು ಉಳಿಸಿದೆ ಲೋಕವನುನ್ನತ ಪರಾಕ್ರಮಿ
- ಯಾದವಗಿರಿವಾಸನಹುದೋ (ಸ-೨೧೯-೧)
- ಲೋಕ ಪಾವನೆ ಗಂಗೆ ಜನಿಸಿದಾ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-೧)
- ಇಂತೆಸೆವ ಲೀಲಾ ವಿನೋದ ರಚನೆಯಲಿ ಲೋಕಾಂತರಗಳೆಲ್ಲವನು ಸಂತೈಸುವ
- ಬೊಂಬೆಯಾಟವನಾಡಿಸಿದ (ಬೆ-೭೯-೫)
- ಸಕಲೈಶ್ವರ್ಯದ ಶ್ರೀದೇವಿ ನಿನ್ನರಸಿ ಬಹು ಮುಕುತಿಯಿಂದಲಿ ಲೋಕ ಪುಟ್ಟಿಸುವ
- ಸಿರಿಯ ಮದವೆ ಮುಕುಂದ (ಬೆ-೬೯-೧)
- ಹಚ್ಚಡದ ಮೇಲೊಂದು ಲಚ್ಚಿಗೆಯಿಟ್ಟಂತೆ ಹೆಚ್ಚು ಕುಂದಿಗೆ ಲೋಕ ಹೆಣಗಾಡುತ
- ಏತರವನೆಂದು ಪೇಳಲಿ (ಬೆ-೧೨೨-೫)
- ನರಲೋಕದಿ ಯಮನ ಬಾಧೆಯ ಕಳೆಯಲು ವರ ಪುಣ್ಯ ಕಥೆಗಳ ಕೇಳುತಲಿ
- ದಾನ ಧರ್ಮವ ಮಾಡಿ ಸುಖಿಯಾಗು (ಬೆ-೧೪೯-೫)
- ಸುತ್ತೇಳು ಲೋಕದಿ ಸುರರು ಬಿತ್ತಿದ ಹಣ್ಣು
- ಹಣ್ಣು ಕೊಂಬುವ ಬನ್ನಿರಿ (ಬೆ-೧೫೭-೧)
- ಈರೇಳು ಲೋಕವ ಪೊರೆವ ದಯಾನಿಧಿ ಬಾರನೇತಕೆ ಮನೆಗೆ ಹೇ ಸಖಿಯೆ
- ತೋರೆ ಬೇಗನೆ ಸಖಿ (ಬೆ-೯೪-೮)
- ಎಂಟಾರು ಲೋಕವ ಒಂದೆಲೆ ನುಂಗಿತು
- ಹಲವು ಜೀವನವ ಒಂದೆಲೆ ನುಂಗಿತು (ಬೆ-೧೫೮-೨)
- ಸಾಕಾರನಾಗಿ ಈ ಲೋಕವನೆಲ್ಲವ ಆಕ್ರಮಿಸಿದ ಕಳ್ಳ ಕೋ ಎನ್ನಿರೊ
- ಕೋ ಕೋ ಕೋ ಎನ್ನಿರೊ (ಬೆ-೧೦೧-೪)
- ಹರಿಗೆ ವಾಹನನಾಗಿ ಹದಿನಾಲ್ಕು ಲೋಕ ವನು ಚರಿಸಿದಾ ಗರುಡನಿಗೆ ಮರವೆ ಮನೆ ಯಾಯ್ತು
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೯-೨)
- ಲೋಕವೀರೇಳನ್ನು ತಿರುಗುವಾ ರವಿರಥಕೆ ಏಕಗಾಲಿಯು ಏಳು ಕುದುರೆಯಿಂದ
- ಪ್ರಾಚೀನ ಕರ್ಮವಿದು (ಬೆ-೧೦೭-೨)
- ಸೋದರತ್ತೆಯ ಸೊಸೆಯ ಮಗ ನಿನಗೆ ಭಾವಿಸಲು ಸೋದರಳಿಯನು ಮೂರು ಲೋಕವರಿಯೆ
- ನೀನಾವ ಬಾಂಧವನೊ (ಬೆ-೭೮-೩)
- ಲಿಂಗದ ನೈವೇದ್ಯವ ಮುಟ್ಟದಂತಾಯಿತು ರಂಗನ ಪ್ರಸಾದ ಲೋಕವದು
- ಶಂಕರ ನಾರಾಯಣ ಬಿಡು (ಬೆ-೧೭೫-೫)
- ಮೂರುಲೋಕಕೆ ಗೌಡ ಸಂಗತಿ ಇಹರು ಮಂತ್ರಿ ಮೂರುಲೋಕದ ಜನರು ಭಜಿಸುತಿಹರು
- ನಾವು ಕುರುಬರು (ಬೆ-೧೫೨-೫)
- ಬಲಿ ನಂಬಿ ಪಾತಾಳ ಲೋಕಕರಸಾದನದೆ ಕುಲದ ಪ್ರಹ್ಲಾದನು ನಿಜವ ಕಂಡ
- ನಂಬು ನಾರಾಯಣನ (ಬೆ-೫೩-೧)
- ಅರಸಿನಂತೆ ಬಂಟನೆಂಬುದು ನಿನ್ನೊಳು ಕುರುಹು ತೋರಿತು ಮೂರು ಲೋಕಕೆ ಹನುಮ
- ಅರಸಿನಂತೆ ಬಂಟನೊ (ಬೆ-೫-೮)
- ಮೂರುಲೋಕದ ಒಡೆಯ ಮುಕ್ಕಣ್ಣನೆಂಬಾತ ಸಾರುತಿದೆ ಸಟೆಯಲ್ಲ ವೇದವಾಕ್ಯ
- ಆರಿಗಾದರು ಪೂರ್ವಕಲ್ಪನೆಯು ತಪ್ಪದು (ಬೆ-೧೯-೪)

- ಬಲ್ಲವರು ಪೇಳಿರಿ ಲೋಕದ ಈ ಪದನು ಘುಲ್ಲಶರನನು ರಂಗ ಪೆತ್ತ ಮಹಿಮೆಯನು
- ಬಲ್ಲವರು ಪೇಳಿರಿ (ಬೆ-೧೬೪-ಪ)
- ಮೂರುಲೋಕಕೆ ಗೌಡ ಸಂಗತಿ ಇಹರು ಮಂತ್ರಿ ಮೂರುಲೋಕದ ಜನರು ಭಜಿಸುತಿಹರು
- ನಾವು ಕುರುಬರು (ಬೆ-೧೫೨-೫)
- ಲೋಕದೊಳು ಕಾಗಿನೆಲೆಯಾದಿಕೇಶವ ಭಕ್ತ ಸಾಕಾರನೆಂಬುದಕೆ ಸಕಲ ಭುವನವೆ ಹೊಣೆಯೊ
- ನಿನ್ನ ಮಹ ಮಹಿಮೆಗೆ (ಬೆ-೫೦-೩)
- ಲೋಕದೊಳು ಐದನೆಯ ವೇದವೀಕಥೆ ಯೆನಿಸಿ
- ಬೊಂಬೆಯಾಟವನಾಡಿಸಿದ (ಬೆ-೭೯-೪)
- ಲೋಕದೊಳಗೆನ್ನನ್ನು ಪೋಲ್ವ ಪಾಪಿಗಳನ್ನು ನೀ ಕಂಡು ಬಲ್ಲೆಯಾ ಕೃಷ್ಣ
- ಪೂರ್ವಜನ್ಮ ದಲಿ ನಾ ಮಾಡಿದಾ (ಬೆ-೮_೩)

೫೯೩೭. **ಲೋಕಪಾವನಮೂರ್ತಿ** - ಏಕೆ ದಯವಿನಿತಿಲ್ಲ ಲೋಕಪಾವನಮೂರ್ತಿ
- ಏಕೆ ದಯವಿನಿತಿಲ್ಲ ಲೋಕಪಾವನಮೂರ್ತಿ (ಸ-೫೫-ಪ)

೫೯೩೮. **ಲೋಕಮಾತೆ** - ಆ ಕ್ಷಣ ಲೋಕ ಮಾತೆಯನೊಡಗೂಡಿಸಿದೆ ಶ್ರೀವಾಸುದೇವರಿಗೆ
- ಎಷ್ಟು ಪೊಗಳಲಿ ನಾನು (ಸ-೫೩-೨)

೫೯೩೯. **ಲೋಕೇಶ** (ಜಗದೀಶ) - ಅಕ್ಷಯ ಫಲದಾತ ಅಖಿಳ ಲೋಕೇಶ ಲಕ್ಷಣ ಪರಿ ಪೂರ್ಣ ಲಕ್ಷ್ಮಿಪ್ರಾಣೇಶ
- ಲಾಲಿ ಪಾವನ ಚರಣ ಲಾಲಿ ಅಘಹರಣ (ಸ-೨೯-೪)
- ಲೋಕೇಶ ಸರ್ವಂ ವಿಷ್ಣುಮಯಂ ಜಗತ್ತೆಂಬುದಕೆ ವಾಕೇಶ ವಾತ ಸತ್ತ್ವಗುಣ ಹೊಣೆಯೊ
- ನಿನ್ನ ಮಹ ಮಹಿಮೆಗೆ (ಬೆ-೫೦-೩)
- ಲೋಕೇಶನಿಗೆ ಒಲಿದು ಪೂಜೆಗೊಂಬುವ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-೧)

೫೯೪೦. **ಲೋಭ** - ಶರದಿಷುಖ್ಯಾತಿ ಪೌರುಷ ಲೋಭ ಬಹುಜನರ ಉರುವೀಶರನ್ನು ಕೈಪಿಡಿದೆ ಹರಿಯೆ
- ಹರಿ ನಿನ್ನ ಪರಮಾರ್ಥ (ಬೆ-೧೭೩-೩)

೫೯೪೧. **ಲೋಭಿ** - ಬೇಡಿದರು ಕೊಡದಿರುವ ಕಡುಲೋಭಿಯ ಸಂಗ
- ಸಜ್ಜನರ ಸಂಗದೊಳಗಿರಿಸೆನ್ನ (ಸ-೨೪೧-೧)
- ಬಲು ಬೇಡೆ ಕೊಡದಿರುವ ಲೋಭಿಸಂಗ
- ದುರ್ಜನರ ಸಂಗವನು ಎಂದಿಗೊಲ್ಲೆನು (ಬೆ-೧೯೯-೩)
- ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ
- ಬಂದೆವಯ್ಯ ಗೋವಿಂದಶೆಟ್ಟಿ (ಬೆ-೧೫೧-೨)
- ಬೇಡದಿರು ಕೈಯ ಹಿಂದೆಗೆವ ಲೋಭಿಯನು
- ನೆಚ್ಚದಿರು ಸಂಸಾರ ನೆಲೆಯಲ್ಲ (ಬೆ-೧೧೬-೨)

೫೯೪೨. **ಲೋಲ** - ಶ್ರೀಲತಾಂಗಿಯರ ಲೋಲ ಮಾರನಾಟವಾಡಿ ಪೋದನೆ
- ಬಾಲಕನೆಂದೆತ್ತಿಕೊಂಡೆನೆ (ಸ-೧೮೩-ಅ)
- ನೀಲವರ್ಣದ ಲೋಲ ಕಾಲನವರಿಗೆ ಶೂಲ ಬಾಲ್ಯದಿ ಯಶೋದೆಯ ಹಾಲ ಸವಿದ ಗೋಪಾಲ
- ಏಕೆ ದಯವಿನಿತಿಲ್ಲ ಲೋಕಪಾವನಮೂರ್ತಿ (ಸ-೫೫-೩)
- ಲೋಲಕಮಲನಾಭನಾದರೆ ಆಕೆ ಬಾಲ ಕಮಲಮುಖಿಯಾದಳಯ್ಯ
- ನಿನಗಿಂತ ಕುಂದೇನೊ (ಬೆ-೮೭-೨)
- ಲೋಲ ಆದಿಕೇಶವನ ಭಕ್ತನಾಗೆಲೊ
- ನಾನು ನೀನು ಎನ್ನದಿರೊ (ಬೆ-೧೪೦-೩)
- ಗಾನರಸಲೋಲ ಆಗಮಶೀಲ ಭಕ್ತಪರಿಪಾಲ ಗೋಪಾಲಬಾಲ
- ನೀನುಪೇಕ್ಷೆಯ ಮಾಡೆ (ಬೆ-೪೯-ಪ)
- ಧೂಳಿಗೆ ಹಾರುವ ಮಣ್ಣ ಮೇಲೆ ಮುದ್ದೆಯ ಕಲಸಿ ಲೋಲನಾಗಿದು ಸೊಬಗಾದ ಬೆಡಗು
- ಬೀಜ ಮೂರನು ಬಿತ್ತಿ (ಬೆ-೧೬೨-೨)

೫೯೪೩. **ಲೋಲಲೋಚನೆ** - ಲೋಲಲೋಚನೆಯ ಮಾತೆಯ ಪುತ್ರನಣುಗನ ಮೇಲುಶಕ್ತಿಗೆ ಉರವಾಂತು

- ರಮಣಿ ಕೇಳೆಲೆ ಮೋಹನ (ಬೆ-೯೬-೨)

**೬೯೪೪. ಲೋಲಾಕ್ಷಿ** - ಲೋಲಾಕ್ಷಿಯ ಮಾನ ಭಂಗಕ್ಕೊದಗಿದಾನೆ
- ಆನೆಯ ನೋಡಿರಯ್ಯ (ಬೆ-೧೫೬-೨)

**೬೯೪೫. ಲೋಲೆ** - ತನ್ನವರನು ಪಾಲಿಸಿದಂಥ ದಾತನಹ ದೇವನ ಲೋಲೆ ನೀ ಕರೆದು ತೋರೆ
- ರಮಣಿ ಕೇಳೆಲೆ ಮೋಹನ (ಬೆ-೯೬-೨)

**೬೯೪೬. ಲೌಕಿಕ** - ಸುತರಿಲ್ಲದವರಿಗೆ ಗತಿಯಿಲ್ಲ ವೆಂಬುದು ಕೃತಕಶಾಸ್ತ್ರ ಲೌಕಿಕ ಭಾವಕೆ
- ಮಗನಿಂದೆ ಗತಿಯುಂಟೆ (ಬೆ-೧೪೫-೫)

# ವ

**೬೯೪೭. ವಂಚನೆ** - ಚಂಚಲತ್ವ ಬಲವು ಫಲವು ಜಾಲ ಕೋಪ ತಾಪದಿಂದ ವಂಚನಾರ್ಥ ಹಲವು ಕೆಲವು ಮಿಂಚಿನಂತೆ ಸುಳಿಸುತ
- ಅಹಹ ಮೋಸಹೋದೆನಯ್ಯ (ಸ-೯-೨)
- ಸಂಚುಮಾಡಿ ಕಾಲನವರ ವಂಚನೆಗಳ ತಿಳಿಯದ್ಹೋದೆ
- **ಅಹಹ ಮೋಸಹೋದೆನಯ್ಯ** (ಸ-೯-ಪ೨)
- ಪಂಚೇಂದ್ರಿಯಗಳು ತಮ್ಮ ದೆಸೆದೆಸೆಗೆಳೆವಾಗ ವಂಚನೆಯಿಲ್ಲದೆ ಅಡ್ಡಬರಲಾಪೆಯಾ ರಂಗ
- ನೀನೇನ ಮಾಡಲಾಪೆ ರಂಗಯ್ಯ (ಬೆ-೪೮-೨)

**೬೯೪೮. ವಂಚಿಸು** - ಮನವ ವಂಚಿಪ ಕಪಟಿಗೆ ಮೇಲೋಕವುಂಟೆ
- ಸಾಧು ಸಜ್ಜನ ಸತ್ಯಗುಣಕಿದುರುಂಟೆ (ಬೆ-೧೨೫-೩)
- ಪಂಚ ಮಹಾಪಾತಕವ ಮಾಡಿದ ಅಜಾಮಿಳನ ವಂಚಿಸಿ ಯಮ ದೂತರೆಳೆ ದೊಯ್ಯುತಿರಲು
- ಬ್ರಹ್ಮಲಿಖಿತವ ಮೀರಿ ಬಾಳ್ವರು (ಬೆ-೨೫-೨)

**೬೯೪೯. ವಂದನೆ** - ವಂದನೆ ಮಾಡಿದರೆ ಸೀರೆ ನಿಮಗೆ ಈವೆನೆಂದ
- ಸೈಯೇ ಇದು ಸೈಯೇ ಗೋಪಿ (ಬೆ-೧೦೪-೭)

**೬೯೫೦. ವಂದರಿಸು (?)** - ಬಾಲಕನ ವಂದರಿಸಿ ಬಹು ಭಾಗ್ಯವಂತನೆನಿಸಿ ಎಲ್ಲರೊಳು ಸಲಿಗೆ ನಿಲಿಸಿದಳೊ ನಿಮ್ಮರಸಿ
- ಯಾಕೆಲೊ ರಂಗ ನಿನಗಿಂತ ನಟನೆಯ ಮಾತು (ಸ-೨೧೬-೧)

**೬೯೫೧. ವಂದಿತ** - ತ್ರಿಜಗವಂದಿತ ಪಾಲ್ಗಡ ಲೊಡೆಯನ ಹಣ್ಣು
- ಹಣ್ಣು ಕೊಂಬುವ ಬನ್ನಿರಿ (ಬೆ-೧೫೭-೨)
- ವಾಸವಮುರಾಳಿ ಪರಮೇಷ್ಠಿವಂದಿತ ವೆಂಕಟೇಶನೊಲಿದುಪ್ಪವಡಿಸಯ್ಯ ಹರಿಯೆ
- ಪೂಸರನ ಜನಕನೇ (ಬೆ-೧೬೮-ಪ)
- ಭಜಿಸಿ ಬದುಕೆಲೊ ಮನುಜ ಮನಮುಟ್ಟಿ ಶ್ರೀಹರಿಯ ಅಜಸುರೇಂದ್ರಾದಿಗಳು ಆದಿವಂದಿತ ಪಾದ
- ಭಜಿಸಿ ಬದುಕೆಲೊ ಮನುಜ (ಬೆ-೩೫-ಪ)
- ಶೇಷಾವತಾರಿ ಮುನೀಶವಂದಿತ ಆದಿಕೇಶವ ಮೂರುತಿ ನಮೋ
- ರಾಮಾನುಜರೇ ನಮೋ ನಮೋ (ಬೆ-೪_೩)
- ದಾನವಾಂತಕ ಸಕಲ ದಿವಿಜ ಮುನಿ ವಂದಿತನೆ ನೀನು ಎನ್ನನು ಸಲಹದೇ ಬರಿದೆ
- ನೀನುಪೇಕ್ಷೆಯ ಮಾಡೆ (ಬೆ-೪೯-೨)
- ಯಕ್ಷ ಗಂಧರ್ವ ಅಮರೇಂದ್ರ ಮುನಿ ವಂದಿತನೆ
- ವಾಸುದೇವಾಯ ನಮೋ (ಬೆ-೯೦-೭)
- ಮಂಗಳಂ ಬುದ್ಧ ಕಲ್ಕಿಗೆ ಬ್ರಹ್ಮ ರುದ್ರೇಂದ್ರ ವಂದಿತಗೆ ಮಧುವೈರಿಗೆ
- ವಾಸುದೇವಾಯ ನಮೋ (ಬೆ-೯೦-೧೫)

**೬೯೫೨. ವಂದಿಸು** - ಎರವಿನ ಮಾತಾಪಿತ ರನುಜರೆಂಬ ಉರಿಕಾವು ಕ್ಷಯವೆಂಬ ಸರಿಗಳನು ವಂದಿಸುವೆನು
- ಎಂತಹುದೊ ನಿನ್ನಯ ಭಕುತಿ (ಸ-೪೧-೪)
- ಸೀತೆಯನು ವಂದಿಸುತೆ ಉಂಗುರವನಿತ್ತವಗೆ ದೈತ್ಯಪುರವನು ಭರದಲುರಿಸಿದವಗೆ

